ಉಷಾ ಸಾಹಿತ್ಯ ಮಾಲೆ: ೩೩–೩೪

# ಬಾಳುವೆಯ ಮಡಿಲಲ್ಲಿ

ಕೆ. ರಾಮಚಂದ್ರಾಚಾರ್

ಉಷಾ ಸಾಹಿತ್ಯ ಮಾಲೆ
ಮೈಸೂರು

ಮಾಲೆಯ ೧೯೫೨ ಫೆಬ್ರುವರಿ, ಏಪ್ರಿಲ್ ಸಂಚಿಕೆ
ಮಾಲೆಯ ಆರನೆಯ ವರುಷದ ಮೂರು ಮತ್ತು ನಾಲ್ಕನೆಯ ಕಾದಂ



[ಎಲ್ಲ ಹಕ್ಕುಗಳೂ ಲೇಖಕರವು.]

ಬೆಲೆ : ರೂ. ೩—೪—೦



ಮುದ್ರಕರು, ಪ್ರಕಾಶಕರು
**ಆರ್. ಎನ್. ಹಬ್ಬು**
ಉಷಾ ಪ್ರೆಸ್, ಓಲ್ಡ್ ಪೋಸ್ಟ್ ಆಫೀಸ್ ರೋಡ್, ಬೆ

# ಮುನ್ನುಡಿ

'ಬಾಳುವೆಯ ಮಡಿಲಲ್ಲಿ' ಕಾದಂಬರಿಯನ್ನು ಮುನ್ನುಡಿ ಇಲ್ಲದೆ ವಾಚಕರ ಮುಂದೆ ಇಡಬೇಕೆಂಬುದು ನನ್ನ ಹಂಬಲವಾಗಿತ್ತು. ಆದರೆ ಉಷಾ ಸಾಹಿತ್ಯ ಮಾಲೆಯ ಪ್ರಕಾಶಕರಾದ ಶ್ರೀ ಆರ್. ಎನ್. ಹಬ್ಬುರವರು ಪುಸ್ತಕದ ಮುದ್ರಣವನ್ನು ಪೂರ್ತಿಗೊಳಿಸಿ, 'ಮುನ್ನುಡಿಯನ್ನು ಬೇಗ ಮರುಟಪ್ಪಾಲಿಗೆ ಕಳಿಸಿರಿ' ಎಂದು ಅವಸರದ ಪತ್ರವನ್ನು ಬರೆದರು. ಆದ್ದರಿಂದ ಬರೆಯ ಬೇಕಾಯಿತು.

ಈ ಕಾದಂಬರಿಯ ಕಥಾಸರಣಿಯನ್ನು ಚಿತ್ರಿಸುವುದರಲ್ಲಿ ಕಣ್ಣಾರೆ ಕಂಡ, ನಡೆದುಹೋದ, ಕೇಳಿದ ವಿಷಯಗಳು ಕೆಲವು, ಕಲ್ಪಿಸಿದವುಗಳು ಕೆಲವು. ಇವುಗಳನ್ನೆಲ್ಲ ಒಟ್ಟುಗೂಡಿಸಿ ಸರಿಹೋಗುವಂತೆ ಕಾದಂಬರಿ ರೂಪುಕೊಟ್ಟುದು ನನ್ನ ಪ್ರಯತ್ನ. ಮನೆಯ ಬಳಕೆ ಮಾತಿನಲ್ಲೆ ಸಾಹಿತ್ಯದ ದೃಷಿ [illegible] ಂದು [illegible] ರೆದು ಪೂರ್ಣಗೊಳಿಸಿದ್ದೇನೆ. [illegible] ವರ್ಷ [illegible] ಸ ದುಡಿಯುತ್ತಿ [illegible] ಕಾದಂಬರಿ ಬರೆಯುವಲ್ಲಿ ಇದೇ ನನ್ನ [illegible] ಪ್ರಂ [illegible] ವಾಚಕರ ಮನಸೆಳೆದರೆ ನನ್ನ ಪ್ರಯತ್ನ ಸಫಲ. ಈ ಕೃತಿ [illegible] ದ ವಿಷಯ ವಿಮರ್ಶಕಾರರ ಪಾಡಿಗೆ ಬಿಟ್ಟಿದೆ.

ಇನ್ನೆರಡು ಮಾತು. ಈ ಪುಸ್ತಕ ಪ್ರಕಾಶನದ ಕಾರ್ಯದಲ್ಲಿ ಪ್ರೀತಿ ವಿಶ್ವಾಸಗಳಿಂದ ನೆರವಾದ ಮೈಸೂರಿನ 'ವಿಶ್ವಕರ್ಮ' ಮಾಸಪತ್ರಿಕೆಯ ಸಂಪಾದಕರಾದ ಬ್ರ॥ ಶ್ರೀ ಮ. ಗಂಗಾಧರಮೂರ್ತಿಗಳವರಿಗೂ, ಮಾಲೆಯಲ್ಲಿ ಸ್ವೀಕರಿಸಿ, ಮುದ್ದಾಗಿ ಮುದ್ರಿಸಿರುವ ಶ್ರೀಮಾನ್ ಆರ್. ಎನ್. ಹಬ್ಬು ಅವರಿಗೂ ನನ್ನ ಕೃತಜ್ಞತೆಗಳು ಸಲ್ಲಬೇಕು.

ಕೊನೆಯದಾಗಿ, ಕಾದಂಬರಿಯನ್ನು ಬರೆದು ಮುಗಿಸುವವರೆಗೂ ಪ್ರೋತ್ಸಾಹಿಸಿದ ಮಿತ್ರರೆಲ್ಲರಿಗೂ ನನ್ನ ಪ್ರೇಮಪೂರ್ವಕ ವಂದನೆಗಳು.

ಮಂಗಳೂರು
೩೦—೫—೫೩

ಕೆ. ರಾಮಚಂದ್ರಾಚಾರ್

# ನಮ್ಮ ಮಾತು

**'ಬಾಳುವೆಯ ಮಡಿಲಲ್ಲಿ'** ನಮ್ಮ ಮಾಲೆಯ ಈ ವರುಷದ ಮೂರು ನಾಲ್ಕನೆಯ ಕಾದಂಬರಿ. ನಮ್ಮ ಮಾಲೆಯಲ್ಲಿ ತಮ್ಮ ಈ ಕೃತಿಯನ್ನು ಕಟಿಸಲು ಅನುಮತಿ ಇತ್ತುದಕ್ಕಾಗಿ ಶ್ರೀ ಕೆ. ರಾಮಚಂದ್ರಾಚಾರ್ ಅವರಿಗೆ ಕೃತಜ್ಞತೆಗಳು.

ನಮ್ಮ ಮಾಲೆಯ ಮುಂದಿನ ಕಾದಂಬರಿ—ಸುಮಾರು ೨೦೦ ಪುಟ—ಇದೇ ಆಗಸ್ಟ್‌ನಲ್ಲಿ ಚಂದಾದಾರರಿಗೆ ತಲಪಿಸಲು ಯತ್ನಿಸುತ್ತೇವೆ.

**ಪ್ರಕಾಶಕ**

# ಬಾಳುವೆಯ ಮಡಿಲಲ್ಲಿ

## ೧

ಅಮಾವಾಸ್ಯೆಯ ರಾತ್ರಿ. ಆಕಾಶವನ್ನು ಮುತ್ತಿದ್ದ ಕತ್ತಲೆ ಲೋಕವನ್ನೂ ಮುಚ್ಚಿತ್ತು.

ಸ್ವರ್ಣ ಕೋಣೆಯೊಳಗಿನ ಕಿಟಕಿಯಿಂದ ಕತ್ತಲ ಬಾನನ್ನು ಶೂನ್ಯ ದೃಷ್ಟಿಯಿಂದ ನೋಡುತ್ತಿದ್ದಳು. ಯಾವುದೋ ಆಲೋಚನೆಯಲ್ಲಿ ಅವಳ ಮನಸ್ಸು ನೆಟ್ಟುಹೋಗಿತ್ತು. ಮುತ್ತಿನಂತೆ ಕಣ್ಣೀರ ಹನಿಗಳು ಉರುಳು ತ್ತಿದ್ದವು. ಅವಳ ಜೀವನದ ಕಷ್ಟದ ತೆರೆಗಳು ಆಲೋಚನೆಯಲ್ಲಿ ಸುಳಿಸುಳಿದು ಬಂದು ನಿಟ್ಟುಸಿರುಗಳನ್ನು ನಿಡಿದಾಗಿ ಮಾಡಿದ್ದವು. ದುಃಖದಿಂದ, ಆಲೋಚನೆ ಯಿಂದ ಅವಳು ಯಾವುದೋ ಲೋಕದಲ್ಲಿದ್ದಳು. ಮನಸ್ಸು ಶೂನ್ಯ; ದೃಷ್ಟಿ ಶೂನ್ಯ; ಎಲ್ಲವೂ ಶೂನ್ಯ. ಅವಳ ಅಂತರಂಗದ ಶೂನ್ಯದ ಛಾಯೆಯನ್ನು ಹೊರಗಿನ ಜಗತ್ತು ಪ್ರತಿಬಿಂಬಿಸುತ್ತಿತ್ತು! ಶೂನ್ಯವು ಶೂನ್ಯದೊಡನೆ ಒಂದಾಗಿ ಪ್ರಳಯ ತಾಂಡವವನ್ನಾಡುತ್ತಿತ್ತು.

ಅಷ್ಟರಲ್ಲಿ ಹಿಂದಿನಿಂದ ಅವಳ ಅತ್ತೆ ಜಾನಕೀಬಾಯಿಯವರು ಕಣ್ಣಾರಳಿಸಿ, "ಏನೇ? ಹೋಗಿ ತಿಂದ್ಕೊಂಡು ಮಲಗಲಿಕ್ಕೆ ಏನು ಧಾಡಿ? ಕರೀಲಿಕ್ಕೊಬ್ಬರು ಯಾರಾದರೂ ಬರಬೇಕೇನು? ಮಹಾರಾಣಿ! ನಿನ್ನಪ್ಪನ ಮನೀ ಗಂಟನ್ನ ಯಾರೋ ಮುಳುಗಿಸಿ ಬಿಟ್ಟ ಹಾಂಗೆ ಕಾಣಿಸುತ್ತದಲ್ಲ, ನೀನು ಹೀಗ ಕೂತು ಕೊಂಡು ಆಲೋಚಿಸೂದನ್ನ ನೋಡಿದರ" ಎಂದು ಹೊಟ್ಟೆಯೊಳಗಿದ್ದುದನ್ನೆಲ್ಲ ಹೊರಗೆ ಕಾರಿದರು.

ವಿಚಾರಲೋಕದಿಂದ ಸ್ವರ್ಣ ಎಚ್ಚತ್ತಳು. ಹೇಳುವುದು ಯಾರು, ಯಾಕೆಂಬುದು ತಿಳಿಯಿತು. ಆದರೆ ತಾನು ಅದಕ್ಕುತ್ತರಿಸುವಷ್ಟು ಶಕ್ತಳಲ್ಲ. ತಣ್ಣಗೆ ಎದ್ದು ಹೊರಟಳು. ಹೋಗುವಾಗ "ಶನಿ, ಯಾವಾಗ ಈ ಮನೆ ಮೆಟ್ಟಲಿಗೆ ಕಾಲಿಟ್ಟಿತೊ ಏನೊ, ಮನೇಲಿ ಯಾವ ರೀತೀಲಿ ನೋಡಿದರೂ ಇಳಿತ ವಿನಾ ಏರುವಿಕೆ ಇಲ್ಲವೇ ಇಲ್ಲ" ಎಂಬ ಮಾತೂ ಸ್ವರ್ಣಳ ಕಿವಿಗೆ ಬೀಳದಿರಲಿಲ್ಲ.

ನೆಟ್ಟಗೆ ಅಡಿಗೆಮನೆ ಹೊಕ್ಕಳು. ಎಲೆಯಲ್ಲಿ ಎರಡು ತುತ್ತು ಹಾಕಿಕೊಂಡು ಉಣ್ಣುವಷ್ಟರಲ್ಲಿ "ಸ್ವರ್ಣ" ಎಂದು ಕರೆವ ಧ್ವನಿ ಕೇಳಿಸಿತು.

ಮಲಗಿದ್ದ ವಿಜಯ—ಅವಳ ಗಂಡ—ಹೃದ್ರೋಗದಿಂದ ನರಳುತ್ತ, "ಸ್ವರ್ಣ, ಏನು ಮಾಡುತ್ತಿದ್ದಿ ?" ಎಂದು ಕ್ಷೀಣ ಸ್ವರದಲ್ಲಿ ಕೇಳಿದ.

"ಏನೂ ಇಲ್ಲ; ಸುಮ್ಮನೆ ಕುಳಿತಿದ್ದೆ."

"ಉಂಡೆಯಾ ?"

"ಹಾಂ! ಉಂಡೆ."

"ನಿನ್ನ ಮುಖ ಯಾಕಿಷ್ಟು ಬಾಡಿದೆ; ಕೂಗಿದಿ ಏನು ?"

"ಇಲ್ಲಲ್ಲಾ, ಎಲ್ಲಿ ಬಾಡಿದೆ."

"ನನ್ನಲ್ಲಿ ಮುಚ್ಚುಮರೆ ಮಾಡ್ತೀಯಾ ?"

"ಇ........ಲ್ಲ!" ಎನ್ನುವಷ್ಟರಲ್ಲಿ ಅವಳ ಕಣ್ಣುಗಳಲ್ಲಿ ನೀರು ಉಕ್ಕಿ ಬಂತು.

"ನೋಡಿದೆಯಾ ? ನಾನು ಸುಳ್ಳೆಂದೆನೇ. ನೀನು ನಿನ್ನ ದುಃಖವನ್ನು ನನ್ನಿಂದ ಬಚ್ಚಿಡುತ್ತಿ........ಸ್ವರ್ಣ! ನಾನೇನು ಮಾಡಲಿ ? ಹೇಳು. ನೀನೇ ಹೇಳು. ನಿನ್ನನ್ನು ಸಂತಯಿಸಲೇ ? ಅಲ್ಲಾ, ಅಮ್ಮನನ್ನು ಸಮಾಧಾನಪಡಿಸಲೇ ? ನಿನಗೆ ನಾನು ಹೇಳಬೇಕಾದ್ದು ಏನೂ ಇಲ್ಲ; ನೀನು ಎಲ್ಲವನ್ನೂ ತಿಳಿದವಳಿದ್ದೀ........ಹಾಗೆಂದು ತಾಯಿಗೆ ಬುದ್ಧಿ ಹೇಳಲೇ ? 'ನಿನ್ನೆ ಮೊಳೆತ ಮೊಳಕೆ, ನನ್ನ ಮಗು, ಇಂದು ದೊಡ್ಡವನಾಗಿಬಿಟ್ಟನೆಂದು ನನಗೆ ಬುದ್ಧಿ ಹೇಳಬರುತ್ತಾನೆ. ಅವನ ಹೆಂಡತಿ ಎಲ್ಲವನ್ನೂ ಬಲ್ಲವಳಂತೆ; ವಿದ್ಯಾವಂತಳಂತೆ. ಹತ್ತು ತಿಂಗಳು ಹೊತ್ತು ಹೆತ್ತು, ಸಾಕಿ ಸಲಹಿ, ಇಷ್ಟು ದೊಡ್ಡದು ಮಾಡಿ, ಮದುವೆ ಮಾಡಿ ಬಿಟ್ಟ ಅನಂತರ, ಮಕ್ಕಳು ತಂದೆ ತಾಯಿಗಳಿಗೆ ಬುದ್ಧಿ ಹೇಳಬರುತ್ತಾರೆ. ಏನಿದು ಕಲಿಯುಗ!' ಎಂದು ಹೇಳುವುದನ್ನು ನೀನೇ ನಿನ್ನ ಕಿವಿಯಾರೆ ಕೇಳಿರುವೆ........ಹುಟ್ಟಿ ಹೊರ ಬರಬೇಕಾದರೆ ಹೆತ್ತವ್ವನನ್ನು ಪರಂಧಾಮಕ್ಕಟ್ಟಿದವ ನಾನು! ಹೆರುವ ಭಾರವನ್ನು ಹೊತ್ತಳೇ ವಿನಾ ಸಾಕುವ ಭಾರವನ್ನು ಹೊರಲಿಲ್ಲ, ನನ್ನ ತಾಯಿ. ಅದನ್ನು ಹೊತ್ತು ನಡೆಸಿದವಳು ಈ ಚಿಕ್ಕಮ್ಮ—ಅಲ್ಲ ಅಮ್ಮ !........ಕಾರಣ, ತಾಯಿಗೆ ನಾನು ಇನ್ನು ಯಾವ ತರದ ಬುದ್ಧಿಯನ್ನೂ ಹೇಳಲಾರೆ. ಇನ್ನು ನಾನು ನಿನ್ನ ಪಕ್ಷ

ವಹಿಸಿ ಏನಾದರೂ ಮಾತನಾಡಿದೆನೇ ಆದರೆ 'ಹೆಂಡತಿಯ ಮಾತು ಕೇಳಿ ಆಡುತ್ತಿದ್ದಾನೆ' ಎಂದು ಇನ್ನಷ್ಟು ನಿನಗೇ ಕಷ್ಟ ಹೆಚ್ಚೀತು! ಅಲ್ಲದೆ, ಬದುಕೋ ಸಾವೋ ಎಂದಿರುವ ನಾನು ಜಗಳಕ್ಕೆ ನಿಲ್ಲುವುದು ಅಷ್ಟು ಒಳ್ಳೆಯ ದಾಗಿ ತೋರುವುದಿಲ್ಲ. ಕಾಯಿಲೆಯಾಗಿ ಮಲಗಿದವನಿಗೆ ಹೆಂಡತಿಯ ಪಕ್ಷ ವಹಿಸಿ ಜಗಳವಾಡಲಿಕ್ಕೆ ಆಗುತ್ತಿದೆಯೇ ಎಂದಾದರು!........ಆದ್ದರಿಂದ ಎಲ್ಲ ವನ್ನೂ ನೀನು ಸಹಿಸಿಕೊಳ್ಳಲೇ ಬೇಕು. ಅದರಿಂದ ನಿನಗೆ ಯಾವ ತರದ ಕೇಡೂ ಒದಗದು. ನಿನ್ನಂತಹವರನ್ನು ಆದರಿಸಲು ದೇವರು ಬರಬೇಕು. ಇದಕ್ಕಿಂತಲೂ ಹೆಚ್ಚೇನು ಹೇಳಲಿ........ನೀರು!"

ಸ್ವರ್ಣ ತಂದಿದ್ದ ನೀರನ್ನು ಕೊಡದೆ ಒಳಗೆ ಹೋಗಿ ಹಾಲು ತಂದು ಕೊಟ್ಟಳು. ಅವನು ಚೇತರಿಸಿಕೊಂಡನು.

"ಸ್ವರ್ಣಾ, ನಾನು ಮಾತನ್ನು ಎಲ್ಲಿ ನಿಲ್ಲಿಸಿದೆ?"

"ಚಿಂತೆಯಿಲ್ಲ. ಸುಮ್ಮನೆ ಮಾತನಾಡಬೇಡಿ, ಅಶಕ್ತತೆ ಹೆಚ್ಚುವುದು. ಡಾಕ್ಟರ್ ಹೇಳಿದ್ದಾರೆ...."

"ಹುಂ! ಡಾಕ್ಟರ್!........ನನಗಿನ್ನು ಹೆಚ್ಚು ದಿನದ ಬಾಳುವೆಯಿಲ್ಲ ಸ್ವರ್ಣಾ........"

"ಛೀ! ಅಂಥಾ—ಹಾಗೆಲ್ಲ ಮಾತನಾಡಬೇಡಿ" ಎಂದು ಕಂಬನಿ ತುಂಬಿದವಳಾಗಿ ಉತ್ತರವಿತ್ತಳು ಸ್ವರ್ಣ.

"ಸ್ವರ್ಣ, ಅಳಬೇಡ; ಎಲ್ಲಾ ಬರೇ ಒಂದು ನಾಟಕ! ಬೊಂಬೆಯಾಟ! ಇದಕ್ಕೆಲ್ಲಾ ಅಳಬಾರದು.—ಹೋಗಿ ಮಲಗಿಕೊ, ಹೋಗು. ನಾನೂ ಸ್ವಲ್ಪ ಕಣ್ಣು ಮುಚ್ಚುತ್ತೇನೆ. ದೇವರ ಇಚ್ಛೆ ಹೇಗೆ ಇದೆಯೋ ಹಾಗೆ ಆಗಲಿ!"

ಸ್ವರ್ಣ ಎದ್ದು ಅಡಿಗೆ ಕೋಣೆಗೆ ಕಾಲಿಟ್ಟಳು.

"ಅಲ್ಲೆಲ್ಲಿಗೆ ಹೋಗ್ತಿ?"

"ಇದೋ ಈಗ ಬಂದೆ. ಅಡಿಗೆ ಕೋಣೆಯ ಬಾಗಿಲು ಮುಚ್ಚಿಬಿಟ್ಟು ಬರ್‍ತೇನೆ" ಎಂದು ಹೇಳಿ ಸ್ವರ್ಣ ಒಳಗೆ ಹೋಗಿ, ಉಂಡ ಎಲೆಯನ್ನು ತೆಗೆದು ಬಿಸಾಡಿ, ಗಂಡನು ಮಲಗಿದ್ದ ಎಡಗಡೆಯಲ್ಲಿದ್ದ ಇನ್ನೊಂದು ಮಂಚದ ಮೇಲೆ ಮಲಗಿದಳು. ಅದಕ್ಕೆ ಮೊದಲು ಗಂಡನನ್ನೊಮ್ಮೆ ನೋಡಿದಳು. ಅವನು ಕಣ್ಣು ಮುಚ್ಚಿ ಮಲಗಿದ್ದುದನ್ನು ನೋಡಿ, 'ನಿದ್ದೆ ಬಂದಿರಬಹುದು,

ಮಲಗಲಿ, ಕರೆದರೆ ಶ್ರಮವಾಗಬಹುದು' ಎಂದು ಕರೆಯದೆ ದುಪ್ಪಟಿಯನ್ನು ತೆಗೆದು ಗಂಡನ ಕಾಲುಗಳನ್ನು ಮುಚ್ಚಿ ತಾನೂ ಮಲಗಿಕೊಂಡಳು.

ಅಂದು ಅದೇನೋ ಬೆಳಿಗ್ಗೆ ಗಂಟೆ ಎಂಟಾಗಿದ್ದರೂ ಮೋಡಗಳ ತಡೆ ಯಿಂದ ಬಿಸಿಲು ಬಿದ್ದಿರಲಿಲ್ಲ. ಮನೆಯಲ್ಲಿ ಸ್ವರ್ಣಳ ಹೊರತು ಬೇರೆ ಯಾರೂ ಎದ್ದಿರಲಿಲ್ಲ. ಜಗಲಿ ಗುಡಿಸಿ, ಸಗಣಿ ಚಿಮುಕಿಸಿ, ಮುಸುರೆ ತೊಳೆದು, ಗಂಡನಿ ಗಾಗಿ ಹಾಲು ಕಾಯಿಸುತ್ತಿದ್ದಳು—ಸ್ವರ್ಣ. ಇಷ್ಟಾಗುವಾಗ ಜಾನಕೀಬಾಯಿ ಯವರ ಸವಾರಿ ಚಾಪೆ ಬಿಟ್ಟು ಎದ್ದು ಅಡಿಗೆ ಕೋಣೆಗೆ ಬಂದಿತು. ಮುಖಕ್ಕೆ ತುಸು ನೀರು ಹಾಕಿಕೊಂಡಾದರೂ ಬರಬಾರದಿತ್ತೋ ಏನೊ! ಆದರೂ ಚಿಂತೆ ಯಿಲ್ಲ, ಬಂದರೆ ಹಾಗೇ ಹಿಂದೆ ಹೋಗುವುದಕ್ಕಿದೆಯೆ! ಸೊಸೆಯಲ್ಲಿ ಒಂದು ತಪ್ಪು ಹುಡುಕುವುದು ಅತ್ತೆಯ ಕರ್ತವ್ಯವೆಂದು ತಿಳಿದವರು, "ಏನೇ? ಇನ್ನೂ ಹಾಲು ಕಾಸಿ ಆಗ್ಲಿಲ್ವೇನೆ?" ಎಂದುಬಿಟ್ಟು, ಹೊಸ್ತಿಲ ಕಡೆಗೆ ಮುಖ ತಿರುಗಿಸಿ ಕೊಂಡು ಹೋದರು.

ಜಾನಕೀಬಾಯಿ ಸುಬ್ಬರಾಯರೊಂದಿಗೆ ಹಾಳು ಹರಟೆ ಕೊಚ್ಚುತ್ತಾ ಜಗಲಿಯಲ್ಲಿ ವೀಳ್ಯೆ ತಟ್ಟಿ ತಿನ್ನುತ್ತಿದ್ದರು. ಸುಬ್ಬರಾಯರು ಹುಕ್ಕಾ ಎಳೆಯು ತ್ತಿದ್ದರು. ಸುಬ್ಬರಾಯರಿಗೆ ಕಾಲಿಗೆ ವಾತರೋಗದ ಬಾಧೆಯಿದ್ದುದರಿಂದ ಅವರು ಮನೆ ಬಿಟ್ಟು ಹೊರಡುವುದು ಬಹಳ ಅಪರೂಪ.

ಸ್ವರ್ಣ ಎರಡು ತಟ್ಟೆಗಳಲ್ಲಿ ಫಲಾಹಾರ, ಮತ್ತೆರಡು ದೊಡ್ಡ ಲೋಟ ಗಳಲ್ಲಿ ಕಾಫಿ ತುಂಬಿ ಇಟ್ಟು ಹೊರಗೆ ಕುಳಿತಿದ್ದ ಅತ್ತೆಮಾವಂದಿರ ಎದುರು ತಂದಿರಿಸಿದಳು.

"ಸ್ವರ್ಣಾ, ವಿಜಯನಿಗೆ ಮಧ್ಯಾಹ್ನಕ್ಕೆ ಔಷಧಿ ಇದೆಯೇನಮ್ಮಾ?"

"ಇಲ್ಲ, ಮಾವ. ಬೆಳಿಗ್ಗೆನೆ ಮುಗಿದಿದೆ."

"ಹಾಗಾದರೆ ಇದನ್ನು ತೆಗೆದಿಡು. ನಾನು ಹೋಗಿ ಔಷಧೀನೂ ತೊಗೊಂಡು, ಹಾಗೆ ಡಾಕ್ಟರ್‌ರನ್ನೂ ಕರೆತರ್‍ತೀನಿ."

"ಬೇಡ ಮಾವ, ನಿಮಗೆ ನಡೀಲಿಕ್ಕಾಗದು. ಸ್ವಲ್ಪ ಮತ್ತೆ ನಾನೇ ಹೋಗಿ ತರ್‍ತೀನಿ. ನೀವು ಕಾಫಿ ಕುಡಿಯಿರಿ."

"ರಾತ್ರಿಯೆಲ್ಲಾ 'ಅಯ್ಯೋ, ಕೊಯ್ಯೋ' ಅಂತ ನರಳುತ್ತಿದ್ದಿರಿ, ಈಗ ಎರಡು ಹರದಾರಿ ದೂರವಿರುವ ಡಾಕ್ಟರನ್ನ ಕರ್‍ತರ್‍ತೀನೀಂತ ಏಳ್ತೀರಲ್ಲಾ....

ಏಕೆ—ಅವಳು ಹೋಗಿ ತರೋದಿಲ್ಲೇನು ?" ಎಂದು ಅತ್ತೆಯು ಬಾಯೊಳಗಿನ ನಂಜು ಹೊರಬಿತ್ತು.

ಸುಬ್ಬರಾಯರು ಪತಿವ್ರತಾಶಿರೋಮಣಿಯಾದ ಜಾನಕೀಬಾಯಿಯವರ ಮಾತಿಗೆ ಅಲ್ಪಸ್ವಲ್ಪ ಹೆದರುತ್ತಿದ್ದರೆಂದರೆ ತಪ್ಪಾಗಲಾರದು.

ಹುಣಸೂರು ಗ್ರಾಮದಲ್ಲಿ ಸಾಧಾರಣ ಮಟ್ಟಿಗೆ ದೊಡ್ಡ ಮನೆಯಲ್ಲಿ ಉಚ್ಚ ತರಗತಿಯಲ್ಲಿದ್ದವರೆಂದರೆ ಸುಬ್ಬರಾಯರ ಮನೆಯವರೇ. ದೊಡ್ಡ ಮನೆ ಸುಬ್ಬರಾಯರು ಎಂದರೆ ಸಾಕು, ಎಲ್ಲರಿಗೂ ಗೊತ್ತು ಆ ಗ್ರಾಮದಲ್ಲಿ. ಹಣವೇ ಗುಣವೆನ್ನುವ ಈಗಿನ ಕಾಲದಲ್ಲಿ ಹಣವಿದ್ದವನೇ ಆಳರಸ.

ಅತ್ತೆಮಾವಂದಿರು ಉಪಾಹಾರ ತೆಗೆದುಕೊಂಡ ಬಳಿಕ ಸ್ವರ್ಣ ಆ ತಟ್ಟೆಗಳನ್ನು ತೊಳೆದಿಟ್ಟು ಡಾಕ್ಟರರಲ್ಲಿಗೆ ಹೋಗುವುದನ್ನು ಅತ್ತೆಮಾವಂದಿರಿಗೆ ತಿಳಿಸಿ ಹೊರಟಳು.

ಜಾನಕೀಬಾಯಿ ಮೆಲ್ಲಗೆ ಕುಳಿತಲ್ಲಿಂದ ಎದ್ದು ವೀಳ್ಯೆಯನ್ನು ಉಗುಳಿ ಹೃದ್ರೋಗದಿಂದ ನರಳುತ್ತಿದ್ದ ಮಗನನ್ನು ನೋಡಲು ಅವನಿದ್ದಲ್ಲಿಗೆ ಬಂದು, "ವಿಜಯಾ, ಎದೆನೋವು ಹೇಗಿದೆ ಅಣ್ಣಯ್ಯ, ಈಗ ?" ಎಂದು ಕೇಳಿದರು.

"ಚೆನ್ನಾಗಿದೆ, ಅಮ್ಮಾ. ಇನ್ನೇನು ಸ್ವಲ್ಪ ; ಬೇಗ ಗುಣವಾದೀತು !" ಅಷ್ಟರಲ್ಲಿ ಸುಬ್ಬರಾಯರು ಆಗತಾನೆ ಟಪ್ಪಾಲು ಪೇದೆ ತಂದುಕೊಟ್ಟ ಪತ್ರವನ್ನು ಕೈಯಲ್ಲಿ ಹಿಡಿದುಕೊಂಡು ವಿಜಯನಿದ್ದಲ್ಲಿಗೆ ಬಂದರು.

"ಮಗೂ, ವಿಜಯಾ, ಇದನ್ನೊಮ್ಮೆ ಓದಪ್ಪಾ, ಅಕ್ಷರ ಬಹಳ ಚಿಕ್ಕದಾಗಿದೆ; ನನ್ನ ಕಣ್ಣಿಗೆ ಕಾಣಿಸೋದೆ ಇಲ್ಲ" ಎಂದು ಸುಬ್ಬರಾಯರು ಪತ್ರವನ್ನು ತಂದು ವಿಜಯನ ಕೈಗಿತ್ತರು. ವಿಜಯನು ಆ ಕಟ್ಟೋಲೆಯನ್ನು ಬಿಚ್ಚಿ ಅದರೊಳಗಿಂದ ಪತ್ರವನ್ನು ಹೊರತೆಗೆದು ಓದಲಾರಂಭಿಸಿದನು.

ಮದರಾಸು

ತೀ|| ಮತ್ತು ಮಾತೋಶ್ರೀಯವರ ಚರಣಾರವಿಂದಗಳಲ್ಲಿ,
ವಸಂತಿ ಬೇಡಿಕೊಳ್ಳುವ ಆಶೀರ್ವಾದಗಳು.

ಇಲ್ಲಿ ಎಲ್ಲರೂ ಕ್ಷೇಮ. ಅಣ್ಣನ ಅಸೌಖ್ಯವನ್ನು ಕೇಳಿ ಬಹಳೇ ವ್ಯಸನವಾಯಿತು. ಕಿಶೋರನು ಬೇಸಿಗೆಯ ರಜೆ ಸಿಕ್ಕಿ ಮನೆಗೆ ಬರಲು

ಹೊರಡುತ್ತಲಿದ್ದಾನೆ. ನಾನೇ ಹಿಡಿದು ನಿಲ್ಲಿಸಿದ್ದೇನೆ—ಅವರಿಗೆ ಸಂಬಳ ಬರಲಿ ನಾನೂ ಬರುತ್ತೇನೆ ಅಂತ. ಇದೇ ಹನ್ನೆರಡನೇ ತಾರೀಕಿನ ದಿವಸ ನಾನೂ ಕಿಶೋರನೊಂದಿಗೆ ಹೊರಡುತ್ತೇನೆ. ಅವರಿಗೆ ಈಗ ಬರುವುದು ಅಶಕ್ಯ. ಬೇರೆ ವಿಶೇಷವೇನೂ ಇಲ್ಲ.

ಇಂತಿ, ಬೇಡಿಕೊಳ್ಳುವ ಆಶೀರ್ವಾದಗಳು,

**ವಸಂತಿ**

ವಿಜಯ ಪತ್ರವನ್ನೋದಿ ಒಂದು ಬಿಸಿಯುಸಿರು ಬಿಟ್ಟನು. ಆ ನಿಟ್ಟುಸಿರು ಬಹಳ ನಿರಾಶೆಯದು. ಆದರೂ ತನ್ನ ಸೋದರ-ಸೋದರಿ—ಕಿಶೋರ-ವಸಂತಿಯರು ಬರುವುದು; ಸ್ವಲ್ಪ ಹುಸಿನಗುವಿನಿಂದ ಸಂತೋಷವನ್ನು ಸೂಚಿಸಿದ. ಮನಸ್ಸಿನಲ್ಲಿ ವಸಂತಿ ಬರುವುದು ಬೇಕಿರಲಿಲ್ಲ. ಆದರೂ ಅವಳು ಮದುವೆಯಾಗಿ ಗಂಡನ ಮನೆಯಲ್ಲಿದ್ದುದರಿಂದ ಒಳ್ಳೇ ಬುದ್ಧಿ ಬಂದಿರಬಹುದು! ಎಂದುಕೊಂಡ ಮನಸ್ಸಿನೊಳಗೆ. ಆದರೆ ಕಿಶೋರನೆಂದರೆ ವಿಜಯನಿಗೆ ಅದೇನೋ ಒಂದು ತರದ ಸಂತಸ. ಬರುವ ಕಿಶೋರನು ಬಿ. ಎ., ಕೊನೆಮುಟ್ಟಿಸಿ ಬರುತ್ತಿರುವುದೇ ಕಾರಣ.

ಸ್ವರ್ಣಳಿಗೆ ಮೈದುನ-ನಾದಿನಿಯರ ಬರುವಿಕೆಯಿಂದ ಇರಲಾಗಲಿ ನಿಲ್ಲಲಾಗಲಿ ಒಂದಿಷ್ಟೂ ಸಮಯ ಸಿಗದೆ, ತನ್ನ ಹೊಟ್ಟೆಗಿಲ್ಲದಿದ್ದರೂ, ರೋಗಿಯಾದ ಗಂಡನನ್ನು ಕೂಡ ಅತ್ತೆಯ ಭಯದಿಂದ ಗಣ್ಯಮಾಡದೆ, ಅವರಿಗೆ ತಿಂಡಿ ತೀರ್ಥಗಳನ್ನು ತಯಾರು ಮಾಡುವುದರಲ್ಲಿ ಒಂದಾಗಿದ್ದಳು. ಒಂದಿಷ್ಟು ಅಶ್ರದ್ಧೆ ಎಲ್ಲಾದರೂ ತೋರಿದರೆ ಎಲ್ಲಿ 'ತನ್ನ ಗಂಡನ ತಮ್ಮನೂ ತಂಗಿಯೂ ಬರುವಂತಿದ್ದರೆ ಹಾಗೆ ಮಾಡುತ್ತಿದ್ದಳೇ!' ಎಂಬ ಮಾತು ಎದ್ದುಬಿಡುತ್ತದೋ ಎಂಬುದೇ ಆ ಭಯ! ಸ್ವರ್ಣಳ ಕುರಿತು ವಿಜಯ ಮನದಲ್ಲಿ ಕೊರಗುತ್ತಿದ್ದನಾದರೂ ಎಲ್ಲವೂ ಅವರವರ ಪ್ರಾಲಬ್ಧವೆಂದು ತಿಳಿದುಕೊಂಡು ಮೌನವ್ರತವನ್ನಾಚರಿಸಿಬಿಡುತ್ತಿದ್ದನು. ಆದರೂ ಎಲ್ಲವನ್ನೂ ನೋಡತಕ್ಕವನೊಬ್ಬನು ಇಲ್ಲದೆ ಹೋಗುವನೇ! ಆತನು ಅತ್ತೆಯಾದರೇನು ಸೊಸೆಯಾದರೇನು ಅಥವಾ ಮಹಾರಾಜನೇ ಆದರೇನು? ಅವರವರು ಮಾಡಿದ ತಪ್ಪಿಗೆ ತಕ್ಕ ದಂಡನೆಯನ್ನು ಅವನು ಕೊಟ್ಟೇ ಕೊಡುವನು.

ಅಕ್ಕನನ್ನು ಕೂಡಿಕೊಂಡು ತಮ್ಮನು ಮನೆಯನ್ನು ಪ್ರವೇಶಿಸಿದನು.

ತಾಯಿ ಹೋಗಿ ಮಗಳನ್ನು ಸ್ವಾಗತಿಸಿದಳು. ಕಿಶೋರನು ಬಂದವನೇ ಆರಾಮಾಸನದಲ್ಲಿ ಬಿದ್ದುಬಿಟ್ಟನು. ಪಾಪ, ಬಡ ಸ್ವರ್ಣ ಪತಿಯ ಪಾರ್ಶ್ವದಲ್ಲಿ ಕುಳಿತು ಅವನ ಹೃದಯವನ್ನು ಮೆಲ್ಲನೆ ತಡವುತ್ತಿದ್ದಳು. ಇತ್ತೀಚೆಗೆ ವಿಜಯನ ಹೃದ್ರೋಗ ವರ್ಧಿಸುತ್ತಿದ್ದುದನ್ನು ನೋಡಿ ಒಳಗೊಳಗೆ ಬೆಂದು ಬೆಂಡಾಗುತ್ತಿದ್ದಳಾದರೂ ತನ್ನ ದುಃಖವನ್ನು ಬಹಿರಂಗಪಡಿಸದೆ ಮನದೊಳಗೇ ಇಟ್ಟುಕೊಂಡಿದ್ದಳು, ಸ್ವರ್ಣ.

ಒಂದು ತಾಸು ಕಳೆದುಹೋಗಿದ್ದರೂ ತಂಗಿಗಾಗಲಿ ತಮ್ಮನಿಗಾಗಲಿ ಅಣ್ಣನ ವಿಚಾರ ಬರಲೇ ಇಲ್ಲ. ಅಣ್ಣನ ಅನಾರೋಗ್ಯವನ್ನು ಕೇಳಿ ವ್ಯಾಕುಲಗೊಂಡು ಮದರಾಸಿನಿಂದ ಓಡಿಬಂದ ತಂಗಿ ಇವಳೆ! ಒಂದೇ ಗರ್ಭದಿಂದ ಬಂದಿದ್ದ ತಮ್ಮನಾಗಲಿ ತಂಗಿಯಾಗಲಿ ಆಗಿರುತ್ತಿದ್ದರೆ!....

"ಸ್ವರ್ಣಾ...."

"ಬಂದೆ, ಅತ್ತೆ."

"ಎಲ್ಲಿ ಹೋಗಿದೀಯೆ? ಏನಾದರೂ ಇದ್ದರೆ ತಂದುಕೊಡೆ."

ಗಂಡನ ಸನಿಯದಿಂದ ಎದ್ದು ಸ್ವರ್ಣ ಅಡಿಗೆಕೋಣೆಗೆ ಹೋದಳು. ಹೋಗುವಾಗ "ಯಾವಾಗ ನೋಡಿದರೂ ಅವನ ಹತ್ತಿರ ಕೂತುಕೊಂಡು ಎದೆ ಉಜ್ಜುತ್ತ ಅದು ಮಾಡುತ್ತ ಇದು ಮಾಡುತ್ತ, ಅವನ ಕಾಯಿಲೆಯನ್ನು ಹೆಚ್ಚಿಸುತ್ತಿದ್ದಾಳೆ; ಏನು ಮಾಡುವುದು ಎಂಬುದೇ ಗೊತ್ತಿಲ್ಲಾಗಿದೆ. ನಾನೂ ನೋಡಿದೆ, ಈ ಪ್ರಾಯದೊಳಗೆ ಎಷ್ಟೋ ಗಂಡಹೆಂಡಿರನ್ನು. ಗಂಡಂದಿರಿಗೆ ಕಾಯಿಲೆ ಬರುತ್ತೆ, ಹೆಂಡಿರು ಬಾಡಿದ ಹೂವಿನ ಹಾಗೆ ಇರುತ್ತಾರೆ. ಆದರೆ ಇಂಥ ಗಂಡ ಗಂಡ-ಹೆಂಡಿರನ್ನ ನಾನು ಕಂಡಿಲ್ಲ!...." ಎಂದು ಮುಂತಾದ ಮಾತುಗಳನೇಕ ಕೇಳಿಸದಿರಲಿಲ್ಲ. ಹಿಂತಿರುಗಿ ಹೋಗಿ 'ಈಗಲಾದರು ಕಂಡಿರಷ್ಟೆ!' ಎಂದು ಸ್ವರ್ಣ ತನ್ನ ಅತ್ತೆಯನ್ನು ಕೇಳಬಹುದಿತ್ತು. ಆದರೆ ಅವಳು ಹಾಗೆ ಮಾಡಲಿಲ್ಲ. 'ದೇವರೆ! ಎಲ್ಲವನ್ನೂ ನೀನೇ ನೋಡಿಕೋ!' ಎಂದು ಸುಮ್ಮನಿದ್ದುಬಿಟ್ಟಳು. ಅವಳಿಗಾಗ ಜಗಳ ಮಾಡಿಕೊಂಡು ಕುಳಿತುಕೊಳ್ಳುವ ಸಮಯವಾಗಿರಲಿಲ್ಲ. ಅಂತೂ ಬೇಕಿರಲಿಲ್ಲ. ಅವಳಿಗೆ ಬೇಕಾಗಿದ್ದುದು ಗಂಡ. ಆತ ಹೇಗಾದರೂ ಗುಣಮುಖನಾಗಿ ಎದ್ದರೆ ಸಾಕಾಗಿತ್ತು. ಅದನ್ನೇ ಅವಳು ಸದಾ ಬಯಸಿಕೊರಗುತ್ತಿದ್ದಳು; ದೇವರನ್ನು ಪ್ರಾರ್ಥಿಸುತ್ತಿದ್ದಳು. ಲೋಕದಲ್ಲಿ ಎಲ್ಲರಿಗೂ

ಒಳ್ಳೆಯವರಾಗಿ ಇರುವುದು ಯಾರಿಂದಲಾದರೂ ಸಾಧ್ಯವಿದೆಯೇ? ಸ್ವರ್ಣಳಿಗದು ಗೊತ್ತಿತ್ತು!

ಉಪಾಹಾರವಾದನಂತರ ತಂಗಿಗೆ ಮೆಲ್ಲಗೆ ಅಣ್ಣನ ಜ್ಞಾಪಕ ಬಂದಿತೇನೋ!—ಕಿಶೋರನನ್ನು ಕೂಡಿಕೊಂಡು ಅಣ್ಣನನ್ನು ನೋಡಲು ಎದ್ದು ಬಂದಳು.

"ಅಣ್ಣಾ, ಏನಣ್ಣಾ! ಹೇಗಿದೇಣ್ಣಾ ಈಗ ಎದೆ ನೋವು? ಸ್ವಲ್ಪ ಸುಮಾರಾಗಿದೇನು?"

"ಯಾರದು? ವಸಂತೀ! ಬಾಮ್ಮ, ಬಾ. ಯಾವಾಗ ಬಂದಿ?"

"ಇದ್ಹೊ, ಈಗತಾನೆ ಬಂದೆನಣ್ಣಾ."

"ಕುಳಿತುಕೊ. ಕಿಶೋರನೆಲ್ಲಿ?"

"ಇಲ್ಲೇ ಇದ್ದೇನಣ್ಣಾ" ಎಂದು ಕಿಶೋರನೆಂದ.

"ಪರೀಕ್ಷೆಯಲ್ಲಿ ಚೆನ್ನಾಗಿ ಮಾಡಿದ್ದೀಯೇನು?"

"ಚೆನ್ನಾಗಿ ಮಾಡಿದ್ದೀನಣ್ಣಾ."

ಹೀಗೆ ಹತ್ತು ಹದಿನೈದು ದಿನಗಳು ಕಳೆದವು. ಸ್ವರ್ಣ ಎರಡು ಮೂರು ದಿವಸಕ್ಕೊಮ್ಮೆ ಡಾಕ್ಟರರಲ್ಲಿಗೆ ಹೋಗಿ ಗಂಡನಿಗೆ ಔಷಧಿ ತರುವಳು. ಆದರೆ ವಿಜಯನ ರೋಗ ಮಾತ್ರ ಐದಾರು ದಿವಸ ಗುಣಮುಖವಾಗಿ ಕಂಡರೆ ತಿರುಗಿ ನಾಲ್ಕೈದು ದಿವಸ ಜೋರಾಗುವುದು. ಹೀಗಾಗಿ ಸ್ವರ್ಣಳ ಮನಸ್ಸಿಗೆ ನೆಮ್ಮದಿ ಸಿಗುವುದು ಕಷ್ಟದ ಮಾತ್ರವಲ್ಲ, ಕನಸಿನ ಮಾತಾಗಿ ಪರಿಣಮಿಸಿತು.

ಒಂದು ದಿನ ಅದೇಕೋ ಡಾಕ್ಟರಲ್ಲಿಗೆ ಹೋದ ಸ್ವರ್ಣ ಹಿಂತಿರುಗಲು ಸ್ವಲ್ಪ ತಡವಾಯಿತು. ಮನೆಯಲ್ಲಿ ತಾಯಿ-ಮಗಳ ವಿಷದೆದೆಗಳು ಏನೇನೋ ತಪ್ಪು ಭಾವನೆಗಳನ್ನು ಮಾಡಿಕೊಳ್ಳುತ್ತಿದ್ದವು.

"ಅಮ್ಮಾ, ಅತ್ತಿಗೆ ಹೋದವರು ಇನ್ನೂ ಬರಲಿಲ್ವೇ? ಇಷ್ಟು ಹೊತ್ತು ಏನು ಕೆಲಸ ಅಲ್ಲಿ? ಹೋಗುವುದು—ಮದ್ದು ತಗೊಂಡು ಬರುವುದು. ಅದಕ್ಕೆ ಇಷ್ಟು ಹೊತ್ತು ಬೇಕೆ? ನಾಳೆಯಿಂದ ಅವರು ಬೇಡ; ಕಿಶೋರ ಹೋಗಿ ತರಲಿ."

"ಹೌದು. ಅದೇ ಉಚಿತ ಅನ್ನಿಸ್ತದೆ ನನಗೂ."

"ಮನೆಯಲ್ಲಿ ಅಡಿಗೆ ಆಗಲಿಲ್ಲ ಏನಿಲ್ಲ...."

" ಅಕ್ಕೀನೂ ಹಾಕದೇನೆ ಹೋಗಿದ್ದಾಳೋ—ಏನು ಕರ್ಮವೋ ? "

" ಅಡಿಗೆ ಮಾಡಿಟ್ಟೇ ಹೋಗಿದ್ದಾರೆ. ಪದಾರ್ಥ ಮಾತ್ರ ಏನೂ.... ಅಮ್ಮಾ, ಅತ್ತಿಗೆ ಬಂದರು. ಓಡೋಡಿಕೊಂಡು ಬರ್‍ತಿದ್ದಾರೆ."

" ಸ್ವರ್ಣಾ, ಏನೇ ಇಷ್ಟು ಹೊತ್ತು ? ಗಂಟೆ ಹನ್ನೆರಡಾಗಲಿಕ್ಕಾಯ್ತು. ಅಲ್ಲಾ, ಮದ್ದು ಇಸ್ಕೊಂಡು ಬರ್‍ಲಿಕ್ಕೆ ಇಷ್ಟು ಹೊತ್ತು ಬೇಕೇನೆ ? "

" ಡಾಕ್ಟರರು ಅಲ್ಲಿ ಇರ್‍ಲಿಲ್ಲ, ಅತ್ತೆ ; ಎಲ್ಲಿಗೋ ಹೋಗಿದ್ದರು ; ಅದಕ್ಕೇ ಸ್ವಲ್ಪ ಕಾದು ನಿಂತೆ ; ಅದೇ ಸ್ವಲ್ಪ ಹೊತ್ತಾಯ್ತು."

" ಹೂಂ ! ಹೂಂ ! ಸಾಕು. ರಾಮಾಯಣ ಹೇಳಬ್ಯಾಡ. ಎಲ್ಲಾ ಗೊತ್ತಿದೆ. ನಾಳೆನಿಂದ ಡಾಕ್ಟರಲ್ಲಿಗೆ ಕಿಶೋರ ಹೋಗ್ತಾನೆ ; ನೀನು ಹೋಗುವುದು ಬೇಡ."

" ಹಾಗೆ ಆಗಲಿ, ಅತ್ತೆ."

ಕಿಶೋರನು ಮದ್ದು ತರುವುದಕ್ಕಾರಂಭಿಸಿದಂದಿನಿಂದ ವಿಜಯನ ಹೃದ್ರೋಗ ಒಂದೇ ಸವನೆ ಹೆಚ್ಚಾಗಲಾರಂಭಿಸಿತು. ಅವನು ಡಾಕ್ಟರಲ್ಲಿಗೆ ಹೋದರೆ, ನೋವು ಹೇಗಿದೆ, ಕಡಿಮೆಯಾಗಿದೆಯೋ ಹೆಚ್ಚಾಗಿದೆಯೋ ಎಂಬುದರ ವಿಷಯವಾಗಿ ಏನನ್ನೂ ಹೇಳದೆ, ದಿನಾಲು ' ಹಾಗೇ ಇದೆ ; ಹಾಗೇ ಇದೆ ' ಎಂದು ಹೇಳಿ ಅವರು ಕೊಟ್ಟದ್ದನ್ನು ತಂದು ಇಲ್ಲಿ ಕೊಡುತ್ತಿದ್ದ. ಹಾಗೆ ಸೇವಿಸುತ್ತ ಬಂದ ಔಷಧಿಯು ರೋಗವನ್ನು ಹೆಚ್ಚಿಸಿಬಿಟ್ಟಿತು. ರಾತ್ರಿ ಹಗಲು ಎನ್ನದೆ ಗಂಡನ ಪಕ್ಕದಲ್ಲಿ ಕುಳಿತು ಅವನ ಶುಶ್ರೂಷೆ ಮಾಡುತ್ತಿದ್ದಳು, ಸ್ವರ್ಣ.

ಸುಖಕ್ಕೊಂದು ದುಃಖವೂ, ದುಃಖಕ್ಕೊಂದು ಸುಖವೂ ಪ್ರಪಂಚದಲ್ಲಿ ಇದ್ದದ್ದೇ ಅಲ್ಲವೆ ? ಸುಖದುಃಖಗಳು ಮನುಷ್ಯನಿಗಾಗಿಯೇ ಕಟ್ಟಿಟ್ಟ ಬುತ್ತಿಯಾಗಿದೆ. ಮಾನವ ಜೀವನದ ಹಾಸುಹೊಕ್ಕಾಗಿವೆ. ಮನುಷ್ಯನು ಜನಿಸಿ ಮಡಿಯುವುದರೊಳಗೆ ಅದನ್ನು ತಿಂದೇ ತೀರಬೇಕು. ಮನುಷ್ಯನ ಜೀವನದಲ್ಲಿ ಸಾಧಾರಣವಾಗಿ ಸುಖಕ್ಕಿಂತಲೂ ಕಷ್ಟಗಳೇ ಹೆಚ್ಚಾಗಿರುತ್ತವೆ. ಜಗತ್ತು ಸದಾ ಒಂದೇ ತೆರನಾಗಿರಲಾರದು. ಇಂದು ನ್ಯಾಯವಾಗಿ ಕಂಡದ್ದು ನಾಳೆಗೆ ಅನ್ಯಾಯವಾಗಿ ಕಾಣಬಹುದು ! ಇಂದು ಅನ್ಯಾಯವೆಂದು ಪರಿಗಣಿಸಲ್ಪಟ್ಟದ್ದು ನಾಳೆ ನ್ಯಾಯವೆಂದಾಗಬಹುದು ! ಅಂದಮೇಲೆ ವೈರಿಗಿಂತಲೂ ಮಿಕ್ಕ ಅತ್ತೆನಾದಿನಿಯರ ಮಧ್ಯೆ ಇರುವ ಸ್ವರ್ಣಳ ಆಂತರ್ಯವನ್ನು ಅರಿತು ಅವಳನ್ನು ಸಂತಯಿಸುವವರು, ಸಮಾಧಾನದ ಎರಡು ಮಾತನಾಡಿ ಅವಳ

ಹೃದಯಕ್ಕೆ ಒಂದಿಷ್ಟು ನೆಮ್ಮದಿ ಕೊಡತಕ್ಕವರು ಯಾರಿದ್ದಾರೆ! ಈ ಸಂದಿಗ್ಧ ಸ್ಥಿತಿಯಲ್ಲಿ ಅವಳು ಹೇಗೆ ತನ್ನ ಜೀವನವನ್ನು ನೂಕುತ್ತಿದ್ದಳೆಂಬುದು ಅವಳಿಗೇ ಗೊತ್ತು!

"ಸ್ವರ್ಣಾ, ಕಿಶೋರ ಇನ್ನೂ ಬರ್ಲಿಲ್ವೇ? ಪರೀಕ್ಷೆ ಫಲಿತಾಂಶ ತಿಳಿಯೋದು ಇಂದೂಂತ ಪತ್ರಿಕೆ ತೊಗೊಂಡು ಬರ್ಲಿಕ್ಕೆ ಪೇಟೆಗೆ ಹೋದವ ಎಲ್ಲಿ ಹೋದ? ಇನ್ನೂ ಕಾಣೋದಿಲ್ಲಾಲ್ಲ" ಎಂದು ವಿಜಯನು ಪಕ್ಕದಲ್ಲಿ ಕುಳಿತಿದ್ದ ಸ್ವರ್ಣಳನ್ನು ಕೇಳಿದನು.

"ಈಗತಾನೆ ಬಂದಾನು. ನಿಮಗೆ ಏನು ಬೇಕು? ಮಧ್ಯಾಹ್ನದ ಮಟ್ಟಿಗೆ ಔಷಧಿ ಇದೆ. ಅನಂತರ ನಾನೇ ಹೋಗಿ ಔಷಧಿ ತೊಗೊಂಡು ಬರ್ತೀನಿ.

"ಸ್ವರ್ಣಾ, ನನಗೇಕಿನ್ನು ಔಷಧಿ? ಅಗತ್ಯವಿಲ್ಲ! ಕಿಶೋರ ಬಂದರೆ ನನಗೆ ಹೇಳು."

"ಎಂಥಾ ಮಾತಾಡುವಿರಿ?........"

"ಸ್ವರ್ಣಾ, ನೀನು ಸುಮ್ಮನೆ ನನ್ನನ್ನು ಮಾತಾಡಿಸಬೇಡ. ನೀನು ನಿನ್ನ ಕೆಲಸ ನೋಡು ಹೋಗು."

ಸ್ವರ್ಣ ತಟಸ್ಥಳಾದಳು. ಒಮ್ಮೆಗೇ ಅವಳಿಗೆ ತಲೆಯ ಮೇಲೆ ಆಕಾಶವೇ ಕಳಚಿ ಬಿದ್ದಂತಾಯಿತು. ಪ್ರೀತಿ ದಯೆಗಳಿಂದ ಮಾತಾಡುವ ಗಂಡ ಇಂದು 'ನೀನು ನಿನ್ನ ಕೆಲಸ ನೋಡು ಹೋಗು' ಎಂದುದರ ಕಾರಣವೇನಿರಬಹುದು. ಛೀ! ಇದೇನು? ನಾನು ತಪ್ಪು ಭಾವನೆಗಳನ್ನು ಮಾಡುತ್ತಿರುವೆನೆ? ಬೇಡದ, ಸಲ್ಲದ ಯೋಚನೆಗಳನೇಕ ನನ್ನನ್ನು ಕಾಡುತ್ತಿವೆ? ಏನೋ, ಬೇಸರವಾಗಿರಬೇಕು, ಆಗ ಹಾಗೊಂದು ಮಾತು ಬಾಯಿತಪ್ಪಿ ಬಂದಿರಬಹುದು. ಅದನ್ನೇಕೆ ನಾನು ದೊಡ್ಡದು ಮಾಡಬೇಕು! ಅದಕ್ಕೊಂದು ವಿಪರೀತ ಅರ್ಥವನ್ನು ಕಟ್ಟುವುದೇಕೆ!' ಎಂದು ತಳಮಳಗೊಳ್ಳುತ್ತಿದ್ದ ತನ್ನ ಮನಸ್ಸನ್ನು ತಡೆಗಟ್ಟಿ ಸಂತಯಿಸಿಕೊಂಡು, ಪತಿಯು ಕ್ಷೀಣದಿಂದ ನಿದ್ದೆಗೈಯುತ್ತಿರುವುದನ್ನು ನೋಡಿ ಅಲ್ಲಿಂದ ಮೆಲ್ಲಗೆ ಎದ್ದು ತನ್ನ ಕರ್ತವ್ಯದ ಕಡೆಗೆ ತಿರುಗಿದಳು. ಅತ್ತೆಯೆಂಬ ಪೆಡಂಭೂತಕ್ಕೆ ಹನ್ನೆರಡು ಗಂಟೆಗೆ ಅನ್ನದ ಪಿಂಡ ಹಾಕುವುದು ಬೇಡವೇ?

ಪ್ರಪಂಚದಲ್ಲಿ ಹಣವಿದ್ದವರು ಹೇಗೂ ಕೆಟ್ಟುಹೋಗುತ್ತಾರೆ. ಇಲ್ಲವೆ

ಕೆಟ್ಟವರ ಮೋಸದ ಬಲೆಗೆ ಬಹುಬೇಗನೆ ಬೀಳುತ್ತಾರೆ! ಬಡವರು ಕೆಡುವುದಿಲ್ಲ, ಅಲ್ಲದೆ ಕೆಟ್ಟವರು ಹಣವಿಲ್ಲದವರನ್ನು ತಮ್ಮ ಬಲೆಗೆ ಬೀಳಿಸಿಕೊಳ್ಳಲು ಹವಣಿಸುವುದೂ ಇಲ್ಲ. ಕಾರಣ—ಅವರಿಗೆ ಹಣ ಬೇಕು, ಜನವಲ್ಲ! ದೇವರು ಬಡವನನ್ನು ಆ ಸ್ಥಿತಿಯಲ್ಲಿ ಇರಿಸಿದ್ದಾನೆ, ಏಕೆಂದರೆ ಅವನು ಹಾಳಾಗದೆ, ಕೆಟ್ಟು ಹೋಗದೆ ಇರುವುದಕ್ಕಾಗಿ! ಹಣವಿಲ್ಲದ್ದರಿಂದ ಒಳ್ಳೆಯವರೆಂದೆನಿಸಿಕೊಂಡು ಬಾಳುವವರು ನಮ್ಮ ಸಮಾಜದಲ್ಲಿ ಅನೇಕರಿದ್ದಾರೆ. ಹಣ ಕೈಯಲ್ಲಿ ಬಂದೊಡನೆ ಎಷ್ಟೋ ಬುದ್ಧಿವಂತರೂ ಹೆಚ್ಚಾಗಿ ಮಂದಬುದ್ಧಿಯವರಾಗುತ್ತಾರೆ. ಕೈಯಲ್ಲಿ ಹಣ ಬಂದೊಡನೆ ಮನುಷ್ಯನಿಗೆ ಏನು ಮಾಡಬೇಕೆಂಬುದು ತಿಳಿಯುವುದಿಲ್ಲ; ಅವನು ತನಗೆ ಯಾವುದೆಲ್ಲಾ ಗಂಟು ಬೀಳುತ್ತದೋ ಅದನ್ನೆಲ್ಲಾ ಮಾಡಿಬಿಡುವುದೂ ಇದೆ; ಆದರೆ ಎಲ್ಲವೂ ತದ್ವಿರುದ್ಧವಾಗಿ ಪರಿಣಮಿಸುವುದು. ಮತ್ತೆ ಅವನಿಗೆ ಎಚ್ಚರವಾಗುತ್ತದೆ, ತಾನು ಮಾಡಿದ್ದು ತಪ್ಪು—ಎಂಬುದು. ಹಣ ಕೈಯಲ್ಲಿದ್ದರೆ ಅದು ಒಳ್ಳೆಯದೋ ಕೆಟ್ಟದೋ—ಪಾಪವೋ ಅಲ್ಲವೋ ಎಂಬುದರ ಕಡೆಗೆ ಮನುಷ್ಯನು ಗಮನವೀಯುವುದು ಬಹಳ ವಿರಳ. ಅದು ಯಾವುದೇ ಆಗಿರಲಿ, ಏನೇ ಆಗಿರಲಿ—ಪ್ರಥಮ ದರ್ಶನಕ್ಕೆ ಆನಂದವೀಯುವಂತಿದ್ದರೆ ಸರಿ, ಪರಾಂಬರಿಸದೆ ಆ ಕಾರ್ಯವನ್ನು ಸಾಧಿಸಿಕೊಳ್ಳುತ್ತಾನೆ, ಅಥವಾ ಅದಕ್ಕೆ ಬಹು ಸುಲಭವಾಗಿ ವಶನಾಗಿಬಿಡುತ್ತಾನೆ. ಹಣಕ್ಕಾಗಿ ಬಂದು ಸೇರುವ ಮಿತ್ರರನ್ನು ಒಮ್ಮೆಗೆ ನಂಬಿ ಬಿಡುತ್ತಾನೆ. ಅದು ಹೆಣ್ಣಾಗಿರಬಹುದು, ಗಂಡೂ ಆಗಿರಬಹುದು!

"Hello! Mr. Kishore. ಯಾವಾಗ ಬಂದಿರಿ?"

"ಬಂದು four days ಆಯ್ತು. ನಮ್ಮ ಅಣ್ಣನಿಗೆ ಅಸೌಖ್ಯ; ಮನೆ ಬಿಟ್ಟು ಕದಲುವುದು ಸ್ವಲ್ಪ ಕಷ್ಟವಾಯ್ತು...."

"ಇಂದೇಕೋ ಈ ಸವಾರಿ?"

"Result ನೋಡಲಿಕ್ಕಾಗಿ paper buy ಮಾಡ್ಲಿಕ್ಕೇಂತ ಪೇಟೆಗೆ ಬಂದೆ, ಹಾಗೇ ನಿನ್ನನ್ನೂ ನೋಡಿಕೊಂಡು ಹೋಗೋಣಾಂತ...."

"ಹೇಗೆ—ಮೇಲೆಯೋ ಕೆಳಗೋ?"

"ಏನು ಸ್ವಪ್ನ, ಹೀಗೆ ಕೇಳ್ತಿ? ಕಿಶೋರ್ fail ಆಗುವುದೂಂತ ಇದೆಯೇ?"

" Oh ! ಹಾಗೊಂದಿದೆಯೇನು ? **I forgot,** ಕ್ಷಮಿಸಿ."

" **Never mind, never mind, don't mention.**"

" ಮತ್ತೇನು ವಿಶೇಷ ? "

" ನನ್ನದೇನು ವಿಶೇಷ ; ಇದ್ದದ್ದೆಲ್ಲ ಇದೇ, ಹೇಳಿಯಾಯ್ತು. ಇನ್ನೆಲ್ಲಾ ನಿನ್ನದೆ........ನಿನ್ನ ತಾಯಿ ಎಲ್ಲಿ ? "

" ತಾಯಿ ತೀರಿ ತಿಂಗಳಾಯ್ತಲ್ಲ."

" **Is it** ? ನಿಜವಾಗಿಯೂ ! ಮನೆಯಲ್ಲೀಗ ಯಾರು ? "

" ನಾನು ! "

" **You alone** ? "

" ಅದಕ್ಕೇ ಬಂದಿದ್ದಾರಲ್ಲ ! "

" ಯಾರು ? "

" ಇವರೇ—ನನ್ನೆದುರು ಕೂತಿದ್ದಾರಲ್ಲ ! " ಎಂದು ಸ್ವಪ್ನ ನಕ್ಕಳು ; ಕಿಶೋರನೂ ನಕ್ಕನು.

" **Then, I shall come** ! "

" ಇಷ್ಟು ಅವಸರದಲ್ಲಿ ಏಕೆ ಬರಬೇಕಿತ್ತೊ ? ಬಂದು ಅರ್ಧ ಗಂಟೆ ಕೂತುಕೊಳ್ಳಲಿಲ್ಲ ಏನಿಲ್ಲ !........"

" **Alright** ! ಸಿಟ್ಟಾಗಬೇಡ, ತರೋದನ್ನೆಲ್ಲಾ ತಾ ! "

" ಹಾಗೆ ! **Be like that.** ಸ್ವಲ್ಪ ಗಟ್ಟಿಮಾಡಿ !............ಇನ್ನು ಮುಂದಿನ ಅಭಿಪ್ರಾಯವೇನು ? ವಿದ್ಯೆಯನ್ನು ಮುಂದುವರಿಸುವುದೊ, ಅಲ್ಲಾ ಇಲ್ಲಿಗೇ ಸಾಕು ಮಾಡುವುದೊ ? "

" **I can't say.** ನನ್ನ ಮಟ್ಟಿಗೆ **enough** ಅಂತಲೇ ಇದ್ದೇನೆ. ಇನ್ನು ನಮ್ಮ **brother's opinion** ಏನೆಂಬುದನ್ನು ನೋಡಬೇಕು."

" **Most probably ending only, I think** ? "

" **Yes—what are you doing** ? "

" ನಾನು ಇದೇ ಇಲ್ಲಿ ರೇಷನ್ ಆಫೀಸಿನಲ್ಲಿ ಹೆಡ್‌ಕ್ಲಾರ್ಕ ಕೆಲಸ ನೋಡುತ್ತಿದ್ದೇನೆ."

" **Income** ಎಷ್ಟು ? "

" ಏನು—ಒಂದು ಅರುವತ್ತು ಬರ್ತ್ತದೆ."

" ಏನು ಸಾಲದೆ ? ಹೆಂಗಸರಿಗೆ ಅದಕ್ಕಿಂತಲೂ ಅಧಿಕ ಖರ್ಚೇ ? ಅದೂ ಅಲ್ಲದೆ ನಿನಗೊಬ್ಬಳಿಗೆ........"

" What are you saying, Mr. Kishore ? ಮನೆಯಲ್ಲಿ ಕೆಲಸ ಮಾಡ್ಲಿಕ್ಕೆ ಮೂವರಿದ್ದಾರೆ. ಒಬ್ಬಳು ಅಡಿಗೆ ಮಾಡುವವಳು, ಮತ್ತೊಬ್ಬಳು ಹೊರಗಿನ ಕೆಲಸ ಮಾಡುವವಳು, ಒಬ್ಬ peon. ಇವರಿಗೆಲ್ಲಾ ಸಂಬಳ ಕೊಟ್ಟಾಗೋದು ಬೇಡವೆ ? "

" ಹೋ ! ಇದು ದೊಡ್ಡ ವಹಿವಾಟಾಯಿತಲ್ಲಾ !........" ಎಂದು ಇನ್ನೂ ಏನನ್ನೋ ಸ್ವಗತ ಯೋಚಿಸುತ್ತಿರುವಷ್ಟರಲ್ಲಿ ಒಳಗಿನಿಂದ ಠಣ್, ಠಣ್, ಠಣ್ ಎಂದು ಘಂಟೆಯ ಬಾರಿಸುವಿಕೆ ಕೇಳಿ ಬಂತು.

" ಹೂಂ ! ಸ್ನಾನ ಮಾಡುವುದಿಲ್ಲವೇ ? ಇಲ್ಲಾಂತಾದರೆ ಏಳಿ, ಊಟ ಸಿದ್ಧವಾಯಿತು, ಕೈಕಾಲು ತೊಳಕೊಳ್ಳಿ."

ಕಿಶೋರನಲ್ಲಿ ಜಾತಿ ಭೇದಭಾವವು ತಿಲಾಂಶವೂ ಇರಲಿಲ್ಲ. ಶುದ್ಧವಿದ್ದು, ಮನಸ್ಸಿಗೆ ಹಿಡಿಯುವಂತಿದ್ದರೆ ಸರಿ—ಎಲ್ಲಿಯಾದರೂ ಊಟಮಾಡುತ್ತಿದ್ದ. ಅಂತೆಯೇ ಅಂದಿನ ಭೋಜನವನ್ನು ಸ್ವಪ್ನಳ ಮನೆಯಲ್ಲಿ ತೀರಿಸಿದ, ಕಿಶೋರ. ಸ್ವಪ್ನಳಾದರೋ ಕಿಶೋರನನ್ನು ಊಟವಾದ ತಕ್ಷಣ ಬಿರುಬಿಸಿಲಿನಲ್ಲಿ ಮನೆಗೆ ಹೋಗಗೊಡದೆ ಸಂಜೆಯ ವರೆಗೆ ನಿಲ್ಲಿಸಿಕೊಂಡಳು.

* * * *

ಸೂರ್ಯಾಸ್ತ ಸಮಯದಲ್ಲಿ ಕಿಶೋರನು ಮನೆಗೆ ಬಂದು ಸೇರಿದನು. ಸ್ವರ್ಣ ಹೇಗೆ ಹೇಗೋ ಮಂಗಳೂರಲ್ಲಿದ್ದ ತನ್ನ ತಂದೆಗೆ ಪತಿಯ ನಿರ್ಬಲತೆಯ ಕುರಿತು ಕದ್ದು ಒಂದು ಪತ್ರ ಹಾಕಿದ್ದಳಾದ ಕಾರಣ, ಅವರೆಲ್ಲರೂ ಆ ಸಮಯದಲ್ಲಿ ಅಲ್ಲಿಗೆ ಬಂದಿದ್ದರು.

ಮಾಧವರಾಯರು ಬತ್ತಿ ಬಸವಳಿದಿದ್ದ ತನ್ನ ಮಗಳನ್ನೂ ಅಳಿಯನನ್ನೂ ನೋಡಿ ಅರೆಮರೆಯಾಗಿ ಮುಖ ಮರೆಸಿಕೊಂಡು ಕಣ್ಣೀರಿಟ್ಟರು. ಆದರೆ ಮಾಡುವುದೇನು ? ಮಾಡಿದ್ದು ಮಾಡಿಯಾಯಿತು, ಇನ್ನು ಆದರಿಂದ ಸಂಭವಿಸುವುದೆಲ್ಲವನ್ನೂ ಅನುಭವಿಸಿಯೇ ತೀರಬೇಕಷ್ಟೆ. ತಾಯಿ ಕಾವೇರಮ್ಮನನ್ನು ಒಂದೆಡೆ ಕರೆದೊಯ್ದು ಸ್ವರ್ಣ ಗಳಗಳನೆ ಅತ್ತುಬಿಟ್ಟಳು. ಕಾವೇರಮ್ಮ

ಮಗಳನ್ನು ಸಂತಯಿಸುತ್ತಿದ್ದರಾದರೂ ತಾವೂ ಅಳುತ್ತಲೇ ಇದ್ದರು. ಮಗಳ ಸೊರಗಿದ ಮೈಯನ್ನೂ ಬಾಡಿ ಬೆಂಡಾದ ಮೋರೆಯನ್ನೂ ನೋಡಿದ ತಾಯಿಗೆ ಅವಳು ಕಷ್ಟದ ಬಿಕ್ಕಟ್ಟಿನಿಂದ ಬಿಡಿಸಿಕೊಳ್ಳಲಾರದೆ ಪರಿತಪಿಸುತ್ತಿದ್ದಾಳೆ ಎಂಬುದು ತಿಳಿದು ಬರಲು ಅಳುವನ್ನು ತಡೆಯುವುದಾಗಲಿಲ್ಲ. ಎಷ್ಟೆಂದರೂ ಹೆತ್ತ ಮನವಲ್ಲವೆ! ಅದು ಕರಗದಿರುತ್ತದೆಯೆ?

ಕೆಲವು ದಿನಗಳ ತರುವಾಯ ಮಾಧವರಾಯರು ತಮ್ಮ ಪತ್ನಿಯನ್ನು ಅಳಿಯನ ಮನೆಯಲ್ಲೇ ಬಿಟ್ಟು, ಮಗ ಪ್ರಕಾಶ ಮತ್ತು ಕುಮಾರಿ ತುಳಸಿಯನ್ನು ಸಂಗಡ ಕರೆದುಕೊಂಡು ಮಂಗಳೂರಿಗೆ ತೆರಳಿದರು.

ಮಗಳ ಸಹಾಯಕ್ಕೆಂದು ಕಾವೇರಮ್ಮ ನಿಂತುದು ವಸಂತಿಯ ಹೊಟ್ಟೆಯಲ್ಲಿ ಕಿಚ್ಚು ಅಧಿಕರಿಸಲು ಕಾರಣವಾಯಿತು. ದೇವರ ದಯೆಯೋ ಎಂಬಂತೆ ಅದೇ ಹೊತ್ತಿಗೆ ವಸಂತಿಯ ಗಂಡನು ಬೇಗನೆ ಬರುವಂತೆ ಹೇಳಿ ಮದ್ರಾಸಿನಿಂದ ಅವಳಿಗೆ ಪತ್ರ ಬರೆದುಬಿಟ್ಟನು. ಗತ್ಯಂತರವಿಲ್ಲದೆ ವಸಂತಿ ತೆರಳಿ ಬಿಟ್ಟಳು.

* * * *

ತವರುಮನೆಗೆ ಹೋಗಿ ಚೆನ್ನಾಗಿ ತಿಂದು ಉಂಡು ದಪ್ಪನಾಗಿಕೊಂಡು ಬಂದ ಪತ್ನಿಯನ್ನು ನೋಡಿ ವಸಂತಿಯ ಗಂಡ, " ಏನು? ಬಹಳ ಊದಿದ್ದೀಯಲ್ಲ!" ಎಂದ.

" ಹೌದು, ಊದಿದ್ದೇನೆ! ನಿಮ್ಮ ಕಣ್ಣೇ ಸಾಕು ನನಗೆ!"

" ಹಾಗಾದರೆ ಹೋಗು, ದೃಷ್ಟಿ ತೆಗೆದುಬಿಡು ಹೋಗಿ, ನನ್ನ ಕಣ್ಣು ಒಡೆದುಹೋಗಲಿ!...."

" ಮತ್ತೇನದು ನಿಮಗೆ, ಯಾವಾಗ ನೋಡಿದರೂ ಒಂದು ತಮಾಷೆ! ಅದಕ್ಕೊಂದು ಹೊತ್ತು ಗೊತ್ತು ಪರಿಮಿತಿ ಇಲ್ಲವೆ?....ಇಲ್ಲಿ ಇದ್ದದ್ದನ್ನು ತಿಂದು ಬಿದ್ದುಕೊಂಡಿದ್ದರೆ, 'ಏನೇ, ತಿನ್ನುವುದನ್ನೆಲ್ಲಾ ಎಲ್ಲಿ ಕೊಂಡ್ಹೋಗಿ ಇಡುತ್ತಿ; ದಿನ ಹೋದ ಹಾಗೆ ಒಣಗಿದ ಸಿಗಡಿಯ ಹಾಗಾಗ್ತಿಯಲ್ಲ' ಅಂತ ಎದೆ ಎದೆ ಬಡ್ಕೊಳ್ತೀರಿ. ತಾಯಿಯ ಮನೆಗೆ ಹೋಗಿ ಏನಾದರೂ ತಿಂದುಂಡು ಸ್ವಲ್ಪೇನಾದರೂ ಸುಧಾರಿಸಿಕೊಂಡು ಬಂದರೆ 'ಊದಿದ್ದೀ, ಉಬ್ಬಿದ್ದೀ' ಎಂಬ ನಿಮ್ಮ ಮತ್ಸರದ ಮಾತು ಸುರುವಾಗುತ್ತೆ. ಒಟ್ಟಾರೆ ನೀವು ನನ್ನನ್ನು ಸಾಯ್ಲಿಕ್ಕೂ ಬಿಡುವುದಿಲ್ಲ, ಬದುಕಲಿಕ್ಕೂ ಬಿಡುವುದಿಲ್ಲ."

"ಅದಕ್ಕಿಷ್ಟು ಸಿಟ್ಟೇಕೆ ಆಗ್ತೀಯೆ?" ಎಂದು ವಸಂತಿಯ ರಸದ ಮಾತನ್ನು ಕೇಳಿ ಮುಗುಳುನಗೆ ನಗುತ್ತ ಕೇಳಿದನು.

"ಮತ್ತೆ, ಊದ್ಲಿಕ್ಕೆ ಉಬ್ಲಿಕ್ಕೆ ನಾನೇನು ಇಡ್ಲಿಯೆ?"

"ಹಾಂ! ಅದಾದ್ರೆ ಸರಿ, ನೀನು ಈಗ ಅಂದದ್ದು. ನಿನ್ನನ್ನು ನೀನೆ ಇಡ್ಲಿಗೆ ಸರಿಹೋಲಿಸಿಕೊಂಡದ್ದು ಬಹಳ ಸರಿ! ಇನ್ನು ನಿನ್ನನ್ನು 'ಇಡ್ಲಿ ಬಾಯಿ ವಸಂತಿ' ಎಂದು ಕರೀಬಹುದು. ಬಹಳ ಚೆನ್ನಾಗಿ ಒಪ್ಪುತ್ತೆ ಆ ಹೆಸರು ನಿನ್ಗೆ. ಏಕೆಂದರೆ ಇಲ್ಲಿ ಅಕ್ಕಿ ಅನ್ನ ಉಂಡು, ನಿನ್ನ ತಾಯಿ ಮನೆಗೆ ಹೋಗಿ ಉದ್ದು ಹಾಕಿದ ಫಲಾಹಾರ ತಿನ್ತಿ!"

"ಹೋಗಿ ಅಂದ್ರೆ!" ವಸಂತಿಗೆ ಮುಂದೆ ಮಾತಾಡುವುದಾಗಲಿಲ್ಲ; ಗಂಡನ ಬಾಯಲ್ಲಿ ಸೋತ ಆಕೆಯ ಕಣ್ಣುಗಳಲ್ಲಿ ನೀರು ತುಂಬಿತು.

"ಅಲ್ಲ! ಅತ್ತ್ಬಿಟ್ಟೆಯೇನೆ?" ಎಂದು ಅವಳನ್ನು ಸನಿಯಕ್ಕೆಳೆದು ಕೊಂಡು ಕೆನ್ನೆಗೊಂದು ಮುತ್ತಿಟ್ಟ. ಅವಳೂ ನಕ್ಕಳು.

* * * *

ಮುಂಜಾನೆ ಸ್ವರ್ಣ ಹಾಸಿಗೆ ಬಿಟ್ಟೆದ್ದು ಕಣ್ಣುಜ್ಜುತ್ತಾ ಹೊರಬರು ತ್ತಿದ್ದಳು. ಫಕ್ಕನೆ "ಥೂ!" ಎಂದಳು. ಕರಿಯ ಬೆಕ್ಕೊಂದು ಅವಳಿಗದಿರಾಗಿ ಬರುತ್ತಿತ್ತು. ಅದನ್ನು ಲೆಕ್ಕಿಸದೆ ಬೆಳಗಿನ ಕೆಲಸಗಳನ್ನು ಮುಗಿಸಿ ಬಿಟ್ಟು ಗಂಡನಿಗೆ ಹಾಲು ಕಾಯಿಸಲಿಕ್ಕೆಂದು ಹಾಲಿನ ಲೋಟ ಕೈಯಲ್ಲಿ ತೆಗೆದಳು. ಅದು ಕೆಳಗೆ ಬಿದ್ದು ಹಾಲು ಚೆಲ್ಲಿಹೋಯಿತು. 'ಅಯ್ಯೋ ದೇವರೆ, ನನಗಿಂದು ಏನಾಗಿದೆ?' ಎಂದುಕೊಂಡು ಬೇಗನೆ ಅದನ್ನೆಲ್ಲಾ ಉಜ್ಜಿ ತೆಗೆದು ನೆರಮನೆ ಯವರ ಕೈಯಿಂದ ಹಾಲು ಇಸುಕೊಂಡು ಬಂದು ಬಿಸಿಮಾಡಿ, ಗಂಡನು ಏಳದೆ ಮಲಗಿಯೇ ಇದ್ದುದನ್ನು ನೋಡಿ ಹಾಲನ್ನು ಕೆಳಗಿಟ್ಟು, ಗಂಡನನ್ನು ಕರೆದಳು. ವಿಜಯನು ಮುಚ್ಚಿದ ಕಣ್ಣನ್ನು ತೆರೆಯದೆ ಇರುವುದನ್ನು ನೋಡಿ ಮೈ ಮುಟ್ಟಿ ಎಬ್ಬಿಸಲು ಕೈ ಮುಂದೆ ಮಾಡಿದಳು. ಕೂಡಲೆ "ಅಯ್ಯೋ! ಅಮ್ಮಾ!" ಎಂದು ಒಂದೇ ಉಸಿರಿಗೆ ಚೀರಿದವಳು ಬೋಧ ತಪ್ಪಿ ನೆಲಕ್ಕುರುಳಿದಳು. ಬಚ್ಚಲಲ್ಲಿದ್ದ ಕಾವೇರಮ್ಮ, "ಏನವ್ವಾ ಅದು!" ಎಂದುಕೊಂಡು ಓಡಿ ಬಂದು....ನೋಡುವುದೇನನ್ನು!

ಆಚೆ ವಿಜಯ ತನ್ನ ಅಂತಿಮ ಯಾತ್ರೆಯನ್ನು ಮುಗಿಸಿದ್ದರೆ ಈಚೆ

ಸ್ವರ್ಣ ಮೂರ್ಛಿತಳಾಗಿ ಬಿದ್ದಿದ್ದಾಳೆ! ಕಾವೇರಮ್ಮನಿಗೆ ಏನು ಮಾಡುವುದು, ಇದೇನು ಎಂಬುದು ಗೊತ್ತಾಗಲಿಲ್ಲ! ಬೊಬ್ಬೆಹಾಕೋಣವೆಂದರೆ ಎದೆಯ ಮೇಲೆ ಯಾರೋ ಕುಳಿತುಕೊಂಡು ಒಳಗಿನಿಂದ ನಾಲಗೆಯನ್ನು ಹಿಡಿದಂತಾಗಿತ್ತು! ಅಂತೂ ಯಾರೋ ಯಾವುದಕ್ಕೋ ಅಲ್ಲಿಗೆ ಬಂದವರು ಕಾವೇರಮ್ಮನ ಮೈ ತಟ್ಟಿ ಚಿತ್ತಭ್ರಮೆಯಿಂದ ಪ್ರಜ್ಞೆಗೆ ತಂದರು. ಕಡೆಗೆ ಕಾವೇರಮ್ಮನ ರೋದನ ಧ್ವನಿಯನ್ನು ಕೇಳಿಯೇ ಮನೆಯಲ್ಲಿನ ಎಲ್ಲರೂ ಎದ್ದರು. ಸ್ವರ್ಣಳನ್ನು ಯಾರೋ ಉಪಚರಿಸಿದರು. ಕಿಶೋರನು ಹೋಗಿ ಮಂಗಳೂರಿಗೊಂದು, ಮದರಾಸಿಗೊಂದು ತಾರು ಕೊಟ್ಟನು.

ನಿಯಮಾನುಸಾರವಾಗಿ ಎಲ್ಲ ಸಂಸ್ಕಾರಗಳನ್ನೂ ಮಾಡಿ ಮುಗಿಸಿದರು. ಮಾತಾಡಿಸಲಿಕ್ಕೆಂದು ಬಂದವರು ಬಹಳ ಸಮಯ ನಿಲ್ಲಬಾರದೆಂದು ಎಲ್ಲರೂ ಹೋಗಿಬಿಟ್ಟಿದ್ದರು. ಸಧ್ಯ ಉಳಿದವರೆಂದರೆ ಅಲ್ಲಿ ಸ್ವರ್ಣಳ ತಂದೆತಾಯಿಗಳು ಮಾತ್ರ. ಪ್ರಕಾಶನು ರಜೆ ಹೆಚ್ಚಿಲ್ಲದ ಕಾರಣ ತಂಗಿ ಸ್ವರ್ಣಳಿಗೆ ಒಂದೆರಡು ಧೈರ್ಯದ ಮಾತು ಹೇಳಿ ತುಳಸಿಯನ್ನು ಸಂಗಡ ಕರೆದುಕೊಂಡು ಎಲ್ಲರೂ ಹೋಗುವ ಸಮಯದಲ್ಲಿ ಅವನೂ ಹೋಗಿಬಿಟ್ಟಿದ್ದನು. ಮಾಧವರಾಯರು ಹೋಗದೆ ನಿಂತುದರ ಕಾರಣವೆಂದರೆ, ಸ್ವರ್ಣಳನ್ನೂ ಮಂಗಳೂರಿಗೆ ಕರೆದೊಯ್ಯುವುದು ಎಂಬ ಹಂಚಿಕೆಯಲ್ಲಿದ್ದುದು. 'ಗಂಡ ಸತ್ತು ತಿಂಗಳೊಂದಾಗುವ ಮೊದಲು ಗಂಡನ ಮನೆಯನ್ನು ಬಿಟ್ಟು ತವರುಮನೆಗೆ ತೆರಳುವುದೆ? ಮತ್ತು, ಚಿನ್ನದಂತಹ ಗಂಡನೇ ಇಹಲೋಕವನ್ನು ಬಿಟ್ಟಮೇಲೆ ನನಗಿನ್ನಿಲ್ಲಿ ಇರುವುದಾದರೂ ಏನು?....' ಎಂದು ಮುಂತಾದ ಅನೇಕ ಸಮಸ್ಯೆಗಳು ಸ್ವರ್ಣಳ ಮನಸ್ಸನ್ನು ಕಲಕಿಬಿಟ್ಟವು. ಸ್ವರ್ಣ ಉಭಯ ಸಂಕಟದಲ್ಲಿ ಸಿಕ್ಕಿ ದಾರಿಗಾಣದಾಗಿದ್ದಳು.

ಈ ರೀತಿಯಲ್ಲಿ ನೆನೆದು ನೆನೆದು ಕೊರಗುತ್ತಾ ಮಲಗಿದ್ದ ಸ್ವರ್ಣಳ ಕೋಣೆಯನ್ನು ಮಾಧವರಾಯರು ಪ್ರವೇಶಿಸಿದರು.

ಹತ್ತಿಪ್ಪತ್ತು ದಿವಸಗಳಿಂದ ಗಂಡನನ್ನು ನೆನೆದು ಯಾವಾಗಲೂ ಅತ್ತತ್ತು, ಹೊಟ್ಟೆಗೆ ಸರಿಯಾಗಿ ತೆಗೆದುಕೊಳ್ಳದೆ, ನಿದ್ದೆಯಿಲ್ಲದೆ ಇದ್ದ ಸ್ವರ್ಣಳ ದೇಹ ಬಡಕಲಾಗಿ ಹೋಗಿತ್ತು. ಅಂದು ಅಂದವಾದ ಕುಂಕುಮದ ಚೆಂದ ಮುಖಕ್ಕಿತ್ತು! ಇಂದಿಲ್ಲ! ಅಂದು ಯಾವಾಗಲೂ ಕಾಂತಿಯಿಂದಿದ್ದುದು ಇಂದು

ಬಾಡಿದೆ. ಬಿಳಿಯ ಸೀರೆ ಅವಳ ಮೈಯನ್ನು ಸುತ್ತಿಕೊಂಡಿದೆ! ತಂದೆ ಬಂದುದನ್ನು ನೋಡಿ ಎದ್ದು ತಲೆಯನ್ನು ಗೋಡೆಗಾನಿಸಿ ಕುಳಿತಳು. ಕಣ್ಣುಗಳಿಂದ ಅಶ್ರುಧಾರೆ ಮಾಲೆಮಾಲೆಯಾಗಿ ಸುರಿಯುತ್ತಿದ್ದಿತು.

"ಅಮ್ಮಾ, ಸ್ವರ್ಣಾ, ಏಕಮ್ಮ ಹೀಗೆ ಅಳುತ್ತಿ? ಏನನ್ನಾದರೂ ಮಾಡಬಹುದು, ಆಯುಷ್ಯವನ್ನು ಹಿಡಿಯುವುದು ಸಾಧ್ಯವೇ? ಅವನ ಆಯುಷ್ಯ ಮುಗಿಯಿತು, ಅವನು ಹೋದನು. ವೃಥಾ ಅತ್ತರೆ ಬರೋದೇನು? ಸುಮ್ಮನೆ ಅಳೋದರಿಂದ ಫಲವಿಲ್ಲ. ಜಗತ್ತಿನಲ್ಲಿ ಜನ್ಮವೆತ್ತಿದಮೇಲೆ ಒಂದಲ್ಲ ಒಂದು ದಿನ ಮಡಿಯಲೇ ಬೇಕು. ಇಂದಲ್ಲ ನಾಳೆ, ನಾಳಿಲ್ಲ ನಾಡಿದ್ದು—ಅಂತೂ ಎಂದಾದರೂ ಒಂದು ದಿನ ಎಲ್ಲರೂ ಹೋಗತಕ್ಕವರೆ! ಯಾವನೂ ಈ ಭೂಮಿಯಲ್ಲಿ ಚಿರಂಜೀವಿಯಾಗಲಾರನು. ಆದರೆ ಮೋಹಮಾಯೆಯು ತನ್ನ ಮಾಯಾಪಾಶದಿಂದ ಮನುಷ್ಯನನ್ನು ಒಲಿಯುತ್ತಿದೆಯೇನೊ, ಹೌದು! ವಿವೇಕವುಳ್ಳವರು ಸ್ವಲ್ಪ ಅರಿತು ವರ್ತಿಸಬೇಕಲ್ಲವೆ? ಆದ್ದರಿಂದ ಯಾವಾಗಲೂ ಸುಮ್ಮನೆ ಕೊರಗಿ ಕೊರಗಿ ಆರೋಗ್ಯವನ್ನು ಕೆಡಿಸಿಕೊಳ್ಳಬೇಡಮ್ಮ! ಎಲ್ಲವೂ ವಿಧಿ! ವಿಧಿಯನ್ನು ಮೀರಲು ಯಾರಿಂದಲೂ ಸಾಧ್ಯವಿಲ್ಲ. ಯಾರೂ ಈವರೆಗೆ ಅದನ್ನು ಗೆದ್ದಿಲ್ಲ. ನೀನು ಬುದ್ಧಿಯುಳ್ಳವಳು; ನಾನು ನಿನಗೇನೂ ವಿಶೇಷವಾಗಿ ಹೇಳಬೇಕಾಗಿಲ್ಲ...." ಎಂದು ಮುಂತಾಗಿ ಹಲವು ವಿಧವಾದ ಬುದ್ಧಿವಾದಗಳನ್ನು ಮಾಧವರಾಯರು ಸ್ವರ್ಣಳಿಗೆ ಉಪದೇಶಿಸಿದರು. ಸ್ವರ್ಣ ತಂದೆಯ ಮಾತಿಗೆ ಮರುನುಡಿಯದ ಪುತ್ರಿಯಾದ್ದರಿಂದ ಎಲ್ಲವನ್ನೂ ಮೌನದಿಂದ ಆಲಿಸಿ, ಮೈಮೇಲಿನ ಸೀರೆಯನ್ನು ಸರಿಪಡಿಸಿಕೊಂಡು ಸ್ವಲ್ಪ ಸರಿಯಾಗಿ ಕುಳಿತಳು.

"ಮಗೂ, ನಾಳಿನ ಬಸ್ಸಿಗೆ ನಾವು ಹೊರಡುತ್ತೇವೆ."

"ಅಮ್ಮನನ್ನೂ ಕರೆದುಕೊಂಡು........" ಎನ್ನುವಾಗ ಸ್ವರ್ಣಳ ಕಣ್ಣುಗಳಲ್ಲಿ ನೀರು ಉಕ್ಕಿ ಬಂತು.

"ಹೌದು, ಮಗು. ಹುಡುಗಿ ಶಾಲೆಗೆ ಹೋಗಿ ಬರ್‍ತಾಳೆ, ನಿನ್ನಣ್ಣ ಆಫೀಸಿನಿಂದ ಬರ್‍ತಾನೆ, ಮನೆಯಲ್ಲಿ ಅಡಿಗೆ ಮಾಡಲಿಕ್ಕೆ ಯಾರೂ ಇಲ್ಲದೆ ಬಹಳ ಕಷ್ಟವಾಗಿದೆ. ಅದಲ್ಲದೆ ಮಾತಾಡಿಸ........ಂದು ಬಂದವರು........" ಎಂದು ವಾಕ್ಯವನ್ನು ಮುಗಿಸಲಾರದೆ, ಇಷ್ಟು ಹೊತ್ತು ಮಗಳಿಗೆ ಹಿತವಚನ

ಗಳನ್ನೀಯುತ್ತಿದ್ದ ಮಾಧವರಾಯರು 'ಮಾತಾಡಿಸಕ್ಕೆಂದು' ಎಂಬ ಶಬ್ದ ಬರುವಾಗ ವ್ಯಸನ ತಡೆಯಲಾರದೆ ಅತ್ತುಬಿಟ್ಟರು. ಅದನ್ನು ನೋಡಿದ ಸ್ವರ್ಣ ಇನ್ನೂ ಸ್ವಲ್ಪ ಹೆಚ್ಚಾಗಿ ಅತ್ತಳು.

"ಅಪ್ಪ, ನನ್ನನ್ನೂ ಸಂಗಡ........ಹೋಗು........" ಸ್ವರ್ಣ ಬೇಡ ಬೇಡವೆಂದರೂ ಬಾಯ್ಬಿಟ್ಟು ಕೇಳಿದಳು.

"ಇಲ್ಲಮ್ಮ, ಸಾಧ್ಯವಿಲ್ಲ! ನಿನ್ನೆ ನಿನ್ನ ಅತ್ತೆಮಾವಂದಿರನ್ನು ಕೇಳಿದೆ— ಆ ವಿಷಯವಾಗಿ; ಅದಕ್ಕವರು ವರ್ಷ ಕಳೆಯದೆ ಕೂಡದೆಂದರು!" ಮಾಧವ ರಾಯರು ಅತ್ತೆಮಾವಂದಿರ ಸೂಚನೆಯನ್ನು ಅವಳ ಮುಂದಿರಿಸಿದರು.

ಒಂದು ವರ್ಷ! ಇದನ್ನು ಕೇಳಿದೊಡನೆ ಸ್ವರ್ಣ ಬೆಚ್ಚಿ ಹಿಂತೆಗೆದಳು. ಅವಳ ನೆತ್ತಿಗೆ ದೊಣ್ಣೆಯಿಂದ ಹೊಡೆದಂತಾಯಿತು!

"ಒಂದು ವರ್ಷದ ವರೆಗಿನ ಅವಧಿಯನ್ನು ನಾನಿಲ್ಲಿ ಹೇಗೆ ಕಳೆಯ ಲಪ್ಪಾ!" ಸ್ವರ್ಣ ತನ್ನ ಭವಿಷ್ಯವನ್ನು ಕುರಿತು ಚಿಂತಿತ ಧ್ವನಿಯಲ್ಲಿ ಕೇಳಿದಳು.

"ಏನು ಮಾಡಲಮ್ಮ!........" ಮಾಧವರಾಯರು ಮುಂದೆ ಮಾತಾ ಡುವುದಾದರೂ ಏನನ್ನು? ತೆಪ್ಪಗಾದರು.

ಲೋಕಾಪವಾದಕ್ಕೆ ಹೆದರಿ ಮಾಧವರಾಯರು ಕಾವೇರಮ್ಮನನ್ನು ಕರೆದುಕೊಂಡು ಮಾರನೆ ದಿನ ಮಂಗಳೂರಿಗೆ ಹೊರಟು ಹೋಗಿಬಿಟ್ಟರು. ಸ್ವರ್ಣಳ ದುಃಖವು ಯಾರು ಯಾವ ಮಾದರಿಯಲ್ಲಿ ಸಂತಯಿಸಿದರೂ ಕಡಿಮೆ ಯಾಗಲಿಲ್ಲ. ಕಡೆಗೆ ತನಗೆ ತಾನೇ 'ಸಂದ ಕಾರ್ಯವನ್ನು ನೆನೆದು ಸಂಕಟ ಪಡುವುದಕ್ಕಿಂತ ಸಂತಸಪಡೆಯುವುದೇ ಲೇಸೆ'ಂಬ ಮಾತನ್ನು ಸ್ಮರಣೆಗೆ ತಂದು ಕೊಂಡು ಸಮಾಧಾನ ತಂದುಕೊಂಡಳು. ಆದರೆ ಅವಳು ಹುದುಗಿಸಿಟ್ಟಿದ್ದ ಚಿಂತೆ ಅವಳನ್ನು ಕರಗಿಸುತ್ತಿತ್ತು. ಅವಳ ಹೃದಯದೊಳಗಿನ ಸ್ಥಿತಿ ಅವಳ ಮುಖದಲ್ಲಿ ಕಾಣಬರುತ್ತಿತ್ತು.

೨

ಸ್ವರ್ಣ ಪತಿವಿಯೋಗದಿಂದ ಸದಾ ದುಃಖಮುಖಿಯಾಗಿದ್ದಳಾದರೂ, ತಾರುಣ್ಯವನ್ನು ದಾಟದವಳಾಗಿರದೆ ತರುಣ ಯುವತಿಯಾಗಿದ್ದುದರಿಂದ ನೈಜ

ವಾದ ಮತ್ತು ನೈಸರ್ಗಿಕವಾದ ಸೌಂದರ್ಯವು ಅವಳ ಮುಖದ ಮೇಲೆ ಕಾಣುತ್ತಿದ್ದಿತು. ಆದರೆ ಮೂಗಿನಲ್ಲಿ ಮೂಗುತಿ ಮತ್ತು ಮುಖಕ್ಕೆ ಕಳೆಯುನ್ನೀವ ಕುಂಕುಮ ತಿಲಕವು ಇಲ್ಲದ್ದರಿಂದ ಅವಳು ವಿಧವೆಯೆಂಬುದು ವ್ಯಕ್ತವಾಗುತ್ತಿತ್ತು. ಅವಳು ಐದು ತಿಂಗಳ ಗರ್ಭಿಣಿಯಾಗಿದ್ದಳು! ಗಂಡ ಸಾಯುವಾಗಲೇ ಮೂರು ತಿಂಗಳ ಬಸಿರಿಯಾಗಿದ್ದಳು. ಆದರೆ ಕುತ್ತ ಹುಡುಕಲು ಅಧಿಕಾರಸ್ಥಳಾದ ಅತ್ತೆಗೆ ಸತ್ಯಾಸತ್ಯಗಳ ಅಗತ್ಯವೆಲ್ಲಿಯದು? ಪ್ರಪಂಚವೇ ಸತ್ಯವೆಂದು ಸಾರಿದರೂ ಅದು ಸುಳ್ಳೇ. ಸುಳ್ಳೆಂದು ಸಾರಿದರೂ ಅದು ಸತ್ಯವೇ!

"ಹುಡುಗ ಸತ್ತು ತಿಂಗಳೆರಡಾಗ್ಲಿಲ್ಲ; ಹುಡ್ಗಿ ಈಗ ತಾನೇ ಹೆಂಗ್ಸಾದ ಹಾಗೆ ಮೈತುಂಬಿಕೊಂಡು ಬರ್ತಾಳಲ್ಲ; ಊರೋರೆಲ್ಲ ಏನೇನೋ ಹೇಳ್ತಿದ್ದಾರೆ! ನನಗೆ ಹೊರಗೆ ಮುಖ ತೋರಿಸ್ಲಿಕ್ಕೆ ನಾಚಿಕೆಯೆನಿಸ್ತದೆ........"

"ಹೋಗಿ ಅವರ ಕಾಲಿಗೆ ಹಗ್ಗ ಹಾಕಿಕೊಂಡು ನಿನ್ನ ಕೊರಳಿಗೆ ನೇಣು ಹಾಕಿಕೊ!"

"ನಾನೇಕೆ ನೇಣು ಹಾಕಿಕೊಳ್ಳಲಿ?"

"ಮತ್ತೆ ಯಾರು? ನಾನು ಹಾಕಿಕೊಳ್ಬೇಕು ಅಂತ ಹೇಳ್ತೀಯ?"

"ಯಾಕೆ ನೀವು ಹಾಕಿಕೊಳ್ಬೇಕು?"

"ಅಯ್ಯೋ ನಿನ್ನ ಕರ್ಮನೇ! ನೀನು ಏನು ಹೇಳ್ಬೇಕೂಂತಿದ್ದೀಯೊ ಅದನ್ನೊಮ್ಮೆ ಬಿಡಿಸಿ ಹೇಳಿಬಿಡೇ ಒಮ್ಮೆಗೇ! ದ್ರಾವಿಡಪ್ರಾಣಾಯಾಮ ಯಾಕೆ ಮಾಡ್ತಿ?"

"ಬ್ಯಾಡ ಬ್ಯಾಡ ಎಂದರೂ ಹುಡುಗಿ 'ನಾನೇ ಹೋಗ್ತೀನಿ, ನಾನೇ ಹೋಗ್ತೀನಿ' ಅಂತ ಡಾಕ್ಟರಲ್ಲಿಗೆ ಹೋಗ್ತಾ ಬರ್ತಾ ಇದ್ದಳು! ಏನಾಯ್ತೋ ಏನು ಕರ್ಮವೋ!"

"ಈ ಅನರ್ಥ ಮಾತಾಡ್ಲಿಕ್ಕೇ ಇಷ್ಟು ಮಾತು ಬೆಳೆಸಿದಿಯಾ? ಇಷ್ಟೆಯೊ, ಇನ್ನೂ ಏನಾದ್ರೂ ಇದೆಯೋ! ಇದ್ರೆ ಹೇಳಿಬಿಡು....ಅಲ್ಲಾ, ಸ್ವರ್ಣ ಅಂಥ ಕುಲಟೆ ಅಂತ ಭಾವಿಸಿದ್ಯಾ? ಇಲ್ಲ, ಅವಳು ಅಂಥ ಅಕೃತ್ಯಕ್ಕೆ ಕೈಹಾಕೋಳಲ್ಲ. ನನ್ಗೊತ್ತದು ಚೆನ್ನಾಗಿ! ನೀನು ನನ್ನ ಮುಂದೆ ಕೂತ್ಕೊಂಡು ಸುಮ್ಮಗೆ ಹರಟಬೇಡ. ಪ್ರಥಮ ಗರ್ಭವಲ್ಲವೆ, ಮೈತುಂಬಿಕೊಂಡಿರಬಹುದು! ಅದಕ್ಕೆ ಈ ರೀತಿ ಮತ್ಸರ ಪಡ್ತೀಯೇಕೆ ನೀನು? ನನಗೀ ಕಾಲಿನ ದೆಸೆಯಿಂದ

ನಡೀಲಿಕ್ಕಾಗದು ಎಂದಾಗ ಅವಳು ಹೋಗಿ ಮದ್ದು ತಂದಳು. ಆಗ ನೀನು ಕೂಡ ಅದಕ್ಕೆ ಒಪ್ಪಿದೋಳೇ ಅಲ್ಲವೇ ? ಅಂದಮೇಲೆ ಈಗೇಕೆ ಇಂಥ ಅರ್ಥ ವಿಲ್ಲದ ಮಾತು ಮಾತಾಡ್ತಿ ? "

" ಹೌದು, ಆಗ ಒಪ್ಪಿದೆ ; ಈಗ ಏಕೊ ಅನಿಸ್ತದೆ ! ತಾಳೀ ತೋಟದ ಲಕ್ಷ್ಮಮ್ಮ ಹೇಳ್ತಾಳೆ, ವಿಜಯ ಕಾಯಿಲೆಯಿದ್ದಾಗ ಇದು ಹೇಗೆ ಸಾಧ್ಯ ? ಡಾಕ್ಟರಲ್ಲಿಗೆ ಹೋಗ್ತಾ ಬರ್‍ತಾ ಇದ್ದಳಲ್ಲ. ಹಾಗೇ ಏನಾದರೂ ಇರ್‍ಬೇಕು ಅಂತ ! ನನ್ಗೂ ಹಾಗೇ ಅನಿಸ್ತದೆ. ಮತ್ತೇನೋ—ಆ ಭಗವಂತನಿಗೇ ಗೊತ್ತು ! "

" ಸಾಕು, ಸಾಕು ನಿನ್ನ ಭಕ್ತಿರಸ. ಆ ಲಕ್ಷ್ಮಮ್ಮ ಏನು ಬಹಳ ಸಂಭಾವಿತಳು ಅಂತ ಅವಳು ಹೇಳಿದ್ದನ್ನು ತಂದು ನನ್ನ ಮುಂದೆ ಆಡ್ತಿದ್ದೀ ಯೇನು ? ನಿನ್ನ ಲಕ್ಷ್ಮಮ್ಮ ಯಾರ, ಎಂಥವರ ಮಗಳು ಅನ್ನೋದು ಈ ಸುಬ್ರಾಯರಿಗೆ ಗೊತ್ತಿದೆ ಅಂತ ನಿಂಗೊತ್ತಿಲ್ಲ ! ಅಂಥವರಿಗೆ ಅಂಥ ಬುದ್ಧಿ ಯೋಚನೆ ಬೇಗ ಬರೋದು !....ಇನ್ನು ಮಾತ್ರ ಅವಳು ಇವಳು ಏನಾದರೂ ಹೇಳಿದಳು ಕೇಳಿದಳು ಅಂತ ನನ್ನ ಮುಂದೆ ತಂದೀ ನೀನು........ಹಾಂ ! ಜೋಕೆ ! ಹೇಳಿಬಿಟ್ಟೆ !........ಹೇಳಿದವಳನ್ನೂ ಹೇಳೋವಳನ್ನೂ ಕತ್ತಿ ತೆಗೆದು ತುಂಡು ತುಂಡು ಮಾಡಿ ಎಸೆದು ಬಿಟ್ಟೇನು, ನಾನು ಸತ್ತರೆ ಅಷ್ಟೇ ಹೋಯ್ತು ಅಂತ !........" ರಾಯರು ಕೋಪ, ಆವೇಶ ಒಟ್ಟುಗೂಡಿಕೊಂಡು ಬರಲು ತಮ್ಮ ಮೇಲಿನ ಪರಿವೆ ತಮಗಿಲ್ಲದವರಾಗಿ ಕಡಿದಾಡಿಬಿಟ್ಟರು.

" ಏನು ಬಹಳ ಹೆದರಿಸ್ತೀರಿ ? ನನ್ನ–ನಿಮ್ಮ ಬಾಯಿ ಕಟ್ಟಬಹುದು ; ಊರ ಬಾಯಿ ಕಟ್ಟೋದು ಸಾಧ್ಯವಿದೆಯೇ ? ಹೊರಗೆ ಮುಖ ತೋರಿಸ್ಲಿಕ್ಕೇ ಆಗೋದಿಲ್ಲ. ಮುಂಡೆಯಾದೋಳು ಗರ್ಭಿಣಿಯಾಗಿದ್ದಾಳೆ—ಅವಳನ್ನೂ ಮನೇಲಿಟ್ಟುಕೊಂಡು ನಾನು ದಿವಸ ಕಳೀಬೇಕು, ಅಲ್ವೇ ? ಊರಾಡಿಕೊಳ್ಳು ತ್ತಿರೋ ನುಡಿಗಳನ್ನು ಕೇಳುವಾಗ ನನ್ನ ದೇಹ ಸತ್ತು ಹೋಗ್ತಿದೆ ! ಇದೆಲ್ಲಾ ನೀತಿಯೇ ? ಹೇಳಿದರೆ ನೀವು ನನ್ನನ್ನೇ ಹತ್ತಿಕ್ಕಿಕೊಂಡು ಬರ್‍ತಿದ್ದೀರಿ. ಬಹಳ ಚೆನ್ನಾಗಿದೆ........ಸ್ವರ್ಣ ಎಂದರೆ ನಿಜ ಸ್ವರ್ಣ ಅಂತ ಭಾವಿಸಿದ್ದೀರಿ ಕಾಣ್ತದೆ. ಯೌವನ—ಏನು ಮಾಡಬೇಕು, ಏನು ಮಾಡಬಾರದೆಂದು ಗೊತ್ತಿಲ್ಲ. ನೀತಿ-ರೀತಿ ನೋಡೋದಿಲ್ಲ. ಅಂಥಾ ವೇಳೇಲಿ ಸ್ವರ್ಣ ಡಾಕ್ಟರಲ್ಲಿ ಹೋಗ್ತಿದ್ದಳು ಒಬ್ಬಳೇ ! ಆಗ ಏನೇನು ನಡೆಯಿತು ಎಂಬುದು ಯಾರಿಗೆ ಗೊತ್ತು ! ಹೇಳಿದರೆ ನಿಮ್ಮ ತಲೆಗೆ ಹತ್ತೋದಿಲ್ಲ. ಅಯ್ಯೋ ದೇವರೆ......."

" ಸಾಕು ಸುಮ್ನಿರು, ಕತ್ತೇ ಹಾಗೆ........" ಎಂಬ ಘರ್ಜನೆ.

" ನೀವು ಏನೇ ಹೇಳಿ, ನನಗಿನ್ನೀ ಮನೇಲಿರೋದು ಅಸಾಧ್ಯ. ಇಲ್ಲವಾದರೆ ಅವಳನ್ನೇ ಇಲ್ಲಿಂದ ಹೊರಗಟ್ಟಬೇಕು...."

" ಎಲ್ಲಿಗೆ ? ನಿನ್ನ ಅಪ್ಪನ ಮನೆಗೇ ? "

" ನನ್ನ ಅಪ್ಪನ ಮನೆಗ್ಯಾಕೆ—ಅವಳಪ್ಪನ ಮನೆ ಇಲ್ವೇ ? "

" ಅದು ನೀತಿಯೇ ? "

" ಇದು ನೀತಿಯೇ ? "

" ಯಾರೋ ಏನೋ ಅಂದರೂಂತ ಅವಳನ್ನು ಹೊರಗಟ್ಟೋದೇ ? ನೀನು ಅನ್ನ ತಿನ್ನೋದಿಲ್ಲವೇ !........ಅವಳು ಹಾಗೆ ಮಾಡಿಯಾಳೇ ? ನಿನ್ನ ವಂಶದಲ್ಲಿ ಯಾರಾದ್ರೂ ಹಾಗೆ ಮಾಡಿರ್ಬೇಕು. ಅದೇ ನಿಂಗೆ ನಂಬಿಕೆ ಹುಟ್ಟೋದಿಲ್ಲ ! ಇಲ್ಲ, ಎಷ್ಟು ಮಾತ್ರಕ್ಕೂ ಸಾಧ್ಯವಿಲ್ಲ ! ಹಾಗೊಂದು ವೇಳೆ ಮಾಡ್ತೋದಾದರೆ ನಾನೇ—ಸೊಸೆಯಾದ್ರೇನು ? ಮಗಳ ಸಮಾನ ಅಲ್ಲವೇ !—ನಾನೇ ಅವಳನ್ನು ಕರೆದು ಎಲ್ಲವನ್ನೂ ವಿಚಾರಿಸಿ, ಸತ್ಯಾಸತ್ಯ ನಿರ್ಧರ ಮಾಡಿದ ತರುವಾಯನೇ........"

" ನಿಮಗವಳು ಬಾಯಿ ಬಿಟ್ಟು ಹೇಳ್ತ್ಯಾಳು ! ಅದೆಲ್ಲ ಸಾಧ್ಯವಿಲ್ಲ—ಹೊರಗಟ್ಟಲೇ ಆಗ್ಬೇಕು ! " ಎಂಬೊಂದು ದರ್ಪದ ಮಾತು.

" ಇಲ್ಲ ! ಅದಾಗಲಾರದು. ನಾನು ನಿನಗೆ ಹೆಂಡ್ತಿಯೇ ಅಲ್ಲಾ ನೀನು ನನಗೆ ಹೆಂಡ್ತಿಯೇ ! ಎಲ್ಲಕ್ಕೂ ನನ್ನ ಕರ್ತವ್ಯ ಆಗ್ಬೇಕು ! "

ಹೆಂಡತಿ ವಿಷ ಕಾರಿದರೆ, ಗಂಡ ಅಮೃತವನ್ನೇ ಕಾರುತ್ತಿದ್ದಾನೆ. ಆದರೆ ಮಾಡುವುದೇನು ? ಅಮೃತ-ವಿಷಗಳೆರಡನ್ನೂ ಮಿಶ್ರ ಮಾಡಿದರೆ ಸೇವಿಸಲಾಗುವುದೇ ? ಸುಬ್ಬರಾಯರಿಗೀಗ ವಿಷವೆಂದು ಉಗುಳುವುದೂ ಅಲ್ಲ, ಅಮೃತವೆಂದು ನುಂಗುವುದೂ ಅಲ್ಲ, ಎಂಬಂತಾಗಿದೆ. ಹಾಗೆಂದು ಸ್ವರ್ಣಳನ್ನು ಹೊರಗಟ್ಟುವುದೇ ? ಛಿ ! ಅದಾಗದ ಕಾರ್ಯ. ಹಾಗೆ ಮಾಡದೆ ಇದ್ದರೆ, ತನ್ನ ಹೆಂಡತಿಯೇನೋ ಹೌದು, ಸೊಸೆಯನ್ನು ಏನು ಮಾಡಿಬಿಡುತ್ತಾಳೊ ಎಂಬ ತಳಮಳ ಮನದೊಳಗೆ. ಅಂತೂ ಇಂತೂ ರಾಯರ ಪಾಡು ತ್ರಿಶಂಕುವಿನ ಪಾಡಾಯಿತು.

ಧರ್ಮವನ್ನು ಹಾಳುಗೆಡಹಿದವರ ಕುರುಡು ನಂಬಿಕೆಯ ಸ್ಮಾರಕವಾಗಿ ಸ್ವರ್ಣಳಿದ್ದಳು ! 'ತಲೆ ಭಾರ ಇಳಿದಿತ್ತು — ಅಂಗಾರ ಬೆಳೆದಿತ್ತು —ವೈ

ಯನ್ನು ಮುಚ್ಚಿತ್ತು ಬಿಳಿಯ ಸೀರೆ.' ಅತ್ತೆಯು ಈ ವೇಷ ಕಟ್ಟಿಸಿದ್ದಳು. ಆದರೆ ಆ ಬಿಳಿಯ ಸೀರೆ ಸ್ವರ್ಣಳ ಸೌಂದರ್ಯವನ್ನು ಇನ್ನಷ್ಟು ಹೆಚ್ಚಿಸಿತ್ತೇ ಹೊರತು ಕಡಿಮೆ ಮಾಡಿರಲಿಲ್ಲ. ತಲೆಗೆ ಹೂ ಮುಡಿಯದಿದ್ದರೂ ಮುಖವೆಂದರೆ ಮುದ್ದು ಚಂದಿರ!

ಸ್ವರ್ಣಳಿಗೆ ಯಾವಾಗಲೂ ಚಿಂತೆಯೇ. ಗಂಡ ಸತ್ತ ಮೇಲೆ ಆಕೆ ನಕ್ಕುದಿಲ್ಲ. ಸಂತೋಷದಿಂದ ತುತ್ತನ್ನೂ ಉಂಡುದಿಲ್ಲ. ದೇವರ ಕೋಣೆಯಲ್ಲಿ ಯಾವಾಗಲೂ ಕಣ್ಣೀರು ಸುರಿಸುತ್ತಿದ್ದಳು. ದೇವರೇ ತನಗೆ ಈ ವಿಪತ್ತು ತಂದಿದ್ದು ಎಂಬ ಭಾವವನ್ನು ಅವಳ ಆ ದೃಶ್ಯ ತೋರುತ್ತಿತ್ತು.

ಪತಿವ್ರತೆಯಾದ ಸತೀಮಣಿ ಸ್ವರ್ಣ ತದೇಕಚಿತ್ತಳಾಗಿ ಚಿತ್ತಭ್ರಮೆ ಹಿಡಿದವಳಂತೆ ದೇವರ ಕೊಟಡಿಯಲ್ಲಿ ತಾನೊಬ್ಬಳೇ ಶ್ರೀಕೃಷ್ಣ ಪರಮಾತ್ಮನ ಮುಂದೆ ಕುಳಿತು, ವಿಗ್ರಹವನ್ನು ನಿಜರೂಪವೆಂದು ತಿಳಿದು, " ದೇವಾ! ನೀನು ಅನಾಥರಕ್ಷಕನೆಂದು ಎಲ್ಲರೂ ಹೇಳುವರಲ್ಲ, ಅದು ಸುಳ್ಳೇ? ನನ್ನನ್ನೇಕೆ ಈ ರೀತಿ ಭಂಗಗೊಳಿಸುತ್ತಿ? ಇದು ನಿನಗೆ ಧರ್ಮವೆ? ಅನಾಥಳನ್ನೇಕೆ ಪಾತಾಳಕ್ಕೆ ನೂಕುತ್ತಿರುವೆ? ಧರ್ಮವೆಂಬುದು ರೂಪು ತಾಳಿದ ಹೊರತು ಅದು ಈ ಲೋಕದಲ್ಲಿ ಅನೇಕರಿಗೆ ಅರ್ಥವಾಗದು! ನಿಜವಾದ ದಾಂಪತ್ಯವೆಂದರೇನು, ಪತಿ-ಪತ್ನಿಯರ ಪ್ರೇಮವೆಂದರೆ ಎಂತಹದು, ಸತಿಯಾದವಳು ಹೇಗಿರಬೇಕು ಎಂಬುದನ್ನು ತಿಳಿಯದ, ದಾಂಪತ್ಯಪ್ರೇಮದ ಶಕ್ತಿ, ನೈರ್ಮಲ್ಯ, ನೈಪುಣ್ಯತೆಗಳನ್ನು ಅರಿತುಕೊಳ್ಳಲಾಗದ, ನೀತಿ ನಿಯಮಗಳನ್ನು ಗಮನಿಸದ, ನನ್ನನ್ನು ತಿಳಿದುಕೊಳ್ಳಲಾರದ ಈ ಜಗತ್ತು ನನ್ನ ಮೇಲೆ ವೃಥಾ ದೋಷಾರೋಪಣೆ ಮಾಡುತ್ತಿದೆ! ಜಗತ್ತಿನಲ್ಲಿ ನಿನ್ನ ಶೋಧನೆಗೆ ನಾನೇ ಒಳಪಟ್ಟಿರುವೆನೆ? ಅಂದು ದ್ರೌಪದಿಯ ಮಾನಭಂಗವನ್ನು ಕಾದ ನೀನು, ಇಂದು ನನ್ನನ್ನು ಈ ಅವಮಾನಕ್ಕೆ ಗುರಿ ಮಾಡುತ್ತಿರುವೆಯಲ್ಲ! ಇದು ನಿನಗೆ ಸಲ್ಲುವುದೇ? ನಿನಗೇನು ಕಣ್ಣಿಲ್ಲವೆ? ಕುರುಡಾಗಿ ಬಿಟ್ಟೆಯಾ?—ಅಯ್ಯೋ! ಇದೇನು ಮಾಡಿದೆ ನಾನು! ಕೃಷ್ಣಾ, ನನ್ನನ್ನು ಕ್ಷಮಿಸು! ನನ್ನ ಮೂಢತನಕ್ಕೆ ಬೇಸರಗೊಳ್ಳಬೇಡ! ನಿನಗೆ ತಿಳಿಯದ ಧರ್ಮವಿದೆಯೆ? ನಿನಗೆ ಧರ್ಮಾಧರ್ಮವನ್ನು ಬೋಧಿಸಲು ನಾನೇತರವಳು? ಅಖಂಡ ಭೂಮಂಡಲವೇ ನಿನ್ನ ಶೋಧನೆಗೆ ಒಳಪಟ್ಟಿರುವಾಗ ನಾನೆಷ್ಟರವಳು! ಕೃಷ್ಣಾ, ನನ್ನ ಪತಿ ನನ್ನ

ಅಂತ್ಯಕಾಲಕ್ಕೆ ನನಗೇತಕ್ಕೆ ಈ ಬಸಿರನ್ನು ಕೊಟ್ಟೆ........!" ಎಂದು ಹೇಳಿ ಇನ್ನೂ ಏನೋ ಹೇಳಬೇಕೆಂದು ಬಾಯ್ಬಿಡುವಷ್ಟರಲ್ಲಿ ಅಬ್ಬರದ ನಗುವೊಂದು ಕೇಳಿ ಬಂತು; ಫಕ್ಕನೆ ನಿಂತೂ ಬಿಟ್ಟಿತು. ಸ್ವರ್ಣ ಪುನಃ ಕಣ್ಣೆತ್ತಿ ಕೃಷ್ಣನ ಮೂರ್ತಿಯನ್ನೊಮ್ಮೆ ನೋಡಿದಳು. ಮೂರ್ತಿ ಅಚಲವಾಗಿಯೇ ನಿಂತಿತ್ತು. "ಹಾ! ಕೃಷ್ಣಾ, ನನ್ನ ಈ ಶೋಕವೂ ನಿನಗೆ ಲೀಲಾಮಯವಾಗಿದೆಯೆ? ಹಾಗೆಂದು ಇಂಥ ಅಬ್ಬರದ ನಗು ನಕ್ಕೆಯಾ? ಏನು, ನನ್ನನ್ನು ಇನ್ನೂ ಕಷ್ಟ ಪಡಿಸುವೆಯಾ? ಇಲ್ಲ! ಅದಾಗದು........" ಎಂದು ಮುಂದೆ ಮಾತಾಡಲು ಬಾಯಿ ಬರದೆ ಗಳಗಳನೆ ಅತ್ತುಬಿಟ್ಟಳು. ಕಣ್ಣೀರು ಧಾರೆಧಾರೆಯಾಗಿ ಸುರಿಯುತ್ತಿರಲು ಕುಳಿತಿದ್ದವಳು ತನ್ನ ಶಿರವನ್ನು ಒಮ್ಮೆಲೇ ಮೂರ್ತಿಯ ಪಾದದಲ್ಲಿಟ್ಟು ಮತ್ತೂ ಗಟ್ಟಿಯಾಗಿ ರೋದಿಸತೊಡಗಿದಳು.

"ಅಯ್ಯೋ, ಹುಚ್ಚುಮುಂಡೆ, ಸಾಕೆ ನಿನ್ನ ಠಕ್ಕು ಭಕ್ತಿ! ಗಂಡನಿಗೆ ಗಂಡ ಸಿಗೇಂತ ಡಾಕ್ಟರಲ್ಲಿಗೆ ಹೋಗಿ-ಹೊಟ್ಟೇನೂ ಮಾಡಿಕೊಂಡು ಬಂದಿ. ಅದರ ಮೇಲೆ ಗಂಡನನ್ನೂ ತಿಂದೆ. ಈಗ ಆ ಮೂರ್ತೀ ಕಾಲಿಗೆ ಬಿದ್ದರೆ ನಿನ್ನ ಪಾಪಾನೆಲ್ಲಾ ಆ ಮೂರ್ತಿ ಪರಿಹಾರ ಮಾಡ್ತದೇನು? ಪಾಪ, ಅಳಮ್ಮ, ಅಳು ಅಳು, ಚೆನ್ನಾಗಿ ಅಳು!....ಏಳೀ ಅಲ್ಲಿಂದ, ಏಳು! ಕಿಶೋರ ಕೆಲಸ ಬಿಟ್ಟು ಬರೋ ಹೊತ್ತಾಯ್ತು. ನನ್ನ ದುಃಖಕ್ಕಿಂತಲೂ ದೊಡ್ಡದಾಗಿ ಹೋಯಿತೇ ನಿನ್ನ ದುಃಖ!" ಎಂದು ಬಹಿರಂಗವಾಗಿ ದುಃಖದ ಛಾಯೆಯನ್ನು ತೋರ್ಪಡಿಸುತ್ತಾ ಸುಮ್ಮನಾದರೂ ತಮ್ಮ ಸೀರೆಯ ಸೆರಗನ್ನು ಕೈಯಲ್ಲಿ ಹಿಡಿದು ಅದರ ತುದಿಯಿಂದ ಕಣ್ಣನ್ನು ತಿಕ್ಕಿಕೊಂಡರು ಜಾನಕೀಬಾಯಿ. ಸ್ವರ್ಣ ಎದ್ದು ಹೋಗುವುದನ್ನು ನೋಡಿ "ಮಾಡಿದ ಕರ್ಮದ ಫಲ ತಿನ್ನೋದು ಬೇಡವೇನು!" ಎಂದರು.

ಸ್ವರ್ಣ ಬಲವಿಲ್ಲದಿದ್ದರೂ ಬಲವನ್ನು ತಂದುಕೊಂಡು ಎದ್ದಳು. ಎದ್ದು ನೋಡುವುದು ಯಾರನ್ನು? ಅತ್ತೆಯನ್ನು! ಆಗ ಗೊತ್ತಾಯಿತು ಸ್ವರ್ಣಳಿಗೆ, ಆಗಿನ ಆ ಅಬ್ಬರದ ನಗು ಅತ್ತೆಯದಾಗಿರಬಹುದೆಂದು. ಆದರೆ ಅದನ್ನು ಲೆಕ್ಕಿಸದೆ ಎದ್ದು ಹೋಗಿ ತನ್ನ ಕೆಲಸಕ್ಕೆ ಕೈಹಾಕಿದಳು. ಆದರೆ ತಾನು ಎದ್ದು ಬರುತ್ತಿರುವಾಗ 'ಮಾಡಿದ ಕರ್ಮದ ಫಲವನ್ನು ತಿನ್ನೋದು ಬೇಡವೇನು!' ಎಂದು ಅತ್ತೆಯಾಡಿದ ಆ ವಾಕ್ಯ ಅವಳೆದೆಯಲ್ಲಿ ಅವಿತು ನಿಂತು ಮಾರ್ದನಿ

ಗೊಡುತ್ತಿತ್ತು. 'ಆದರೆ ನಾನು ಮಾಡಿದ ಅಂತಹ ಕರ್ಮವಾದರೂ ಏನು, ಯಾವುದು ?' ಅದಕ್ಕೆ ಪ್ರಶ್ನೆ ಹಾಕುತ್ತಿದ್ದಳು! ಕೊನೆಗೆ, 'ನಾನು ಮಾತ್ರವಲ್ಲ, ಎಲ್ಲರೂ ಅವರವರು ಮಾಡಿದ ಕರ್ಮದ ಫಲವನ್ನು ಅವರವರು ತಿನ್ನಲೇಬೇಕು; ಅಂತೂ ತಿನ್ನುತ್ತಾರೆ! ಸ್ವಲ್ಪ ಹಿಂದು ಮುಂದು!' ಎಂದುಕೊಂಡಳು.

ಹುಲ್ಲಿನ ಚಾಪೆಯೊಂದರ ಮೇಲೆ ಸುಬ್ಬರಾಯರು ಪತ್ನೀಸಮೇತರಾಗಿ ಕುಳಿತು ಗಾಂಜ ಎಳೆಯುತ್ತಿದ್ದರು. ಜಾನಕೀಬಾಯಿಯವರು ಹುಬ್ಬಳ್ಳಿಯ ಇರ್ಕಾಲು ಸೀರೆಯೊಂದನ್ನು ಉಟ್ಟುಕೊಂಡಿದ್ದರು. ಮುಂದೆ ತಾಂಬೂಲದ ತಟ್ಟೆಯಿದೆ. ಜಾನಕೀಬಾಯಿಯವರು ಯಾವುದೋ ಒಂದು ಮಾತಿಗೆ ಪಂಚಾಂಗ ಹಾಕಿ, "ಹುಂ, ಹುಂ!" ಎಂದು ಗಂಟಲು ಸರಿಮಾಡಿಕೊಂಡರು. "ಏನು ? ವಿಚಾರಿಸಿದಿರಾ ?" ಎಂದು ಕೇಳಿಯೂಬಿಟ್ಟರು.

"ಏನದು ? ಎಂಥ ವಿಚಾರ ? ಯಾವುದು!" ಎಂದು ಮುಂತಾದ ಎರಡು ಮೂರು ಪ್ರಶ್ನೆಗಳನ್ನು ಸುಬ್ಬರಾಯರು ಜಾನಕೀಬಾಯಿಯವರ ಮುಂದೆ ಏನೂ ತಿಳಿಯದವರಂತೆ ಸುರಿದುಬಿಟ್ಟರು.

"ಪಾಪ, ಏನೂ ಗೊತ್ತಿಲ್ವೆ ? ನಿಮ್ಮಂತವರನ್ನು ನಂಬಿದರೆ ತಲೆಗೆ ಕಲ್ಲು. ಹೂಂ! ಹುಂ!" ಎಂದು ಹೇಳಿ ಒಂದು ಬಿಸಿಯುಸಿರನ್ನು ಹೊರಸೂಸಿದರು.

"ಎಲ್ಲಾ ನನಗೆ ಗೊತ್ತಿದೆ; ನೀನು ತೆಪ್ಪಗೆ ಕೂರು. ಯಾವ ಕಾಲದಲ್ಲಿ ಏನು ಮಾಡಬೇಕು ಏನು ಮಾಡಬಾರದು ಎಂಬುದರ ಅರಿವೇ ಇಲ್ಲ ನಿನಗೆ...." ಎಂದು ಸುಬ್ಬರಾಯರು ನಿಲ್ಲಿಸಬೇಕಾದರೆ ಜಾನಕೀಬಾಯಿಯವರು ಮಧ್ಯೆ ಬಾಯಿ ಹಾಕಿ, "ಹೌದು, ನಿಮಗೇ ಎಲ್ಲದರ ಅರಿವಿದೆ. ಹಾಗೇ ಅಂದುಕೊಂಡು ಸುಮ್ಮನೆ ಕುಳಿತುಬಿಡಿ, ಗಾಂಜಾನು ಎಳೆದುಕೊಂಡು; ಅದರ ಮೇಲೆ ನಾನೂ ತೆಪ್ಪಗೆ ಕೂತಿರ್ತೀನಿ. ಚೆನ್ನಾಯಿತು ಮತ್ತೆ, ಮನೆಗೆ ಬೆಳಕೇ ಬೇಡ...." ಎಂದು ಕೆಲವು ಉರಿ ಮಾತುಗಳನ್ನು ಕುತ್ತಿಗೆಯ ನರಗಳು ಉಬ್ಬಿದ ಹಾಗೇ ಜಾನಕೀ ಬಾಯಿಯವರು ಹೊರಸೂಸಿಬಿಟ್ಟರು, ಒಂದೇ ಉಸುರಿಗೆ.

"ಕಿಶೋರ ಪ್ರಾಯಕ್ಕೆ ಬಂದಿದ್ದಾನೆ; ಇನ್ನು ಹೆಚ್ಚು ತಡಮಾಡೋದು ಒಳ್ಳೆಯದಲ್ಲ. ಕಾರಣ ಆದಷ್ಟು ಶೀಘ್ರ ಅವನಿಗೊಂದು ಕಾರ್ಯ ಮಾಡಿಟ್ಟು ಬಿಟ್ಟರೆ ನಮ್ಮ ಪಾಡು ತೀರುತ್ತೆ. ಮತ್ತೆ, ಇದ್ದ ಅಲ್ಪ ಸ್ವಲ್ಪಾನೆಲ್ಲ ಅವನ ಹೆಸರಿನಲ್ಲಿ ಬರೆದಿಟ್ಟುಬಿಟ್ಟರೆ, ಮತ್ತೆ 'ಶಿವಶಿವಾ'ಂತ ತೆಪ್ಪಗೆ ಕೂರ್ಬಹುದು,

ಅವನಾಯ್ತು ಅವನ ಪಾಡಾಯ್ತು ಅಂತ, ಎಂಬ ಯೋಚನೆಯಲ್ಲಿ ನಾನು ದಿನ ರಾತ್ರಿ ಯುಗದ ಹಾಗೆ ನೂಕುತ್ತಿರ್ವಾಗ ನೀನು ಬ್ಯಾಡ ಬ್ಯಾಡದ್ದನ್ನೆಲ್ಲ ನನ್ನ ತಲೆಯೊಳಗೆ ತಂದು ತುರುಕಿಸಿ ನನ್ನ ತಲೆ ಹಾಳುಮಾಡ್ತಿಯಲ್ಲ?.... ಇನ್ನೆಷ್ಟು ಕಾಲ ತಾನೆ ನಾವು ಬದುಕೋದಕ್ಕಿದೆ, ಬಾಳಿದಷ್ಟು ಕಾಲ ಬಾಳೋದಕ್ಕಿದೆಯೇ? ....ನಿನ್ನಂಥ ಹೆಂಗಸರು ಲೋಕದೊಳಗೆ ಯಾಕೆ ಹುಟ್ಟುತ್ತಾರೊ ನಾ ಕಾಣೆ!" ಎಂದು ಸುಬ್ಬರಾಯರು ತಮ್ಮ ಸೂಚನೆಯನ್ನು ಪತ್ನಿಯ ಮುಂದಿರಿಸಿ ತಮ್ಮ ಮಂದಬುದ್ಧಿಗೆ ಪಶ್ಚಾತ್ತಾಪ ಪಟ್ಟರು.

"ಹೌದು! ಅಲ್ಲಾ, ನಾನು ಹುಟ್ಟಿದ್ದರಿಂದ ಏನಾಗಿ ಹೋಯ್ತು ಈಗ ಅಂದೆ? ಹಾಗೇನಾದ್ರು ಇದ್ದರೆ ಕೊಂದುಬಿಡಿ! ಮುಗೀತಲ್ಲ! ಮತ್ತೆ ತೊಂದ್ರೆ ಇರ್ಲಿಕ್ಕಿಲ್ಲ....ನಾನೇನೂ ನಿಮ್ಮ ಸೊಸೇ ಹಾಗೆ ಯಾರ್‍ಯಾರಿಂದ ಹೊಟ್ಟೆ...." ಎನ್ನುವಷ್ಟರಲ್ಲಿ ಸುಬ್ಬರಾಯರು ಕಣ್ಣು ಕೆರಳಿಸಿ ಹಿಂತಿರುಗಿ ನೋಡಿದರು.

ಜಾನಕೀಬಾಯಿಯವರು ತೆಪ್ಪಗಾದರು. ಅಲ್ಲಿ ಇಬ್ಬರ ಮಧ್ಯೆ ಒಂದಷ್ಟು ಹೊತ್ತು ಶಾಂತಿ ನೆಲಸಿತು. ಮಾತಿನಲ್ಲಿ ತುಸು ನಯವಾಗಿಯೇ ಹೋಗೋಣ ಎಂಬ ನಿರ್ಧಾರಕ್ಕೆ ಬಂದರು ಜಾನಕೀಬಾಯಿಯವರು.

"ಎಲ್ಲಿಯ ಹುಡುಗಿ ನೋಡೋದು ಅಂತ ಮಾಡಿದ್ದೀರಿ?" ಜಾನಕೀಬಾಯಿಯವರ ಸವಾಲು ಮೆಲ್ಲನೆ ಪತಿಯ ಮುಂದೆ ಎದ್ದು ನಿಂತಿತು.

"ಅದೆಲ್ಲಾ ನಿಶ್ಚಯಿಸಿ ಆಗಿದೆ; ಮಾಧವರಾಯರನ್ನೇ ಕೇಳಿದರೆ ಸರಿ."

"ಸಾಕು, ಸಾಕು! ಒಂದು ಸಲ ಆದದ್ದೇ ಸಾಕು. ಮೊದಲ ವರದಕ್ಷಿಣೆ ಹಣವನ್ನೇ ಇನ್ನೂ ಕೊಡ್ಲಿಲ್ಲ. ಇನ್ನು........"

"ವರದಕ್ಷಿಣೆಯೇ ಬೇಡಾಂತ ನಿರ್ಧಾರ ಮಾಡಿದ್ದೀನಿ. ಅದನ್ನು ಬಿಟ್ಟರೆ ಈಗ ಎಲ್ಲಿಗೆ ಹೋಗಲಿ ನಾನು, ಬೇರೆ ಹುಡುಕಿಕೊಂಡು? ಹಾಗೆ ಒಂದು ವೇಳೆ ಕೇಳಿದರೂ ಅವರೇನೂ ಕೊಡಲು ಶಕ್ತರಲ್ಲ; ಇದು ನಮಗೆ ಚೆನ್ನಾಗಿ ತಿಳಿದ ವಿಷಯ....ಪಟ್ಟಣಿಗರು ಹೊರಗೆ ಮಾತ್ರ ಸಿಂಗಾರ; ಒಳಗೆ ಏನೂ ಇಲ್ಲ! ಬಹಿರಂಗದಲ್ಲಿ ನೋಡಿದರೆ ಏನೋ ಸ್ವಲ್ಪ ಇದ್ದವರೂಂತ ಭಾವಿಸಬೇಕು ನೋಡೋವರು; ಅಂಥಾ ರೀತೀಲಿ ಅವರು ನಡ್ಕೊಳ್ತಾರೆ, ಅಷ್ಟೆ. ನನ್ನ ಹಾಗೆ ಮೊಣಕಾಲ ಮೇಲೆ ಒಂದು ಪಂಚೆ ಉಟ್ಟುಕೊಂಡು.... ಅಂಥದ್ರಲ್ಲಿ ಅವರ ಕೈಯಲ್ಲಿ ಹೋಗಿ ವರದಕ್ಷಿಣೆ ಕೊಡು, ಅದು ಕೊಡು,

ಇದು ಕೊಡು, ಅಷ್ಟು ಕೊಡು–ಇಷ್ಟು ಕೊಡು ಅಂತೆಲ್ಲ ಕೇಳಿಕೊಂಡು ಹೋದರೆ ಅವರೆಲ್ಲಿಂದ ಕೊಟ್ಟಾರು ?........"

" ನನಗೇಕೋ ಇಷ್ಟವಿಲ್ಲ; ಗಂಡನನ್ನು ತೆಗೆಯೋ ಹುಡುಗಿಯರು ಅವರ ಮಕ್ಕಳೆಲ್ಲ........! "

" ಥೂ ! ನಿನ್ನ ಬಾಯಿಗೆ ಮಣ್ಣು ಬಿದ್ದುಹೋದೀತೆ ಹೀಗೆಲ್ಲ ಆಡಿದ್ರೆ! "

" ಬೀಳ್ಲಿ ! ನಾನು ಇದ್ದದ್ದನ್ನೇ ಹೇಳಿದೆ ! "

" ಹೌದು ! ವಿಜಯ ಒಬ್ಬ ಹಾಗೆ ಆಗಿ ಹೋದ್ರೆ ಎಲ್ಲಾ ಆಗಿ ಹೋಗ್ತ ದೇನು ? ಅವನ ಆಯುಸ್ಸು ಮುಗಿಯಿತು ; ಹೋದ. ಮುಕ್ಕಾಲುವಾಸಿಯೂ ಅವ ತೀರಿದ್ದು ತನ್ನ ಹೆಂಡತಿ ನಿನ್ನ ಕೈಲಿ ಬರೋ ಕಷ್ಟಸಂಕಷ್ಟಗಳನ್ನು ನೆನೆದು ನೆನೆದೇ !........ಏನು ಮಾಡೋದು ? ನನಗೊಬ್ಬಳು ನೀನು ಗಂಟು ಬಿದ್ದಿ! "

" ಅದೇ ಅಂದೆನಲ್ಲ, ಕೊಂದು ಬಿಡೀ ಅಂತ ! "

ಮತ್ತಷ್ಟು ಮೌನ.

" ಕೇಳಿದರೆ ಅವರು ಕೊಡುತ್ತಾರೊ ಇಲ್ಲವೊ ಅಂತ ! "

" ಯಾಕೆ ಕೊಡ್ಲಿಕ್ಕಿಲ್ಲ ? ಮಹಾರಾಜ ಕೂತಿದ್ದಾನೇನು ಬೇರೆ, ರಾಜಕುಮಾರಿಯನ್ನು ಮದುವೆ ಮಾಡಿಕೊಂಡು ಹೋಗ್ಲಿಕ್ಕೆ " ಎಂದು ಹೇಳಿದ್ದಕ್ಕೆ ಸುಬ್ಬರಾಯರು ಏನೂ ಮಾತಾಡದೆ ತೆಪ್ಪಗಿದ್ದರು. ಆಗ ಜಾನಕೀ ಬಾಯಿಯವರೆ, " ಮತ್ತೆ ; ಏನು, ನಾನು ಹೇಳಿದ್ದು ? ಇಲ್ಲೇ ಇಟ್ಟುಕೊಂಡಿದ್ದರೆ ಮುಖಕ್ಕೆ ಉಗುಳಿಯಾರು ಮಂದಿ ; ತಲೆಯೆತ್ತಿಕೊಂಡು ನಡೀಲಿಕ್ಕಾಗ ಲಾರದು ಊರೊಳಗೆ !...."

" ನಿನ್ನ ಇಷ್ಟ ಪ್ರಕಾರ ಈಗ ಮಾಡಿದರೆ, ನನ್ನ ಇಚ್ಛೆ ಪೂರೈಸಲಿಕ್ಕಿಲ್ಲ. ಮಾಧವರಾಯರು ತುಳಸಿಯನ್ನು ಕೊಡಲಾರರು. ಒಬ್ಬಳನ್ನು ಕೊಂಡು ಹೋಗಿ ಮಾಡಿದ್ದೆಲ್ಲಾ ಸಾಕು, ಇನ್ನು........! ಅನ್ನೋದಿಲ್ವೆ ? ಅಲ್ಲದೆ, ಆಗಲೇ ಅವರು ಕರೆದುಕೊಂಡು ಹೋಗ್ತೇವೆ ಎಂದಾಗ ನಾವೇ ಒಂದು ವರ್ಷ ಕಳೆಯದೆ ಆಗದು ಅಂದದ್ದು ! "

" ಅಂದುಕೊಂಡು ಕೂತ್ಕೊಳ್ಳಿ. ಹೆಣ್ಣಿಗೇನು ಬರಗಾಲ ಬಂದಿಲ್ಲ ಲೋಕದಲ್ಲಿ....ಆಗ ಹೇಳಿದ್ದರೆ....ಇದೀಗ ವಿಷಯ ಬೇರೆ ಅಲ್ವೇ ! "

" ಎಲ್ಲಾ ನನಗ್ಗೊತ್ತು ; ನೀನು ತೆಪ್ಪಗೆ ಕೂರಲ್ಲಿ ! ನೀನು ಅನ್ನ

ತಿನ್ನುತ್ತಿಯೋ........! ಗೊತ್ತಿಲ್ಲದಿದ್ದರೆ ಹೇಳಿದರಾದರೂ ತಿಳೀಬೇಕು! ಆ ಲೇಖಣಿ ಮಸಿ ಈಚೆ ತೊಗೊಂಡ್ಬಾ...." ಎಂದರು ಸುಬ್ಬರಾಯರು. ಮಾಧವರಾಯರಿಗೆ ಪತ್ರ ಬರೆಯುವ ನಿರ್ಧಾರ ಮಾಡಿದರು.

*            *            *            *

ಮಧ್ಯ ರಾತ್ರಿ. ಎಲ್ಲೆಲ್ಲೂ ನಿಶ್ಯಬ್ದ. ಅರ್ಧ ಚಂದ್ರನ ಬೆಳಕೇನೊ ಮಸಕು ಮಸಕಾಗಿ ಭೂಮಿಯ ಮೇಲೆ ಪಸರಿಸಿತ್ತು. ತಂಗಾಳಿಯ ಸಂಚಾರವೇಕೊ ಆ ರಾತ್ರಿಯಲ್ಲಿ ಲೇಶ ಕಡಿಮೆಯಾಗಿಯೇ ಇತ್ತು. ಆ ರವಶೂನ್ಯ ರಾತ್ರಿಯಲ್ಲಿ ಸಾಧಾರಣ ಇಪ್ಪತ್ತೆರಡು ಇಪ್ಪತ್ತುಮೂರು ವರ್ಷ ಪ್ರಾಯದ ತರುಣ ಕಿಶೋರ ನೋರ್ವನೇ ಹಜಾರದಲ್ಲಿ ಆ ತುದಿಯಿಂದ ಈ ತುದಿಗೆ, ಈ ತುದಿಯಿಂದ ಆ ತುದಿಗೆ, ತಾಳ್ಮೆ ತಪ್ಪಿ ಅಸ್ಥಿರ ಮನಸ್ಕನಾಗಿ ಯಾವುದೋ ಗುಪ್ತ ಚಿಂತೆ ಯಿಂದ ಬಾಧಿಸಲ್ಪಟ್ಟವನಾಗಿ ನಡೆಯುತ್ತಿದ್ದನು. ಗಾಢಾಲೋಚನೆಗೆ ಒಳಗಾಗಿ ಮಿದುಳನ್ನು ಸ್ತಿಮಿತದಲ್ಲಿರಿಸಲು ಪ್ರಯತ್ನಿಸುತ್ತಾ ಬಹು ಮೆಲ್ಲನೆ ಆಚೀಚೆ ನಡೆಯುತ್ತಿದ್ದ ಕಿಶೋರನು ಈಗ ಹೆಜ್ಜೆಗಳನ್ನು ಬಹು ವೇಗ ವಾಗಿಯೂ ದೂರದೂರವಾಗಿಯೂ ಇಡುತ್ತಿದ್ದನು. ಯಾವುದೋ ಇಚ್ಛಾಭಂಗ ದಿಂದ ಅವನ ಸರ್ವಾಂಗವೂ ಬೆವರಿಂದ ತೊಯ್ದು ಹೋಗಿದ್ದಿತು. ಕದ್ದು ಬರೆಯುತ್ತಿರುವ ವಿದ್ಯಾರ್ಥಿಯು ಪರೀಕ್ಷಕನ ಎದುರಿನಲ್ಲಿ ಯಾವ ರೀತಿಯಲ್ಲಿ ಹೆದರುವನೋ ಅಥವಾ ಒಂದು ತರದ ಹೆದರಿಕೆಗೆ ಒಳಗಾಗುವನೋ ಅದೇ ವಿಧವಾದ ಯಾವುದೋ ಬೇರೊಂದು ಹೆದರಿಕೆಗೆ ಒಳಗಾಗಿದ್ದ. ಆಚೀಚೆ ನಡೆಯುತ್ತಿದ್ದಾಗ ಒಮ್ಮೊಮ್ಮೆ ನಿಂತು ಏನನ್ನೋ ಆಲೋಚಿಸುತ್ತಿದ್ದನು. ಆದರೂ ತಾನು ಏನು ಮಾಡಬೇಕು ಎಂಬ ನಿರ್ಧಾರಕ್ಕೆ ಆತ ಬಂದ ಹಾಗೆ ಕಾಣಲಿಲ್ಲ. ಆ ನಡು ರಾತ್ರಿಯಲ್ಲಿ ಯಾವುದೋ, ಏನೋ ಕೆಟ್ಟ ಆಲೋಚನೆ ಯಲ್ಲಿ ಬಿದ್ದಿದ್ದ ಕಿಶೋರ. ಒಮ್ಮೊಮ್ಮೆ ಕೈಯಲ್ಲಿದ್ದ ಕರವಸ್ತ್ರದಿಂದ ಹಣೆಯ ಬೆವರನ್ನು ಉಜ್ಜಿಕೊಳ್ಳುತ್ತಿದ್ದನು. ಫಕ್ಕನೆ ಒಳಹೊಕ್ಕನು. ನಾಲ್ಕೆಡೆಗಳಲ್ಲೂ ತನ್ನ ಕಣ್ಣುಗಳನ್ನು ಹೊರಳಿಸಿದ. ಎಡ ಪಾರ್ಶ್ವದಲ್ಲಿ ನಡು ಕೋಣೆಯಲ್ಲಿ ಸುಬ್ಬರಾಯರು ಒಂದು ಕಂಬಳಿ ಹೊದ್ದುಕೊಂಡು ಮಲಗಿದ್ದರು. ಅಲ್ಲಿಂದ ಸ್ವಲ್ಪ ದೂರದಲ್ಲಿ ಜಾನಕೀಬಾಯಿ ಬಾಯಿ ತೆರೆದುಕೊಂಡು ಗೊರಕೆ ಹೊಡೆ ಯುತ್ತ ನಿದ್ದೆ ಮಾಡುತ್ತಿದ್ದರು. ಬಲ ಪಾರ್ಶ್ವದಲ್ಲಿ ಇರುವುದು ಅಡಿಗೆ ಕೋಣೆ.

ಅದಕ್ಕೆ ತಾಗಿದ್ದ ಕೋಣೆಯು ಮುಚ್ಚಿದ್ದರಿಂದ ಅದರೊಳಗೆ ಯಾರಾದರೂ ಇದ್ದರೊ ಇಲ್ಲವೊ ಎಂಬುದನ್ನು ವ್ಯಕ್ತಪಡಿಸುವುದು ಅಸಾಧ್ಯದ ಮಾತಾಗಿದ್ದಿತು. ಕಿಶೋರನು ನೆಟ್ಟಗೆ ಆ ಕೋಣೆಯೆಡೆಗೆ ನಡೆದನು. ನೋಡಿದನು, ಬಾಗಿಲುಗಳೆರಡನ್ನೂ ಸೇರುವಷ್ಟು ಸರಿಯಾಗಿ ಸರಿಸಿ ಮುಚ್ಚಿದ್ದಿತೇ ಹೊರತು ಚಿಲಕ ಹಾಕಿರಲಿಲ್ಲ. ಒಳಗೆ ಕತ್ತಲೆಯು ಮೂಡಿಕೊಂಡಿತ್ತು. ಆದರೂ ಬಿಳೀ ವಸ್ತ್ರ ಧರಿಸಿದ್ದ ಸ್ವರ್ಣ ಒಂದು ಮಂಚದ ಮೇಲೆ ಸೂರ್ಯನ ಬೇಗೆಯಿಂದ ಬೆಂದ ಬಾಳೆಯ ಗಿಡದಂತೆ ಬಾಡಿ ಬಿದ್ದುಕೊಂಡಿದ್ದಳು. ಒಂದು ನಿಮಿಷ ಹಾಗೇ ಅಲ್ಲೇ ನಿಂತ ಕಿಶೋರ. ಬಾಗಿಲನ್ನು ಮೆಲ್ಲನೆ ದೂಡಿದನು. ಕಾಲೊಂದನ್ನು ಎತ್ತಿ ಆ ಕೋಣೆಯೊಳಗಿಟ್ಟನು. ಒಂದು ಕ್ಷಣ ಹಿಂತೆಗೆದನು. ಮತ್ತೊಮ್ಮೆ ತನ್ನ ಪಾದವನ್ನು ಒಳಗಿಟ್ಟನು. ಈ ಸಾರಿ ಧೈರ್ಯವಾಗಿ ತನ್ನ ಇನ್ನೊಂದು ಪಾದವನ್ನೂ ಎತ್ತಿ ಒಳಗಿಟ್ಟನು. ಮೈ ಕೈ ಬೆವರಿತು ; ಇಡೀ ದೇಹ ತೊಯ್ದು ಹೋಯಿತು. ಇಡೀ ದೇಹ ಥರಥರನೆ ನಡುಗುತ್ತಿತ್ತು. ಕಿಶೋರ ಅಚಲನಾಗಿ ನಿಂತ ; ನಿಂತು ತನ್ನ ಕರವಸ್ತ್ರ ತೆಗೆದು ಕೈ, ಮೊಣಕೈ, ಹಣೆ, ಮುಖ, ಕೊರಳು ಎಲ್ಲವನ್ನೂ ಚೆನ್ನಾಗಿ ಒರಸಿಕೊಂಡು ಕರವಸ್ತ್ರ ಕಿಸೆಯೊಳಗಿಟ್ಟ. ಏಕೋ ಬಗ್ಗಿದ. ಜೇಬಿನಿಂದ ಮತ್ತೊಮ್ಮೆ ಕರವಸ್ತ್ರ ತೆಗೆದ. ಮಲಗಿದ್ದ ಸ್ವರ್ಣಳ ನೆತ್ತಿಯಲ್ಲಿ ಮುತ್ತಿನ ಮಣಿಯಂತೆ ಎದ್ದು ನಿಂತಿದ್ದ ಬೆವರ ಹನಿಯನ್ನು ಮೆಲ್ಲಗೆ ಒರಸಿ ತೆಗೆದನು. ಮಲಗಿದ್ದ ಸ್ವರ್ಣ ಹಾಗೇ ದೀರ್ಘವಾದ ಒಂದು ಬಿಸಿ ಉಸಿರು ಬಿಟ್ಟಳು. ಕಿಶೋರನು ಕೂಡಲೆ ನೆಟ್ಟಗೆ ನಿಂತು ಸ್ವಲ್ಪ ಹಿಂದಕ್ಕೆ ಸರಿದನು—ಮತ್ತೆ ಹತ್ತಿರಕ್ಕೆ ಸರಿದನು. ಮಲಗಿದ್ದ ಸ್ವರ್ಣ ಹಾಗೇ ಸರಿದು ಆಚೆ ಪಾರ್ಶ್ವಕ್ಕೆ ಮುಖ ಮಾಡಿ ಮಲಗಿದ್ದುದರಿಂದ ಕಿಶೋರ ಅಳುಕಿ ಅಳುಕಿ ಮಂಚದ ಒಂದು ಭಾಗದಲ್ಲಿ ಕುಳಿತನು. ತನ್ನ ಬಲಗೈಯಿಂದ ಮಲಗಿದ್ದ ಸ್ವರ್ಣಳ ಶಿರವನ್ನು ಪ್ರಶಾಂತ ರೀತಿಯಲ್ಲಿ ತಡವಿದನು. ಮಲಗಿದ್ದ ಸ್ವರ್ಣ "ಹಾ! ನಾಥ!" ಎಂದಳು. ಸಮೀಪ ಕುಳಿತಿದ್ದ ಕಿಶೋರನು, "ನಿಜವಾಗಿಯೂ!—ನನ್ನನ್ನು ಹಾಗೆ ಸಂಬೋಧಿಸುವೆಯಾ! ಹಾಗಾದರೆ........ಛಿ! ನಾನೇಕೆ ಹುಚ್ಚನಂತೆ ವರ್ತಿಸುತ್ತೇನೆ" ಎಂದು ಮೃದುವಾಗಿ ಗಾಳಿಗೂ ಕೂಡ ತಿಳಿಯದಂತೆ ಹೇಳುತ್ತಾ, ಮತ್ತೆ ಸ್ವರ್ಣಳ ತಲೆಯನ್ನು ಮೆಲ್ಲಮೆಲ್ಲನೆ ಸವರಲಾರಂಭಿಸಿದನು. ಮಲಗಿದ್ದ ಸ್ವರ್ಣ ಒಮ್ಮೆಲೆ ತಿರುಗಲು ಅವಳ ಕೈ ಕುಳಿತಿದ್ದ

ಕಿಶೋರನ ಕಪಾಳಕ್ಕೆ ತಾಗಿ ಎಚ್ಚರವಾಯಿತು. " ಹಾ ಆಂ! " ಎಂದು ಚೀರ ಬೇಕೆಂದು ಬಾಯ್ದೆರೆದಳು. ಆದರೆ ಭಯದಿಂದ ನಾಲಗೆ ಒಳಗೆ ಎಳೆದಂತಾಗಿ ಚಿತ್ತಭ್ರಮೆ ಹಿಡಿದಂತೆ ಎದ್ದು ಕುಳಿತಳು. ಕಣ್ಣಾರಳಿಸಿ ತಿಕ್ಕಿಕೊಂಡು ನೋಡಿ ದಳು. ನೋಡಿ ಅವಾಕ್ಕಾದಳು! ತನ್ನ ಕಣ್ಣುಗಳನ್ನೇ ತಾನು ನಂಬಲಾರ ದಾದಳು. ಕೊನೆಗೆ ಬಹು ದುಃಖದಿಂದ " ತಮ್ಮಾ! " ಎಂದಳು.

" ಅತ್ತಿಗೆ! " ಎಂದು ಅತ್ತಿಗೆಯ ಮುಖವನ್ನು ನೋಡಿದ ಕಿಶೋರ. ಸ್ವರ್ಣಳ ಮುಖದಲ್ಲಿ ತನ್ನನ್ನು ತಾನೇ ಬಲಿಗೊಡಲು ಸಿದ್ಧವಾದ, ಬಾಯಿಲ್ಲದ ಜೀವಿಯ ಮುಖದಲ್ಲಿ ತೋರಬಹುದಾದ ಒಂದು ಛಾಯೆ, ಜಗದಿಚ್ಛೆಗಳಲ್ಲಿ, ಇಹಭೋಗಸುಖಾಭಿಲಾಷೆಗಳಲ್ಲಿ ಬಯಕೆಯೆಂಬುದು ಲವಲೇಶವೂ ಉಳಿದಿರ ದಂತಹ ನಿಸ್ವಾರ್ಥ ತೇಜವು ರೂಪವೆತ್ತಿ ಕುಣಿಯುತ್ತಿದ್ದಂತೆ ಭಾಸವಾಯಿತು, ಕಿಶೋರನಿಗಾಗ! ಆತನ ಮುಖದಲ್ಲಿ ಎದ್ದು ಕಾಣುತ್ತಿದ್ದುದು 'ತಾಯೆ, ನನ್ನನ್ನು ಕ್ಷಮಿಸು! ' ಎಂಬ ಅತೀವ ದೀನ ಭಾವವೊಂದೇ.

ಕಿಶೋರ ತಲೆ ಕೆಳಗೆ ಹಾಕಿದ.

" ತಮ್ಮಾ, ಇದಕ್ಕೆ ನೀನು ಬಿ.ಎ. ಕಲಿತದ್ದೇ? ಇಂದಿನ ಹುಡುಗರು ಹೆಚ್ಚಿನ ವಿದ್ಯೆಯನ್ನು ಕಲಿಯುತ್ತಾರೆ. ಆದರೆ ದುರ್ಬುದ್ಧಿಯಿಂದ ಅದರ ಬೆಲೆ, ಗೌರವ, ಫಲ ಎಲ್ಲವನ್ನೂ ಕಳೆದುಕೊಳ್ಳುತ್ತಾರೆ. ನಿನಗೇಕೆ ಈ ಕೀಳು ದೇಹದ ಆಸೆ? ನಾನು ಈ ಲೋಕದಲ್ಲಿ ಹತಭಾಗ್ಯೆ—ಗಂಡ ಸತ್ತ ವಿಧವೆ—ಮುಂಡೆ ಯಲ್ಲವೆ? ಬೇಡ ತಮ್ಮಾ.... ಕಿಶೋರ.... ನಿನಗಿದು ಬೇಡ.... ಕರ್ಮ.... ಕರ್ಮ ದಲ್ಲಿ ನಿರ್ಮಲತೆಯನ್ನು ಕಲಿ. ಧರ್ಮದ ಮರ್ಮ ಕರ್ಮದ ನಿರ್ಮಲತೆಯಲ್ಲಿದೆ. ಕರ್ಮದ ನಿರ್ಮಲತೆ ಮನಸ್ಸಿನ ಸರಳತೆ ಮತ್ತು ಯಥಾರ್ಥತೆಯನ್ನವಲಂಬಿಸಿದೆ. ಇದನ್ನು ಜ್ಞಾಪಕದಲ್ಲಿಟ್ಟುಕೊಂಡು ನಡೆದರೆ ದೇವರ ದಯೆ ನಿನಗೆ ಒಳ್ಳೇದು ಮಾಡೀತು. ಇಂಥ ಪಾಪದ ಕೆಲಸಕ್ಕೆ ಸುಮ್ಮನೆ ನಿನ್ನ ಮನಸ್ಸನ್ನು ಎರವಿಡ ಬೇಡ. ಇದು ನಿನಗೆ ಒಳ್ಳೆಯದಲ್ಲ. ಇದು ನಿನಗೆ ಹಿತವೆ? ವಿಷಯ ಸುಖ ಗಳು ಆರಂಭದಲ್ಲಿ ಹಿತವಾಗಿ ತೋರಿದರೂ ಪರಿಣಾಮದಲ್ಲಿ ಅಗ್ನಿಯಂತೆ ಭೀಕರ ವಾಗಿರುತ್ತವೆ. ಇಂದಿನಿಂದಾದರೂ ನೀನು ಸದ್ಗುಣಿಯಾಗಬೇಕು. ಹಾಗೆಂದು ನಿನಗಾಗಿ ನಾನು ದೇವರಲ್ಲಿ ಮೊರೆಯಿಡುತ್ತೇನೆ. ನಾನು ಯಾರು? ನಿನ್ನ ಅಣ್ಣನ ಹೆಂಡತಿ—ಅಣ್ಣನ ಹೆಂಡತಿ ಯಾರಿಗೆ ಸರಿಸಮಾನ—ತಾಯಿಗೆ,

ಅಲ್ಲವೆ ?—ಇದನ್ನು ಬಿ.ಎ. ಕಲಿತ ನೀನು ಎಷ್ಟು ಕಾದಂಬರಿಗಳಲ್ಲಿ ಓದಿಲ್ಲ. ಆದರೆ ಅದರ ಉಪಯೋಗ ಬೇಕಾದಲ್ಲಿ ತಿಳಿದಿಲ್ಲವೇ ನೀನು ? ಬಾ, ನನ್ನೊಟ್ಟಿಗೆ—" ಎಂದು ಸ್ವರ್ಣ ಎದ್ದು ಹೊರಟಳು. ಇಷ್ಟು ಶಾಂತವಾಗಿ ಆದರೂ ಗಂಭೀರವಾಗಿ ಉಪದೇಶಿಸಿದ ಅತ್ತಿಗೆಯನ್ನು ಹಿಂಬಾಲಿಸಿ ಕಿಶೋರ ನಡೆದ.

ನಾದಿನಿ ಮೈದುನನನ್ನು ಕರೆದುಕೊಂಡು ದೇವರ ಕೋಣೆಗೆ ಹೋಗಿ, "ತಮ್ಮಾ, ಬಾ ! ದೇವರ ಮುಂದೆ ಮಂಡಿ ಹಾಕಿ ಕೂರು, ಕಣ್ಣು ಮುಚ್ಚು, ಕೈ ಜೋಡಿಸು ; ನಾನು ಹೇಳಿದಂತೆ ಹೇಳು. ಹೃದಯವನ್ನು ನಿರ್ಮಲವಾಗಿರಿಸು." ಈ ರೀತಿಯಾಗಿ ಹೇಳಲು ಅವನು ಚಿಕ್ಕ ಮಕ್ಕಳಂತೆ ವಿಧೇಯತೆಯಿಂದ ನಾದಿನಿಯ ಸೂಚನೆಯಂತೆ ನಡೆದುದನ್ನು ನೋಡಿದರೆ ಯಾರಿಗೂ ಆಶ್ಚರ್ಯವಾಗುವಂತಿತ್ತು ! ನಾದಿನಿ, "ತಮ್ಮಾ, ಮನಸ್ಸಿನಲ್ಲಿ ನೆನೆದುಕೊ, ನಿನ್ನ ಮುಂದಿರುವ ಶಿಲಾ ಪ್ರತಿಮೆ ಯಾರದು ? ಕಿಶೋರನದಲ್ಲವೆ ? ಅಂದರೆ ಶ್ರೀಕೃಷ್ಣ ಪರಮಾತ್ಮನದ್ದು ; ಅವನನ್ನು ಮನಃಪೂರ್ವಕವಾಗಿ ನಿನ್ನ ಹೃದಯದೊಳಗೆ ಆರಾಧಿಸು. ಈಗ ನಾನು ಹೇಳುವ ಮಾತುಗಳನ್ನು ನಿನ್ನ ಬಾಯಾರೆ ಹೇಳು. 'ದೇವಾ, ಇಂದು ಈ ನನ್ನ ಮನಸ್ಸು ಪಾಪದ ಕಡೆಗೆ ಹೋದುದಕ್ಕಾಗಿ ಕ್ಷಮಿಸು. ಇಂದಿನಿಂದ ನನ್ನನ್ನು ಪರಿಶುದ್ಧನನ್ನಾಗಿ ಮಾಡು. ಇನ್ನುಮುಂದೆ ನಾನು ಪಾಪ ಕೃತ್ಯಗಳ ಚಿಂತೆಯನ್ನು ಮಾಡದಿರಲು ನನಗೆ ಸದ್ಬುದ್ಧಿಯನ್ನು ದಯಪಾಲಿಸು.' ಸಾಕು, ಎದ್ದು ಹೋಗಿ ವಿರಾಮ ಮಾಡು."

ಕಿಶೋರ ಕಣ್ಣು ಬಿಟ್ಟು ನೋಡಿದ. ಸ್ವರ್ಣ ಅಲ್ಲಿ ಇರಲಿಲ್ಲ. ಅವಳ ಕಾಲಿಗೆ ತನ್ನ ತಲೆಯನ್ನು ಚಜ್ಜಿಕೊಳ್ಳಬೇಕೆಂದು ಮಾಡಿದ್ದನೇನೋ, ಸುತ್ತುಮುತ್ತಲೂ ಆಕೆಯನ್ನು ನೋಡಿದ. ಆಕೆ ಹೋಗಿ ಬಿಟ್ಟಿದ್ದಳು. ಪಿಟ್ಟಿಂದಾಡದೆ ತನ್ನ ತಾವನ್ನು ಸೇರಿದ. ಸೇರಿ ತನ್ನ ಹಾಸಿಗೆ ಬಿಡಿಸಿ ಮಂಚದ ಮೇಲೆ ಅಡ್ಡಾದ. "........ಹೌದು ! ನಿಜವಾಗಿಯೂ ಅತ್ತಿಗೆ ಪವಿತ್ರಳಿರುವಳು. ಅವಳಲ್ಲಿ ತಪ್ಪು ಭಾವನೆ ತಾಳಿದ ನಾನೇ ಪಾಪಿ ! ಆದರೆ, ಅವಳ ಹಿತವಚನಗಳಿಂದ ನಾನು ಪರಿಶುದ್ಧನಾಗಿರುವೆನು. ತನ್ನ ಅಮೃತವಾಣಿಗಳಿಂದ ನನ್ನ ಹೃದಯದಲ್ಲಿ ಪರಮಾತ್ಮ ಸಾಕ್ಷಾತ್ಕಾರಗೊಳಿಸಿ ಸನ್ಮಾರ್ಗದೆಡೆಗೆ ಮುನ್ನಡೆದು ಸಾಗಿ ಜ್ಞಾನಜ್ಯೋತಿಯನಿತ್ತಳು ! ಕಾಮ ಪಿತ್ತೇರಿದ್ದು, ಅದಕ್ಕೆ ನನ್ನ ಹೃದಯದಲ್ಲಿ ಆಶ್ರಯವಿತ್ತು. ಅದರ ಗುಲಾಮನಾಗಿ ಕುರುಡನಂತೆ ವರ್ತಿಸಿದ ಈ ನನ್ನ

ದೇಹಕ್ಕೆ ಧಿಕ್ಕಾರ! ನೀಚ! ಅಧಮ!........ಆ ಕುಲಟೆಯ ಪಾಶದಲ್ಲಿ ಬಲಿ ಬಿದ್ದುದರಿಂದ ನನ್ನ ಪಾಡು ಹೀಗಾಯಿತು! ಇನ್ನು ನಾನೀ........" ಎಂದು ಏನೇನೋ ಹುಚ್ಚನಂತೆ ಹರಟುತ್ತ ಕಡೆಯ ವಾಕ್ಯವನ್ನು ಪೂರೈಸದೆ ಎದ್ದು ಆ ನಸಕು ಬೆಳಕಿನಲ್ಲಿ ಹೊರಟು ಎಲ್ಲಿಯೋ ಮರೆಯಾದ.

* * * *

ಸ್ವಪ್ನ ಎಂಟನೆ ತರಗತಿಯವರೆಗೆ ತನ್ನ ಗ್ರಾಮದಲ್ಲಿ ಕಲಿಯುತ್ತಿದ್ದಾಗ ಕಿಶೋರನ ಸಹಪಾಠಿಯಾಗಿದ್ದಳು. ಕಿಶೋರ ಅನಂತರ ಮದ್ರಾಸಿಗೆ ಪ್ರೌಢ ಶಿಕ್ಷಣಕ್ಕೆ ತೆರಳಿದ್ದನಾದರೂ ಪತ್ರಗಳು ಅಲ್ಲಿಂದಿಲ್ಲಿಗೆ ಹೋಗುತ್ತಾ ಬರುತ್ತಾ ಇದ್ದವು. ಆದರೆ ಸ್ವಪ್ನಳನ್ನು ಕಿಶೋರ ಪೂರ್ಣ ತಿಳಿದವನಾಗಿರಲಿಲ್ಲ. ಸ್ವಪ್ನ ವ್ಯಭಿಚಾರಿಣಿಯ ಮಗಳು. ಸೂಳೆಯ ಮಗಳು ಸೂಳೆಯಾಗುವುದರಲ್ಲಿ ವಿಸ್ಮಯವಿಲ್ಲವಷ್ಟೆ! ಅಂತೆಯೆ ತನ್ನ ಶಿಕ್ಷಣವನ್ನು ಅಲ್ಲಿಗೇ ಮುಗಿಸಿ, ಕಸಬನ್ನು ಆರಂಭಿಸಿ ಹಣಸಂಪಾದನೆಗೆ ತೊಡಗಿದ್ದಳು—ಸ್ವಪ್ನ. ಇದ್ದ ತಾಯಿ ಒಬ್ಬಳು ಇಹಲೋಕದ ನಿಕಟಸಂಬಂಧವನ್ನು ಬಿಟ್ಟು ಪರಲೋಕವನ್ನೈದಿದಳು. ಆಗ ಸ್ವಪ್ನ ಸ್ವತಂತ್ರಳಾದಳು. ಸ್ವಪ್ನ ಸೂಳೆಯಾದರೇನು 'ಲಕ್ಷ್ಮಿ' ಕಾಲು ಮುರಿದುಕೊಂಡು ಬಿದ್ದಿದಾಳೆ, ಅವಳ ಕಾಲ ಬುಡದಲ್ಲಿ. ಮಾನಮರ್ಯಾದೆಯಿಂದ ತುಂಬಿದ ಸ್ತ್ರೀಯರು, ಉತ್ತಮರಾದ ಸಂಬಂಧಿಕರು, ಪತಿವ್ರತಾ ಶಿರೋಮಣಿಗಳು ಅವಳ ಮನೆಯ ಮುಂದೆ ಕೂಡ ಸುಳಿಯದೆ ದೂರ ನಿಂತು ಮೂಗು ಮುರಿಯುತ್ತಿದ್ದರಾದರೂ, ಅವರ ಗಂಡಂದಿರು ಕತ್ತಲೆಯಾಗುವುದನ್ನು ಕಾದಿರುತ್ತಾರೆ, ಸ್ವಪ್ನಳಲ್ಲಿಗೆ ಹೋಗಿ ಸ್ವಪ್ನ ಸ್ವರಾಜ್ಯವನ್ನು ನೋಡಿ ಆನಂದಿಸುವುದಕ್ಕಾಗಿ! ರಾತ್ರಿ ಗಂಟೆ ಎಂಟಾಗಬೇಕಾದರೆ ವಿದ್ಯುದ್ದೀಪಗಳಿಂದ ಸ್ವಪ್ನಳ ಮನೆ ಸ್ವರ್ಗವಾಗಿ ಪರಿಣಮಿಸುವುದು. ಆಗ ನೋಡಬೇಕು, ಹೇಟ್–ಬೂಟ್–ಸೂಟ್–ಕೋಟ್–ನೆಕ್ಟೈ ಧರಿಸಿದ ಮಾನ್ಯಮಹಾಶಯರುಗಳ, ರೇಶ್ಮೆಯ ಅಂಗಿ ಬಟ್ಟೆ, ಜರದಂಗ ವಸ್ತ್ರಗಳನ್ನು ತೊಟ್ಟ ಬ್ರಾಹ್ಮಣ–ಭಟ್ಟಾಚಾರ್ಯ–ಶಾಸ್ತ್ರಿಗಳ, ಲೋಕೋದ್ಧಾರಕರ, ಸಮಾಜ ಸುಧಾರಕರ, ವೇಶ್ಯಾವೃತ್ತಿಯನ್ನು ನಿರ್ಮೂಲ ಮಾಡಲು ಹೆಣಗುವವರ ಆಗಮನವಾಗುವುದು, ಸ್ವಪ್ನಳ ಸ್ವರ್ಗಸಾಮ್ರಾಜ್ಯಕ್ಕೆ!—ಕತ್ತಲೆಯಲ್ಲಿ ಅವಿತವಿತು, ಕದ್ದು ಕದ್ದು! ಇವರಲ್ಲಿ ಕೆಲವರು ದೈವಭಕ್ತರಂತೂ ಯಾರ ಕಣ್ಣು ತಪ್ಪಿಸಿದರೂ ದೇವರ ದೃಷ್ಟಿ

ಯಿಂದ ತಪ್ಪಿಸಿಕೊಳ್ಳುವುದು ಯಾರಿಂದಲೂ ಸಾಧ್ಯವಿಲ್ಲವೆಂದು ಲೋಕಕ್ಕೆ ಸಾರುವವರು !........ತಾವು ಮಾಡುವುದೊಂದನ್ನೂ ದೇವರು ನೋಡನೆಂಬ ಅಜ್ಞಾನದಿಂದ ನಡೆಯುವ ಮೂಢರು !

ಅಂಥಾ ಆ ಸುವೇಳೆಯಲ್ಲಿ ಕಿಶೋರನ ಆಗಮನವೂ ಆಯಿತು. ದಿನದಿನ ಸ್ವಪ್ನಳ ಮನೆಗೆ ಕಿಶೋರನ ಸುಸ್ವಾಗತವಾಯಿತು. ವಿಷಯಲಾಲಸೆಗೆ ಪ್ರೇಮಸುಧೆಯೆಂದು ಹೆಸರಿತ್ತು ಅದನ್ನು ಸ್ವೀಕರಿಸಿದುದೂ ಆಯಿತು. ಸ್ವಪ್ನಳ ಸ್ವಪ್ನ ಸಾಮ್ರಾಜ್ಯದಲ್ಲಿ ಲೋಲಾಡಿದುದೂ ಆಯಿತು. ಇನ್ನೇನು, ತನಗೆ ಸ್ವರ್ಗ ಖಂಡಿತ ಎಂದು ವಿಚಾರಿಸಿದ್ದ ಕಿಶೋರ.

ಒಮ್ಮೆ ಕಿಶೋರ ಸ್ವಪ್ನಳ ಮನೆಯ ಮೆಟ್ಟಲಿಗೆ ಕಾಲಿಡುವಾಗ ಒಮ್ಮೆಲೆ ದಿಗಿಲು ಬಿದ್ದು ಹಿಂದೆ ಸರಿದ. ಸ್ವಪ್ನ ಪರಪುರುಷನೋರ್ವನ ಸಮೀಪ ಕುಳಿತು ಸಂಭಾಷಿಸುತ್ತಿದ್ದಳು. ಆದರೆ ಕಿಶೋರನನ್ನು ಕಂಡೊಡನೆ ಅವಳು ಎದ್ದು ಬಂದು ಅವನಿಗೆ ಸ್ವಾಗತವಿತ್ತಳು. ಕಿಶೋರ ಕೃತ್ರಿಮವೆಣಿಸದೆ ಸರಳತೆಯಿಂದ ಒಳಗೆ ಹೋದ. ಸ್ವಪ್ನ ಆ ಅಪರಿಚಿತ ವ್ಯಕ್ತಿಯನ್ನು ತೋರಿಸಿ, "ಇವರು ನನ್ನ ತಾಯಿಯ ಅಣ್ಣನ ಹೆಂಡತಿಯ ತಂಗಿಯ ಮಗ—ಮಿಸ್ಟರ್ ಮಧುಕರ ರಾಮ ರಾವ್" ಎಂದು ಪರಿಚಯ ಮಾಡಿಕೊಟ್ಟಳು. ಅಷ್ಟನ್ನು ತಿಳಿದುಕೊಂಡ ತರುವಾಯ ಕಿಶೋರನು ಸ್ವಲ್ಪ ಹೊತ್ತು ಕುಳಿತು ಅಲ್ಪಸ್ವಲ್ಪ ಮಾತಾಡಿ ಹಿಂತೆರಳಿದನು. ಮಾರನೆ ದಿನ ಕಿಶೋರನು ಅಲ್ಲಿಗೆ ಹೋದಾಗ 'ಸ್ವಪ್ನ ನಿನ್ನೆ ಬಂದಿದ್ದವರೊಂದಿಗೆ ಊರಿಗೆ ಹೋಗಿದ್ದಾಳೆ, ಬರಲು ಎರಡು ಮೂರು ತಿಂಗಳ ಅವಧಿಯಿದೆ' ಎಂಬುದಾಗಿ ತಿಳಿದು ಬಂತು—ಅಲ್ಲಿಯ ಊಳಿಗದವನಿಂದ. ಆದರೆ ಯಾವ ಊರಿಗೆ ಹೋಗಿದ್ದಾಳೆಂಬುದು ಮಾತ್ರ ಆತನಿಂದ ತಿಳಿದು ಬರಲಿಲ್ಲ; ಕೇಳಿದ್ದಕ್ಕೆ, ಗೊತ್ತಿಲ್ಲವೆಂದುಬಿಟ್ಟ. ಅಲ್ಲಿಂದ ಹಿಂತಿರುಗಿದ ಕಿಶೋರನಿಗೆ ಜಗತ್ತೇ ಶೂನ್ಯವಾಗಿ ಪರಿಣಮಿಸಿತು. ಸ್ವಪ್ನದಲ್ಲಿ ಸ್ವಪ್ನಳು ಬರಲಾರಂಭಿಸಿದಳು. ಆದರೆ ಸ್ವಪ್ನಳೆಲ್ಲಿ! ಚಿತ್ತಭ್ರಮೆ ಹಿಡಿಯಿತು. ತಲೆಯೊಳಗೆ ಭೂತ ಪ್ರವೇಶವಾಯಿತು. ಭೂತ ದುರ್ಬುದ್ಧಿಯನ್ನು ಸೂಚಿಸಿತು. ಅದರ ತರುವಾಯ ನಡೆದುದೇ ಆ ವಿಷಮ ಘಟನೆ!

* * * *

ಬೆಳಿಗ್ಗೆ ಸೂರ್ಯನ ಬೆಳಕು ಮನೆಯೊಳಗೆ ಬಿದ್ದಮೇಲೆ ಜಾನಕೀ ಬಾಯಿಯವರು ಏಳಲಾರದೆ ಎದ್ದು " ಅಯ್ಯೋ, ಹೊತ್ತು ಬಹಳ ಆಯಿತಲ್ಲಾ. ಸ್ವರ್ಣಾ, ನನ್ನನ್ನು ಕರೀಬಾರದಿತ್ತೇನೆ—ತಂಬಿಗೆ ನೀರು ತಾರೆ! " ಎಂದು ಗಟ್ಟಿಯಾಗಿ ಅಡಿಗೆ ಕೋಣೆಗೆ ಕೇಳುವಂತೆ ಹೇಳಿದರು. ಆದರೆ ನೀರು ಕೇಳಿ ಗಂಟೆ ಒಂದಾಗಿದ್ದರೂ ಸೊಸೆಯ ಸುಳಿವೇ ಇಲ್ಲ! ಅತ್ತೆ ಮೆಲ್ಲಗೆ ಎದ್ದು ಸೊಸೆಯನ್ನು ಹುಡುಕಿಕೊಂಡು, " ಏನೇ, ಕಿವುಡಾಯಿತೇನೇ ? ತಂಬಿಗೆ ನೀರು ತಾ, ನೀರು ತಾ ಅಂತ ಎಷ್ಟು ಬೊಬ್ಬೆ ಹೊಡೆದೆ. ಸುಮ್ಮಗೆ........" ಎಂದು ಕೋಪದಿಂದ ಮೆಲ್ಲಗೆ ನಡೆಯುತ್ತಾ ಬಂದು ನೋಡಿದರು. ಅಡಿಗೆ ಕೋಣೆಯಲ್ಲಿ ಸ್ವರ್ಣಳಿಲ್ಲ! ಎಲ್ಲೆಲ್ಲಿ ಹುಡುಕಿದರೂ ಸ್ವರ್ಣಳಿಲ್ಲ! ಮಲಗಿದ್ದ ಹಾಸಿಗೆ ಸುತ್ತಿದೆ! ಆದರೆ ಮುಸುರೆ ತೊಳೆದಿರಲಿಲ್ಲ, ಅಂಗಳ ಗುಡಿಸಿರಲಿಲ್ಲ. ಏನು? ಸ್ವರ್ಣಳೆಲ್ಲಿ! ಎಲ್ಲಿ ಮಾಯವಾದಳು! ಜಾನಕೀಬಾಯಿ ಗಂಡನನ್ನು ಕರೆದರು. ಸುಬ್ಬರಾಯರೂ ಎದ್ದು ಹುಡುಕಿದರು. ಕಡೆಗೆ ಮಗನ ಮಲಗುವ ಕೋಣೆಗೆ ಬಂದು ಅವನಿಗೆ ತಿಳಿಸೋಣವೆಂದು " ಕಿಶೋರ " ಎಂದು ಕರೆದರು! ಕಿಶೋರನೆಲ್ಲಿ! ಹಾಸಿಗೆ ಕೂಡ ಮಡಿಸಿರಲಿಲ್ಲ!

ಕಿಶೋರ-ಸ್ವರ್ಣರ ಮಾಯ! ಮುದುಕ ಮುದುಕಿಯರಿಬ್ಬರೂ ತಲೆಗೆ ಕೈಯಿಟ್ಟುಕೊಂಡು ಗೋಳಿಟ್ಟರು. ಕೇಳುವವರಾರು!—

೩

ಮುಂಜಾನೆ ಸೂರ್ಯ ಮೂಡಿರಲಿಲ್ಲ. ವಿಪರೀತ ಚಳಿ. ನಿಶ್ಶಬ್ದವಾಗಿದ್ದು, ತಂಪುಗಾಳಿ ಹಾಯಾಗಿ ಬೀಸುತ್ತಿದ್ದು, ಸ್ಥಳ ಪ್ರಶಾಂತಮಯವಾಗಿದ್ದಿತು. ಮುಖಕ್ಕೆ ಮುಖ ಕಾಣದ ಆ ವೇಳೆಯಲ್ಲಿ, ದೃಢದೇಹಿಯಾದ ಪೂಜ್ಯ ಯೋಗಿವರ್ಯನೋರ್ವನು ನದಿಯೊಂದರ ದಂಡೆಯ ಮೇಲೆ ಕುಳಿತು ಜಪ ತಪಾದಿಗಳನ್ನು ಮಾಡುತ್ತಿದ್ದನು. ಸಮಯ ಸ್ವಲ್ಪ ಕಳೆಯಿತು. ಬೆಳಕು ಕೊಂಚ ಕೊಂಚವಾಗಿ ತಲೆದೋರಲಾರಂಭಿಸಿತು. ತನ್ನ ಜಪತಪಾದಿಗಳು ತೀರಲು ಸನ್ಯಾಸಿ ಎದ್ದು ತನ್ನ ದಂಡ ಕಮಂಡಲಗಳೇ ಮುಂತಾದ ಸಾಮಗ್ರಿಗಳನ್ನು ಎತ್ತಿಕೊಂಡು, ಮರದ ಪಾದರಕ್ಷೆಗಳನ್ನು ಹಾಕಿಕೊಂಡು, ದಾರಿ ಹಿಡಿದನು. ಹತ್ತಾರು ಗಜ ಕಳೆದು ಮುಂದೆ ಕಾಲಡಿ

ಯಿಡುತ್ತಿರಲು ಸಮೀಪದಲ್ಲೇ ಕೂಸೊಂದರ ಕಿರುಚುವ ದನಿ ಕೇಳಿಬರಲು, ಯೋಗಿಯು ಆ ದಿಕ್ಕಿಗೆ ಮುಖ ಮಾಡಿ ನಡೆಯಲಾರಂಭಿಸಿದನು. ಮುಂದೆ ಹೋಗುತ್ತಿರಲು ಅಳುವ ದನಿ ಸಂಪೂರ್ಣವಾಗಿ ಶೂನ್ಯವಾಯಿತು. ಆಗ ಬಂದ ದಾರಿಯನ್ನೇ ಹಿಮ್ಮೆಟ್ಟುವುದು ಹಿತವಿಲ್ಲವೆಂದು ಭಾವಿಸಿ ಅಲ್ಲಿಂದಲೇ ಇನ್ನೊಂದು ಪಾರ್ಶ್ವಕ್ಕೆ ತಿರುಗಿ ತನ್ನ ಸ್ಥಾನವನ್ನು ಕುರಿತು ನಡೆಯತೊಡಗಿದನು. ಹೀಗೆ ಸಾವಧಾನ ಚಿತ್ತನಾಗಿ ಮುಂದೆ ನಡೆಯುವಾಗ, ಸನ್ಯಾಸಿ ಒಮ್ಮೆಲೆ ಬೆಚ್ಚಿ ಬಿದ್ದು ಹಿಂದೆ ಸರಿದು, ತನ್ನ ಅಡಿ ಜಾರಲು ಕಾರಣವೇನೆಂಬುದನ್ನರಿಯದೆ ತಲೆಯೆತ್ತಿ ಮುಂದೆ ನೋಡಲು, ಸರ್ಪವೊಂದು ದೂರದಲ್ಲಿ ತನ್ನ ಹೆಡೆ ಬಿಡಿಸಿ ಸನ್ಯಾಸಿಯನ್ನೇ ನೆಟ್ಟ ದಿಟ್ಟಿಯಿಂದ ನೋಡುತ್ತಿದ್ದಿತು. ಏನೂ ಮಾಡದೆ ಸುಮ್ಮನೆ ನಿಂತನು. ಹಾವು ತನ್ನ ದಾರಿ ಹಿಡಿದು ಹೋಯಿತು.

ರಮಾನಂದ ಸ್ವಾಮಿಗಳು ಸಂತೋಷದಿಂದ ಕೆಳಗಿಟ್ಟಿದ್ದ ಕಮಂಡಲ ವನ್ನೆತ್ತಲು ಬಗ್ಗಿ, ಏಳುತ್ತಿರಲು ಎರಡು ಗಜ ದೂರದಲ್ಲಿ ಚಿಕ್ಕ ಮಗುವೊಂದನ್ನು ಹಾಸಿಗೆಯಂತೆ ಪಸರಿಸಿದ್ದ ತಳಿರೆಲೆಗಳ ಗುಂಪಿನ ಮೇಲೆ ಮಲಗಿಸಿದ್ದುದನ್ನು ನೋಡಿ, ಕುತೂಹಲದಿಂದ ಅದರ ಬಳಿಗೆ ಹೋಗಿ ನೋಡಲು, ಮಗುವಿನ ಎದೆಯ ಮೇಲೆ ಒಂದು ಚಿನ್ನದುಂಗುರವು ಥಳಥಳಿಸುತ್ತಿತ್ತು ; ಮತ್ತೆ ಅದರಡಿ ಯಲ್ಲೊಂದು ಚೀಟಿಯೂ ಇದ್ದುದು ಕಾಣಬಂತು. ಸನ್ಯಾಸಿ ಆ ಚೀಟಿಯನ್ನು ತೆಗೆದು ಬಿಡಿಸಿ, ಅಕ್ಷರಗಳನ್ನು ಓದಿ, ಮಗುವನ್ನೆತ್ತಿಕೊಂಡು ತನ್ನ ದಾರಿ ಹಿಡಿದನು.

ವಿಸ್ತಾರವಾದ ಒಂದು ತೋಟ. ಸುತ್ತಲೂ ಬಯಲುಗಳು. ತೋಟದ ಮಧ್ಯೆ ಒಂದು ಭವನ. ಅದರ ಮುಖದೆದುರು 'ರಮಾನಂದ ಆರೋಗ್ಯಾ ಶ್ರಮ' ಎಂದು ಬೆಳ್ಳಿಯ ಅಕ್ಷರಗಳಿಂದ ಮುದ್ರಿತವಾದ ಕರಿಯ ಹಲಗೆಯನ್ನು ತೂಗಹಾಕಿದ್ದರು. ದೂರದಲ್ಲಿ ರಮಾನಂದರು ಆ ಮಗುವನ್ನೆತ್ತಿಕೊಂಡು ಅದೇ ಆಶ್ರಮಾಭಿಮುಖವಾಗಿ ನಡೆದರು. ಹಿರಿಯರಿಂದ ಹಿಡಿದು ಕಿರಿಯರ ವರೆಗಿನ ಸೈನ್ಯವೆಲ್ಲವೂ ಸ್ವಾಮಿಗಳವರನ್ನು ಎದುರುಗೊಳ್ಳಲು ಮುಂದೆ ಬಂದು ನಿಂತಿತು.

ರಮಾನಂದರು ಬಂದು ಮಗುವನ್ನು ಕೂಡಿದ ಕೂಟದ ಮಧ್ಯದಲ್ಲಿದ್ದ ಹೆಂಗಸಿನ ಕೈಯಲ್ಲಿ ಕೊಟ್ಟು, "ಮಥುರಾನಾಥರು ಬಂದಿರುವರೇನು ?" ಎಂದು

ಪ್ರಶ್ನಿಸಿದರು. ಹೆಂಗಸು ಹೌದೆಂಬುದನ್ನು ಸೂಚಿಸುವ ಮೊದಲು ಅಲ್ಲಿ ನೆರೆದಿದ್ದ ಮಕ್ಕಳು ಬೊಬ್ಬಿಟ್ಟು ತಿಳಿಸಿಬಿಟ್ಟರು.

ಆರೋಗ್ಯಾಶ್ರಮದೊಳಗೊಂದು ಕೋಣೆ. ಬಹಳ ಸುಂದರವಾದ ಅನೇಕ ಭಕ್ತರುಗಳ, ಲೋಕದಲ್ಲಿ ತಮ್ಮ ಕೀರ್ತಿಯನ್ನು ಪಸರಿಸಿ ಮೆರೆದು ಮಡಿದವರ ಚಿತ್ರಗಳಿಂದ ತುಂಬಿದ್ದು, ಮಧ್ಯೆ ಮಥುರಾನಾಥರಾಯರ—ಎಲ್ಲಾ ಚಿತ್ರಗಳಿಗಿಂತಲೂ ಅತಿ ದೊಡ್ಡದಾದ ರಸಭಾವ ಚಿತ್ರವೊಂದನ್ನು ಇಟ್ಟಿದ್ದಿತು. ಅದೇ ಚಿತ್ರದ ಕೆಳಗಣ ಕುರ್ಚಿಯೊಂದರಲ್ಲಿ ಮಥುರಾನಾಥರಾಯರು ಕುಳಿತು, ಎದುರಿನ ಮೇಜಿನ ಮೇಲಿನ ಅನೇಕ ಕಾಗದ ಪತ್ರಗಳನ್ನು ಅತೀವ ಕುತೂಹಲ ದೃಷ್ಟಿಯಿಂದ ನೋಡುತ್ತಿದ್ದರು. ಕೋಣೆಯ ಹೊರಗಿನಿಂದ ಯಾರೋ "ವಂದಿಸುವೆನು...." ಎನಲು, ರಾಯರು ಅವರನ್ನು ತಡೆದು ನಡುವೆ ಬಾಯಿ ಹಾಕಿ, "ಹಾಂ! ರಮಾನಂದರು. ಏನಿದು! ಬಹಳ ಸಮಯವಾಯಿತು. ತಮ್ಮನ್ನೇ ಇದಿರು ನೋಡುತ್ತಿದ್ದೆ. ಬನ್ನಿ. ಕುಳಿತುಕೊಳ್ಳಿ" ಎಂದರು. ಅಷ್ಟರಲ್ಲಿ ಆ ಹೆಂಗಸು ಆ ಮಗುವನ್ನೆತ್ತಿಕೊಂಡು ಅಲ್ಲಿಗೆ ಬಂದಳು.

"ಅಲ್ಲ! ಇದೇನು? ಯಾವುದು? ಎಲ್ಲಿಂದ?" ಎಂದು ಆ ಸ್ತ್ರೀಯನ್ನು ಕೇಳಲು, ರಮಾನಂದರು, "ಕಾಂಚನಾ, ಇಲ್ಲಿ ಬಾಮ್ಮಾ, ಕುಳಿತುಕೊ" ಎಂದು ಆ ಸ್ತ್ರೀಗೆ ಹೇಳಿ, "ಇದೇ ನಾನು ಬರಲು ತಡವಾದ ಕಾರಣ" ಎಂದು ರಾಯರನ್ನು ನೋಡಿ ಉತ್ತರವಿತ್ತರು.

"ಕೂಸು—ಗಂಡೋ ಹೆಣ್ಣೋ?" ರಾಯರು ಕೇಳಿದರು.

"ಕೂಸು ಯಾವದಾದರೇನು? ಭಗವತ್ಸೃಷ್ಟಿಯಲ್ಲಿ ಗಂಡು ಹೆಣ್ಣೆಂಬ ವ್ಯತ್ಯಾಸವೆಲ್ಲಿಯದು?—ಎರಡಕ್ಕೂ ಅಸುವೊಂದೇ ಆಗಿರುವುದಲ್ಲವೇ? ಅಂದ ಮೇಲೆ ಹೆಣ್ಣಿನ ಮೇಲೆ ಅಲಕ್ಷ್ಯವೇಕೆ? ಹೆಣ್ಣಿಲ್ಲದೆ ಗಂಡಿಲ್ಲ, ಗಂಡಿಲ್ಲದೆ ಹೆಣ್ಣಿಲ್ಲ. ಹೆಣ್ಣು-ಗಂಡಿದ್ದರೇನೆ, ಒಟ್ಟುಗೂಡಿದರೇನೆ ಪ್ರಪಂಚ" ಎಂದು ಮಥುರಾನಾಥರಲ್ಲಿದ್ದ ಸ್ತ್ರೀಯರ ಮೇಲಿನ ಅಲಕ್ಷ್ಯ ಭಾವವನ್ನು ರಮಾನಂದರು ಹೋಗಲಾಡಿಸಲು ಪ್ರಯತ್ನಿಸಿದರು. ಪ್ರಯತ್ನ ಸಫಲವಾಗದಿರಲಿಲ್ಲ.

"ತಮ್ಮ ಈ ಮಾತಿನ ಸರಣಿಯಿಂದಲೆ ಕೂಸು ಹೆಣ್ಣೆಂಬುದು ವ್ಯಕ್ತವಾಯಿತು. ಇನ್ನಿದರ ಕಥೆಯೇನು ಹೇಳಿ" ಎಂದು ರಾಯರು ರಮಾನಂದರನ್ನು ಕೇಳಿದರು.

ರಮಾನಂದರು ರಾಯರ ಸಮಸ್ಯೆಗೆ ಯಾವ ತರಹ ಬದಲನ್ನೂ ಈಯದೆ ಕೈಯಲ್ಲಿ ಹಿಡಿದಿದ್ದ ಆ ಉಂಗುರವನ್ನೂ ಕಾಗದವನ್ನೂ ಅವರ ಮುಂದಿರಿಸಿದರು.

"ಕನ್ನಡಕ ಮನೆಯಲ್ಲೇ ಉಳಿಯಿತು; ಅಕ್ಷರ ಬಹು ಚಿಕ್ಕದಾಗಿದೆ. ತಾವೇ ಓದಿರಿ" ಎಂದು ಆ ಪತ್ರವನ್ನು ರಾಯರು ಸ್ವಾಮಿಗಳ ಕೈಗೆ ಇತ್ತರು.

ರಮಾನಂದರು, "ತಾವು ಈ ದಾರಿಯಾಗಿ ಬರುವುದನ್ನು ನೋಡಿಯೇ ನಾನು ಈ ಮಗುವನ್ನು ಇಲ್ಲಿ ಈ ತೆರದಲ್ಲಿ ಬಿಟ್ಟು, ಈ ಪತ್ರವನ್ನೂ, ಒಂದು ಉಂಗುರವನ್ನೂ ಇದರ ಸಮೀಪವಿರಿಸಿ ಹೋಗಿರುವೆನು. ತಾವು ನನ್ನನ್ನು ಅರಸುವ ಪ್ರಯತ್ನವನ್ನು ಮಾಡುವುದು ಬೇಕಿಲ್ಲ. ನಾನಾರೆಂಬುದನ್ನು ತಿಳಿಯುವುದೂ ಆವಶ್ಯಕತೆಯಿರಲಾರದು. ಈ ಉಂಗುರದಲ್ಲಿ ಕೆತ್ತಿರುವ 'ವಿ' ಅಕ್ಷರದಿಂದ ಉಚ್ಚರಿಸಲ್ಪಡುವ ಯಾವ ಹೆಸರನ್ನಾದರೂ ಮಗುವಿಗೆ ಇಡತಕ್ಕದ್ದು. ಈ ಉಂಗುರವೇ ಮಗುವಿನ ತಂದೆಯ ಗುರುತಾಗಿದೆ. ಹೆತ್ತ ತಾಯ್ತಂದೆ ಬಂಧುಬಳಗವೆಲ್ಲವೂ ನನ್ನ ಪಾಲಿಗೆ ನಿರ್ನಾಮವಾಗಿದೆ. ತಮ್ಮನ್ನೇ ತಂದೆಯೆಂದು ಭಾವಿಸಿದ ಪುತ್ರೀಸಮಾನಳಾದ ಪ್ರಪಂಚದ ಹತಭಾಗಿನಿಯರೊಳೊರ್ವಳಾದ ನಾನು ನಿರ್ಗತಿಕಳಿರುವೆನು. ಈ ನನ್ನ ಕೂಸು ನನ್ನ ಕೈಸೇರುವ ಭಾಗ್ಯವನ್ನು ನನ್ನ ಹಣೆಯಲ್ಲಿ ಭಗವಂತನು ಬರೆದಿರುವ ಪಕ್ಷದಲ್ಲಿ ಮಾತ್ರ ನಾನು ಉಳಿಯುವೆನೆಂಬ ನಂಬಿಕೆಯ ಮಾತನ್ನು ಹೇಳಬಹುದು. ವಿನಾ, ನಾನು ಉಳಿಯುವೆನೆಂಬುದು ಖಂಡಿತವಿಲ್ಲ. ಇನ್ನೊಮ್ಮೆ ಹೇಳುವೆನು, ನನ್ನನ್ನು ಅರಸುವ ಶ್ರಮವನ್ನು ವಹಿಸಬೇಡಿ.

ಇತಿ, ಪಾದನಮಸ್ಕಾರ,
'ಹತಭಾಗಿನಿ'"

ಎಂದಿದ್ದ ಆ ಪತ್ರವನ್ನು ಸಂಪೂರ್ಣವಾಗಿ ಓದಿ ರಾಯರ ಮುಂದಿರಿಸಿದರು.

"ಸರಿ" ಎಂದು ಆ ಕಾಗದವನ್ನು ತಮ್ಮ ಕೋಟಿನ ಕಿಸೆಯಲ್ಲಿಟ್ಟು ಉಂಗುರವನ್ನು ತೆಗೆದು ಬೆರಳಿಗೆ ಹಾಕಿಕೊಂಡರು. "ಮಗುವನ್ನು ಯಾವ ಹೆಸರಿನಿಂದ ಕರೆಯುವುದು?" ಎಂದು ಕೇಳಿದರು.

"'ವಿಜಯಾ' ಎಂದು ಕರೆಯಬಹುದಲ್ಲವೇ?" ರಮಾನಂದರು ತಮ್ಮ ಆಲೋಚನೆಗೆ ತಲಪಿದ್ದನ್ನು ವ್ಯಕ್ತಪಡಿಸಿದರು.

" ವಿಜಯಾ! ಚೆಲುವಿನದಾಗಿದೆ. ಏಕಾಗಬಾರದು ? " ಎಂದು ಅದೇ ಹೆಸರನ್ನಿಡುವುದಾಗಿ ನಿಶ್ಚಯಿಸಿ ಮಗುವಿನ ಪೋಷಣೆಯನ್ನು ಕಾಂಚನೆಯ ಪಾಲಿಗೆ ಬಿಟ್ಟು, ಅಲ್ಲಿಂದೆದ್ದರು.

* * * *

ಉಟ್ಟ ಬಟ್ಟೆ ಜೀರ್ಣಿಸಿದೆ. ನಡೆವ ನಡೆ ಬಲು ಸಾವಧಾನ. ತಲೆ ಗೂದಲು ಸ್ವವರ್ಣವನ್ನು ತೊಲಗಿಸಿ ಕೆಂಪಡರಿ ಗಾಳಿಗೆ ಹಾರಿ ಮುಖವನ್ನು ಮುಚ್ಚುತ್ತಿದೆ. ಮುಖವು ಕಳೆಹೀನವಾಗಿದೆ. ಚೆಂದುಟಿ ಕಪ್ಪಿಟ್ಟಿದೆ. ಕೊರಳ ಎಲುಬು ಎದ್ದು ನಿಂತಿದೆ. ನಿಲ್ಲಲು ತ್ರಾಣವಿಲ್ಲದೆ ಸ್ವರ್ಣ ಕುಳಿತು ತನ್ನ ಆಯಾಸವನ್ನು ಸ್ವಲ್ಪ ಹಿಂಗಿಸಿಕೊಂಡು, ಎದ್ದು ಎದುರಿನ ಚಿಕ್ಕ ಹುಲ್ಲಿನ ಮನೆಯನ್ನು ಸಮೀಪಿಸಿ, " ತಾಯಿ, ಸ್ವಲ್ಪ ಕುಡಿಯಲು ನೀರು ನೀಡಿರಮ್ಮಾ " ಎಂದು ಕೂಗಿ ಕೇಳಿದಳು. ಕೇಳಿ ಅರ್ಧ ತಾಸಾಗಲು, ವಯಸ್ಸಾದ ವೃದ್ಧೆಯೋರ್ವಳು ಒಂದು ತಂಬಿಗೆಯಲ್ಲಿ ತಣ್ಣೀರು ತಂದು ನೀಡಲು, ತನ್ನ ನೀರಡಿಕೆಯನ್ನು ತೀರಿಸಿಕೊಳ್ಳಲು ತನ್ನೆರಡು ಕೈಗಳನ್ನೇ ಪಾತ್ರೆಯನ್ನಾಗಿ ಮಾಡಿ ನೀರು ಕುಡಿದು ಚೇತನವನ್ನು ತಂದುಕೊಂಡಳು. ಅನಂತರ ಎದ್ದು ಹಿಂದಿರುಗೋಣವೆನಲು ಆ ಮುದುಕಿಯ ಮುಖವನ್ನು ನೋಡಿ ಬೆಚ್ಚಿಬಿದ್ದಳು. ಆದರೂ ಅದನ್ನು ತೋರಗೊಡದೆ ಹಿಂತಿರುಗಿ ಕಾಲೆತ್ತಿಡಲು ಒಳಗೆ ಅದಾರೋ ನರಳುವ ದನಿ ಕೇಳಿ ಬರಲು, " ಅಜ್ಜೀ, ಅದಾರು ಒಳಗೆ ವೇದನೆಯಲ್ಲಿರುವರು ?" ಎಂದು ಮುದುಕಿಯನ್ನು ಕೇಳಿದಳು. " ನಮ್ಮ ಮನೆಯವರೇ ತಾಯಿ. ಬಹಳ ದಿವಸದಿಂದ ಜ್ವರಪೀಡಿತರಾಗಿರುವರು " ಎಂದು ಮುದುಕಿ ಉತ್ತರವಿತ್ತಳು. " ನಾನು ನೋಡಬಹುದೆ, ಅಜ್ಜಮ್ಮಾ " ಎಂದು ತನ್ನ ಮನೋಭೀಷ್ಟವನ್ನು ಸ್ವರ್ಣ ವ್ಯಕ್ತಪಡಿಸಿದಳು.

" ನೀನು ಯಾವ ಮತದವಳು, ತಾಯಿ ? " ಮುದುಕಿ ಪ್ರಶ್ನಿಸಿದಳು.

ಸ್ವರ್ಣ ತನ್ನಲ್ಲಿಯೇ, ' ಪ್ರಪಂಚದ ಮಹಾ ಮಹಾ ದೇವಸ್ಥಾನಗಳನ್ನೆಲ್ಲಾ ಹರಿಜನರು ಹೊಕ್ಕಾದ ಮೇಲೂ ಮುದುಕಿ ನನ್ನ ಜಾತಿ ಕೇಳುವಳಲ್ಲಾ ' ಎಂದುಕೊಂಡು, " ಅಜ್ಜಿ, ನನ್ನಲ್ಲಿ ಅಪನಂಬಿಕೆ ಬೇಡ, ನಾನು ನಿನ್ನ ಜಾತಿಯವಳೇ ಇದ್ದೇನೆ. ನನ್ನ ಹೆಸರು ರಂಗಮ್ಮ, ನನ್ನ ತಂದೆಯ ಹೆಸರು

ಶ್ರೀ ಸಿದ್ಧರಾಯರೆಂದು. ಸಾಕೆ?" ಎಂದಳು. ಆ ಮಾತನ್ನು ಕೇಳಿ ಮುದುಕಿ ಅವಳನ್ನು ಒಳಗೆ ಬಿಟ್ಟಳು.

ವೃದ್ಧೆ ಪತಿಗೆ ಹಾಲು ರೊಟ್ಟಿ ತೆಗೆದುಕೊಂಡು, ರಂಗಮ್ಮನನ್ನು ಸಂಗಡ ಕರೆದುಕೊಂಡು ಒಳಗೆ ಬಂದು ನೋಡಲು, ಪತಿಯ ಪ್ರಾಣಪಕ್ಷಿ ಆಗಲೆ ಹಾರಿ ಹೋಗಿದ್ದಿತು. ಮುದುಕಿ ಎದೆ ಹೊಟ್ಟೆ ಬಡಿದುಕೊಂಡು, ತಲೆ ಜಜ್ಜಿಕೊಂಡು, ರಂಗಮ್ಮನನ್ನು ಹತ್ತಿರ ಕೂರಿಸಿ, ಅವಳನ್ನು ಅಪ್ಪಿಕೊಂಡು ಬೊಬ್ಬಿಟ್ಟು ಅಳಲಾರಂಭಿಸಿದಳು. ರಂಗಮ್ಮನು, "ಅಜ್ಜೀ, ನೀನು ದುಃಖಿಸಬೇಡ, ನಾನು ಕೂಡ ಈ ಚಿಕ್ಕ ಪ್ರಾಯದಲ್ಲಿ ಇದೇ ತರದ ಗತಿಯನ್ನು ಅನುಭವಿಸಿದ್ದೇನೆ. ಈಗ ನಾನು ಪ್ರಪಂಚಕ್ಕೆ ಪಾಪಿಣಿಯಾಗಿ ಪರಿಣಮಿಸಿದ್ದೇನೆ. ಈಗ ನಿನ್ನ ಬಂಗಾರದ ಮನೆಯನ್ನು ಹೊಕ್ಕೆನು. ಅದರ ಫಲವಾಗಿ, 'ಪಾಪಿ ಹೋದೆಡೆಯೆಲ್ಲಾ ಪಾತಾಳ'ವೆಂಬಂತೆ!—ಈ ಗತಿ ಸಂಭವಿಸಿದೆ. ಅಜ್ಜೀ, ನೀನು ದುಃಖಿಸಬೇಡ........" ಎಂದಳು. ಮುದುಕಿ, "ಮಗಳೇ, ಇನ್ನು ನಾನು ಏನು ಮಾಡಲಮ್ಮ........ನನಗಾರಿರುವರು........ಅವರ....ಜೀವವುಳಿದು........ ನಾನು........ಹೋಗಿದ್ದರೆ........ಎಷ್ಟೋ ಉತ್ತಮವಿತ್ತು....ಆದರೆ....ದೇವರು ಹೀಗೆ........ಮಾಡಿದನಲ್ಲಾ........ಅಯ್ಯೋ ದೇವರೇ! ಹಂ....ಹಂ....ಹಂ!" ಎಂದು ತಡವರಿಸುತ್ತಾ ಬೊಬ್ಬಿಟ್ಟು ಅತ್ತಳು. ರಂಗಮ್ಮ, "ಅಜ್ಜೀ, ಸುಮ್ಮನೆ ಯಾಕೆ ದುಃಖಿಸುತ್ತಿ. ನಿನಗೆ ನಾನಿರುವೆನು. ನಾನೀಗ ನಿನ್ನನ್ನು ಬಿಟ್ಟು ಹೋಗುವುದಿಲ್ಲ. ನನ್ನ ನಿನ್ನ ಜೀವವಿರುವವರೆಗೆ ನಿನ್ನೊಡನೆಯೇ ಇರುವೆನು. ಮತ್ತೆ, ಹೊಟ್ಟೆಯ ಪಾಡು—ಅದಕ್ಕೆ ದುಡಿಯುವುದರಲ್ಲಿ ಹಿಂಜರಿಯುವೆನೆಂದು ಭಾವಿಸಬೇಡ" ಎಂದು ಎಷ್ಟೆಷ್ಟು ವಿಧವಾದ ಬುದ್ಧಿವಾದವನ್ನೂ ಸಮಾಧಾನದ ಮಾತುಗಳನ್ನೂ ಹೇಳಿದರೂ ಮುದುಕಿ ಗಮನಿಸಿದಂತೆ ಕಾಣಲಿಲ್ಲ, ಅದೊಂದನ್ನೂ. ತನ್ನ ಹೃದ್ವೇದನೆಯನ್ನು ಹೇಳಿ ಹೇಳಿ ಅತ್ತು ಕಣ್ಣೀರು ಸುರಿಸುತ್ತಿದ್ದಳು. ಲೋಕದಲ್ಲಿ ಎಲ್ಲರೂ ಹಾಗೆಯೇ. ಪರರಿಗೆ ಕಷ್ಟವೊದಗಿದಾಗ ಅವರಿಗೆ ಬೇಕಾದಷ್ಟು ಬುದ್ಧಿ, ಧೈರ್ಯ ಹೇಳುವರು; ಸಮಾಧಾನ ಮಾಡುವರು. ಅದೇ ಕಷ್ಟ ತಮಗೆ ಸಂಭವಿಸಿತೆಂದಾದರೆ ಆ ಮಾತುಗಳ ಪರಿವೆಯೇ ಅವರಿಗಿರುವುದಿಲ್ಲ. ಆ ಬುದ್ಧಿ, ಧೈರ್ಯ ಎಲ್ಲಿ ಹೋಗುವುದೊ!

* * * *

ಯಾರಾದರೇನು ? ಸತ್ತವರು ಸತ್ತರು ! ಉಳಿದವರು ಉಣಲೇ ಬೇಕಷ್ಟೆ! ಸತ್ತವರಿಗಾಗಿ ಉಣ್ಣದೆ ಕುಳಿತುಕೊಳ್ಳುವುದಾದರು ಎಷ್ಟು ಸಮಯ ? ಬೆಳಿಗ್ಗೆ ಸಂಜೆಯೆಂದು ತಿಂಗಳೊಪ್ಪತ್ತು ಕಳೆದು ಹೋಯಿತು. ಇನ್ನು ಉದರದೇವನಿಗೆ ನೈವೇದ್ಯ ಮಾಡಲು ತಕ್ಕ ಹಸಾದವು ಆದರೆ ತಾನೆ ಮುಂದಿನ ಯೋಚನೆ. ಅದೇ ಯೋಚನೆಯಲ್ಲಿ ಬಿದ್ದಿದ್ದಾಳೆ ಈಗ ರಂಗಮ್ಮ. ಮುದುಕಿಯನ್ನು ದುಡಿಸುವುದು ಪಾಪವಾಗುತ್ತದೆ. ತಾನೇ ದುಡಿಯಬೇಕು. ಎಲ್ಲಿಗೆ ಹೋಗುವುದು? ಯಾವ ಕೆಲಸ ಮಾಡುವುದು—ಎಂಬ ಆಲೋಚನೆಗಳಲ್ಲಿ ಮುಳುಗೇಳುತ್ತಿದ್ದ ರಂಗಮ್ಮನು ಎದ್ದು ಹೊರಬರಲು, ಜವಾನನೊಬ್ಬನು ಹೊರಗಿನಿಂದ, " ಮುದುಕಿ ಪಾರು ಒಳಗೆ ಇರುವಳೇನು ? " ಎಂದು ಕೇಳಿದನು.

" ಹೌದು. ಯಾಕೆ ? " ಎಂದು ನಮ್ರತೆಯಿಂದ ಮಾತನಾಡಿದ ವಾಕ್ಯವು ಆ ಜವಾನನನ್ನು ತಬ್ಬಿಬ್ಬಾಗಿ ಮಾಡಿಬಿಟ್ಟಿತು. ಕಾರಣ ಅವನ ದರ್ಪದ ಮಾತಿಗೆ ರಂಗಮ್ಮನ ಸಾವಧಾನ ವಾಕ್ಯವು ಅವನನ್ನು ಮೃದುವಾಗಿ ಮಾಡಿತು. ಆಗ ಅವನು, " ಏನಿಲ್ಲ, ತಾಯಿ. ಪಾರು ನಮ್ಮ ಯಜಮಾನ್ರ ಮನೇ ಕೆಲ್ಸದವ್ಳು. ಗಂಡ ಸತ್ತು ತಿಂಗಳೆರಡಾಯ್ತು. ಇನ್ನೂ ಅವಳು ಕೆಲಸಕ್ಕೆ ಬಾರದಿರೋ ಕಾರಣ ತಿಳೀಲಿಕ್ಕೆ ಕಳಿಸಿದರು ಅಷ್ಟೆ " ಎಂದು ತನ್ನ ಮಾತನ್ನು ಪೂರೈಸಿದನು.

" ಯಜಮಾನರಾರು....ಮತ್ತು....ಅವರ ಮನೆಯಲ್ಲಿ ಹೆಂಗಸರಿರುವರೇನು ? " ರಂಗಮ್ಮ ಪ್ರಶ್ನಿಸಿದಳು.

" ಯಜಮಾನರು ಮಥುರಾನಾಥರಾಯರು. ಮನೆಯಲ್ಲಿರೋದು ಅವರು, ಅವರ ಹೆಂಡ್ತಿ, ಒಂದೈದು ವರ್ಷದ ಹುಡುಗ—ಇಷ್ಟೆ. ಕೆಲಸದವಳು ಮುಖ್ಯ ಬೇಕಾದದ್ದು ಹುಡುಗನನ್ನು ನೋಡೋಕೆ " ಎಂದು ಅವಳ ಪ್ರಶ್ನೆಗೆ ಜವಾನನು ಉತ್ತರವಿತ್ತನು.

" ಪಾರಮ್ಮ ಇನ್ನು ಕೆಲಸಕ್ಕೆ ಬರಲಾರಳು. ನಾನೇ ಬರುವೆನು " ಎಂದು ಹೇಳಿ, ಮುದುಕಿ ಮಲಗಿದ್ದರಿಂದ ಎಬ್ಬಿಸದೆ, ಬಾಗಿಲನ್ನು ಎಳೆದು ಹೊರಗಿನಿಂದ ಚಿಲಕ ಹಾಕಿ ಜವಾನನ ಹಿಂದೆ ರಾಯರ ಮನೆಗೆಲಸಕ್ಕೆ ಹೋಗಿಬಿಟ್ಟಳು.

ಹೋಗುವಾಗ ಪದ್ಮಮ್ಮ—ರಾಯರ ಪತ್ನಿ—ಹೊರಗೆ ನಿಂತಿದ್ದು, " ಜವಾನನೊಂದಿಗೆ ಅದ್ಯಾರೊಬ್ಬಳು ಹೆಂಗಸು ಬರ್‍ತಾ ಇದ್ದಾಳಲ್ಲ ; ಬಹಳ

ಚೆನ್ನಾಗಿ ಕಾಣ್ತಾಳೆ" ಎಂದು ಆರಾಮು ಕುರ್ಚಿಯಲ್ಲಿ ಅಡ್ಡಾಗಿದ್ದ ತನ್ನ ಪತಿಯನ್ನು ಕೇಳಿದರು.

ಜವಾನನು, "ಪಾರಮ್ಮನ ಮನೆಯಲ್ಲಿ ಈ ಹುಡುಗಿ ಇದ್ದಳು. ಪಾರಮ್ಮನನ್ನು ಕೇಳಲು, ಅವಳು ಇನ್ನು ಕೆಲಸ ಮಾಡಲು ಅಸಮರ್ಥಳು ಮತ್ತು ತಾನೇ ಅವಳ ಕೆಲಸ ಮಾಡುವುದಾಗಿ ವಚನವಿತ್ತಿರುವಳು" ಎಂದು ತನ್ನ ಯಜಮಾನರಿಗೂ ಯಜಮಾನಿಗೂ ಕೇಳುವಂತೆ ಹೇಳಿದನು.

"ಪಾರು ನಿನಗೆ ಏನಾಗಬೇಕಮ್ಮ?" ಪದ್ಮಮ್ಮ ಕೇಳಿದರು.

"ನನ್ನ ಅಜ್ಜಿ." ರಂಗಮ್ಮ ಉತ್ತರವಿತ್ತಳು.

"ಯಾವ ಸಂಬಂಧ?"

"ನನ್ನ ಮಾವನ ತಾಯಿ."

"ಸೋದರ ಮಾವನ ತಾಯೋ—ಅಲ್ಲಾ ಗಂಡನ ತಂದೇ ತಾಯೋ?"

"ಗಂಡನ ತಂದೇ ತಾಯಿ."

"ಗಂಡ ಇಲ್ವೆ ನಿಂಗೆ."

ರಂಗಮ್ಮ ಕಣ್ಣುಗಳಲ್ಲಿ ನೀರು ತಂದುಕೊಂಡಳು ಮಾತ್ರ.

"ಸರಿ, ಹೋಗು. ಹೋಗಿ ಬಚ್ಚಲಲ್ಲಿ ನೀರು ತುಂಬಿಸಿ ಬೆಂಕಿ ಹೊತ್ಸು."

ರಂಗಮ್ಮ ಯಜಮಾನಿಯ ಅಪ್ಪಣೆಯನ್ನು ಶಿರಸಾ ವಹಿಸಿದಳು.

ಹೊತ್ತು ನೆತ್ತಿಗೇರಲು ಐದು ವರ್ಷದ ಬಾಲಕ ಅನಂತನು ಶಾಲೆಯಿಂದ ಬಂದನು. ಪದ್ಮಮ್ಮ ರಂಗಮ್ಮನಿಗೆ, "ರಂಗಮ್ಮ, ಆ ಹುಡುಗನಿಗೆ ಸ್ನಾನ ಮಾಡಿಸಿ ಅಂಗಿಹಾಕು" ಎಂದು ಅಪ್ಪಣೆ ಮಾಡಿದರು. ರಂಗಮ್ಮ ಹರ್ಷದಿಂದ ಅತ್ಯಂತ ದಕ್ಷತೆಯಿಂದ ಆ ಕಾರ್ಯವನ್ನು ನೆರವೇರಿಸಿದಳು. ಅಂದಿನಿಂದ ಸಂಪೂರ್ಣ ವಾತ್ಸಲ್ಯದಿಂದ ತುಂಬಿದವಳಾಗಿ ಆ ಹುಡುಗನನ್ನು ನೋಡುತ್ತಿದ್ದಳು. ಹೊಟ್ಟೆಯ ಮಗುವನ್ನು ಕೂಡ ಅಷ್ಟು ಪ್ರೀತಿಸಲಾರರು, ಅದಕ್ಕಿಂತಲೂ ಹೆಚ್ಚಾಗಿ ಪ್ರೀತಿಸುತ್ತಿದ್ದಳು. ಅನಂತನೂ ಅಂತೆಯೇ: ರಂಗಮ್ಮನನ್ನು ಬಿಟ್ಟಿರುವುದೆಂದರೆ ಅವನಿಗೆ ಅತಿ ಕಷ್ಟಸಾಧ್ಯ. ಅನಂತನ ಎಲ್ಲ ಕೆಲಸಗಳನ್ನೂ ರಂಗಮ್ಮನೇ ಮಾಡಬೇಕಾಗಿದ್ದಿತು. ತಾಯಿ ಮಾಡಿದರೆ ಆತನಿಗದು ಹಿಡಿಯದು. ಪದ್ಮಮ್ಮ ಕೂಡ ಒಂದೊಂದು ವೇಳೆ, "ರಂಗಮ್ಮನ ಸಲಿಗೆ ಹೆಚ್ಚಾಗಿ ಹುಡುಗ ಹಾಳಾಗಿ ಹೋದ" ಎನ್ನುತ್ತಿದ್ದರು. ಶಾಲೆಯ ಪಾಠಗಳನ್ನೂ ಕೂಡ ಅನಂತನಿಗೆ ರಂಗಮ್ಮನೆ ಹೇಳಿಕೊಡುತ್ತಿದ್ದಳು.

ವೃದ್ಧೆ ಪಾರಮ್ಮನಿಗೂ ರಂಗಮ್ಮನೆಂದರೆ ಅಷ್ಟು ಪ್ರೀತಿ. 'ನನ್ನ ಈ ವೃದ್ಧಾಪ್ಯದಲ್ಲಿ ರಂಗಮ್ಮನಂತಹ ಚೆಂದದ ಹೆಣ್ಣೊಬ್ಬಳು ಬಂದು ನನಗೆ ಈ ರೀತಿ ನೆರವಾದಾಳು, ಸಹಾಯ ಮಾಡಿಯಾಳು ಎಂದು ಅವಾರು ಭಾವಿಸಿದ್ದರು!' ಎಂದು ತನ್ನ ಭಾಗ್ಯವನ್ನು ನೆನೆನೆನೆದು, 'ನನ್ನ ಕೂತುಣ್ಣುವ ಭಾಗ್ಯವೇ ಭಾಗ್ಯ!' ಎಂದು ಬಾಯಾರೆ ಉಸುರಿಬಿಡುತ್ತಿದ್ದಳು. ಒಟ್ಟಿನಲ್ಲಿ ರಂಗಮ್ಮ ನೆಂದರೆ ಒಂದು ತರದ ಪ್ರೀತಿ-ಆದರ ಎಲ್ಲರಲ್ಲಿಯೂ ಉದ್ಭವಿಸುತ್ತಿದ್ದಿತು.

ರಂಗಮ್ಮ ತನ್ನ ಜ್ಜುಗವನ್ನು ಪೂರ್ತಿಗೊಳಿಸಿ, ಪದ್ಮಮ್ಮನಿಂದ ದೊರೆತ ಎರಡು ಪಾವಕ್ಕಿಯನ್ನು ಉಡಿಯಲ್ಲಿ ಹಾಕಿಕೊಂಡು ತನ್ನ ಗುಡಿಸಲಿಗೆ ತಲಪಿ ದಳು. ಬೆಳಿಗ್ಗೆ ರಂಗಮ್ಮ ಮಾಡಿಟ್ಟ ಒಂದಿಷ್ಟು ಗಂಜಿಯನ್ನು ಉಂಡು, ಪಾರಮ್ಮ ಗುಡಿಸಲಿನ ಒಂದು ಮೂಲೆಯಲ್ಲಿ ಹಳೆಯ ಜಮಖಾನೆ—ಪದ್ಮಮ್ಮ ಕರುಣೆಯಿಂದ ಕೊಟ್ಟದ್ದು—ಹಾಸಿ ಮುದುಡಿಕೊಂಡು ಮಲಗಿದ್ದಳು. ರಂಗಮ್ಮ ಬಂದೊಡನೆ ಗುಡಿಸಿ, ಒಲೆ ಹೊತ್ತಿಸಿ ಬೇಗನೆ ಅಡಿಗೆ ಮಾಡಿದಳು; ಅನಂತರ ಮುದುಕಿಯನ್ನು ಎಬ್ಬಿಸಿ ಬಿಸಿ ಅನ್ನವನ್ನು ಬಡಿಸಿದಳು. ಮುದುಕಿಗೆ ಬಹಳ ಆನಂದವಾಯಿತು. "ದೇವರು ನಿನ್ನನ್ನ ಕಾಪಾಡಲಿ, ತಾಯಿ; ಎಷ್ಟು ಚೆನ್ನಾಗಿ ಇದೆ ಈ ಚಟ್ಣಿ; ನಾಲಿಗೆ ಇನ್ನೂ ಅನ್ನಾ 'ತಾ! ತಾ!' ಅನ್ತಿದೆ!" ಎಂದು ಪಾರಮ್ಮ ಬಾಯಾರೆ ಆಶೀರ್ವದಿಸಿ ಹೊಗಳಿದರು. ರಂಗಮ್ಮನಿಗೂ ತನಗಾಶ್ರಯ ವಿತ್ತ ಉದಾರಳನ್ನು ಸಂತಸಪಡಿಸಿದ್ದರಿಂದ ಮನಶ್ಶಾಂತಿ ದೊರೆತಿರಬೇಕು!

ಪಾರಮ್ಮನು ಊಟದಲ್ಲಿ ತೃಪ್ತಿಪಡೆದು ತನ್ನ ಸ್ಥಾನವನ್ನು ಆಶ್ರಯಿಸಿ ದಳು. ರಂಗಮ್ಮನೂ ಉಂಡು ಬದಿ ಹರಿದ ಒಂದು ಹುಲ್ಲಿನ ಚಾಪೆ ಒಂದೆಡೆ ಹಾಸಿ, ಕಾಲು ನೀಡುವಷ್ಟು ಚಾಪೆ ಉದ್ದವಿಲ್ಲದ್ದರಿಂದ ಕಾಲು ಮಡಚಿ ಮಲಗಿ ದಳು. ಆದರೆ ಅದೇಕೊ ನಿದ್ರಾದೇವಿ ಅವಳೆಡೆ ಸುಳಿದಿರಲಿಲ್ಲ. ಅದಾವುದೋ ಮನೋವೇದನೆ ಅವಳನ್ನು ಬಾಧಿಸುತ್ತಿರಬೇಕು. ಅವಳೆರಡು ಕಂಗಳಿಂದ ಕಣ್ಣೀರ ಹನಿಗಳು ಹನಿಗೂಡಿ ಹರಿಯುತ್ತಿದ್ದವು. ಮುದುಕಿ ಎಲ್ಲಿಯಾದರೂ ನೋಡಿ ಬಿಡುವಳೋ ಎಂಬ ಸಂದೇಹದಿಂದ ರಂಗಮ್ಮ ಉಟ್ಟ ಅರಿವೆಯ ಸೆರಗಿನ ತುದಿಯನ್ನು ಹಿಡಿದು ಆಗಾಗ ಉಜ್ಜಿಕೊಳ್ಳುತ್ತಿದ್ದಳು.

ಮರುದಿನ ರಂಗಮ್ಮನೆದ್ದು ಗುಡಿಸಲಲ್ಲಿ ಮಾಡುವ ಕೆಲಸ ಮುಗಿಸಿ, ಪಾರಮ್ಮನನ್ನೂ ಎಬ್ಬಿಸಿ ಅವಳಿಗೆ ಬೇಕಾದ ಸಂರಕ್ಷಣೆಮಾಡಿ, ತನ್ನ ಕೆಲಸಕ್ಕೆ

ತೆರಳಿದಳು. ರಂಗಮ್ಮನು ಮಥುರಾನಾಥರಾಯರ ಮನೆಯನ್ನು ತಲಪುತ್ತಲೆ ಅನಂತನು ಓಡಿ ಬಂದು ಮುಖ ತೊಳೆಯಲು ಹೇಳಿದನು. ರಂಗಮ್ಮ ಕೂಡಲೆ ಅವನ ಮೋರೆ ತೊಳೆದು ಅಂಗಿ ಬದಲಾಯಿಸಿ ಶಾಲೆಯ ಪಾಠಗಳನ್ನು ಓದುವುದಾಗಲಿ, ಬರೆಯುವುದಾಗಲಿ ಏನಾದರೂ ಇದ್ದರೆ ಮಾಡುವಂತೆ ಹೇಳಿ, ಶಾಲೆಗೆ ಹೊರಡುವಾಗ ಅವನಿಗೆ ಬೇಕಾದ ತಿಂಡಿ ಮಾಡುವುದರಲ್ಲಿ ನಿರತಳಾದಳು.

೪

ಮಥುರಾನಾಥರಾಯರ ವಿಷಯ ಸ್ವಲ್ಪ ಹೇಳಬೇಕಾದರೆ—ಮೊದಲು ಅವರು ಅತ್ಯಂತ ಬಡ ಸ್ಥಿತಿಯಲ್ಲಿ ಇದ್ದವರು. ಉಡುವುದಿರಲಿ ಉಣಲಿಕ್ಕೂ ಕೂಡ ಒಮ್ಮೊಮ್ಮೆ ಕಷ್ಟಕ್ಕಿಟ್ಟುದೂ ಉಂಟು. ತಂದೆತಾಯಿಗಳು ಬಹಳ ಚಿಕ್ಕಂದಿನಲ್ಲಿಯೇ ತೀರಿಕೊಂಡಿದ್ದರು. ಆಗ ತಮ್ಮ ಬಹಳ ಸಮೀಪ ಬಂಧುವೊಬ್ಬರ ಮನೆಯಲ್ಲಿ ಮುಸುರೆ ತೊಳೆಯುವುದು, ನೀರೆಳೆಯುವುದು, ಅಂಗಡಿಗೆ ಹೋಗುವುದು ಇವೇ ಮುಂತಾದ ಕೆಲಸಕ್ಕೆ ನಿಂತಿದ್ದರು. ಆಗಿನ ಅವರ ಆ ಸಮೀಪ ಬಂಧು ಅವರ ತಾಯಿಯ ತಮ್ಮನಾಗಿದ್ದರು. ಇವರ ಹೆಸರು ಕೇಶರಾಯರೆಂದಿದ್ದಿತು. ಕೇಶವರಾಯರಿಗೆ ಒಬ್ಬಳೇ ಮಗಳು; ಇವಳೇ ಈಗಿನ ಮಥುರಾನಾಥರಾಯರ ಧರ್ಮಪತ್ನಿ—ಪದ್ಮಮ್ಮ. ಸೋದರಳಿಯನಾದರೂ ಮನೆಯ ಕೆಲಸದ ಆಳಾಗಿದ್ದವನಿಗೇಕೆ ತಮ್ಮ ಮಗಳನ್ನು ಕೊಟ್ಟು ಮದುವೆ ಮಾಡಿಸಲಾಯಿತು? ಕಾರಣವಿದೆ. ಯಾವುದೆಂದರೆ, ಹಣ ಬಂದಾಗ ಗುಣವಂತನಾಗುವುದರ ಬದಲು, ಮನುಷ್ಯ ಕೆಲವು ವೇಳೆ ಮದವನ್ನು ತಂದುಕೊಳ್ಳುತ್ತಾನೆ. ಆಗ ಅದು ಅವನು ಆಗರ್ಭಶ್ರೀಮಂತನಾಗಿದ್ದರೂ ಅವನನ್ನು ಒಂದಲ್ಲ ಒಂದು ಅವನತಿಯ ಸ್ಥಿತಿಗೆ ತರದಿರದು. ಒಮ್ಮೊಮ್ಮೆ ಭಿಕ್ಷವೆತ್ತಿಸಿಯೂ ಬಿಡುತ್ತದೆ. ಹಾಗೆ ಕೇಶವರಾಯರು ಧನಮದದಿಂದ ಕೊಬ್ಬಿ, ಇದ್ದಬಿದ್ದ ಐಶ್ವರ್ಯವನ್ನೆಲ್ಲಾ ಬಜಾರಿ ಬಸವಿಯರ ಬಾಯಿಗೆ ತುಂಬಿಸಿದರು. ಅವರಿಂದ ಪಡೆದ ಸುಖವೇ ನಾಕ ಸುಖವೆಂದು ಅವರಿಗಾಗ ಕಂಡಿರಬೇಕು!—ಅದನ್ನೇ ಬರಿದಾಗುವ ತನಕ ಪಡೆದರು. ಆದರೆ ಸೂಳೆಯ ಗಂಡ ತಾವಲ್ಲ—ನಾಣ್ಯ—ಎಂಬುದವರಿಗೆ ಗೊತ್ತಿರಲಿಲ್ಲ; ಮತ್ತೆ ಗೊತ್ತಿದ್ದವರು ಅವರ ಮುಂದೆ ಸುಳಿಯುವುದೂ ಬಹಳ ಕಡಿಮೆ. ಹೀಗೆ, ಹೆಣ್ಣೆಂದರೆ ನಾಯಿಯಂತೆ ನಾಲಿಗೆ ಹೊರಮಾಡಿ ಅಲೆಯುತ್ತಿದ್ದರು.

ಮನೆ ಬರಿದಾಯಿತೆಂದ ಮೇಲೆ ಇನ್ನಾವಳು ಇವರನ್ನು ಒಳ ಸೇರಿಸುವವಳು! ಹೀಗಿರಲು ಒಮ್ಮೆ, ಈ ವ್ಯಾಪಾರದಲ್ಲಿ ನುರಿತ ದಲಾಲಿಯೊಬ್ಬನು ಕೇಶವರಾಯರಿಗೆ ಗಂಟು ಬಿದ್ದನು. ದಲಾಲಿಗಳು ಆ ಕೆಲಸವನ್ನು ಏಕೆ ಕೈಗೊಳ್ಳುತ್ತಾರೆಂಬುದನ್ನು ಹೇಳಬೇಕಾಗಿಲ್ಲ. ವಾರನಾರಿಯನ್ನು ನೋಡಬೇಕಾದರೆ ದಲಾಲಿಯ ಮಡಿ ತುಂಬ ಬೇಕು. ಆದರೂ ಸುಖವಿದೆಯೆ? ಕ್ರಯ ಕೊಟ್ಟು ರೋಗ ಪಡಕೊಂಡರು. ಮಗಳೊಬ್ಬಳು ಬೆಳೆದು ಹೆಂಗಸಾಗಿ ಮದುವೆಗೆ ಸಜ್ಜಾಗಿದ್ದಾಳೆ. ಅದರದೊಂದಿಷ್ಟು ಪರಿವೆಯೂ ಇಲ್ಲದೆ ಇಷ್ಟೆಲ್ಲಾ ಮಾಡಿಕೊಂಡು ಈಗ 'ದೇವಾ! ದೇವಾ!' ಎಂದು ದೇವರನ್ನು ಕರೆದರೆ ಫಲವೇನು? ದೇವರು ಕರುಣಾನಿಧಿಯೇನೋ ಹೌದು; ಆದರೆ ಕೇಶವರಾಯರಂತಹವರಿಗೆ ಕೊಡಲು ದೇವರು ಮಾಡಿದ ಕರ್ಮಕ್ಕೆ ತಕ್ಕ ದಂಡನಿಧಿಯನ್ನು ತಯಾರಿಸುತ್ತಿರಬೇಕು. ಅದನ್ನು ಅದರ ಹಕ್ಕುದಾರನಿಗೆ ಕೊಡಲು ಅವನ ಬರುವಿಕೆಯನ್ನು ಕಾಯುತ್ತಿರಬೇಕು.

ಒಳ್ಳೇ ದೌಲತ್ತಿನಿಂದ ಶೋಭಿಸುವ ಕಾಲದಲ್ಲಿ ಹೇಳಿ ಕೇಳಿಯೂ ಅರಿಯದ ಬಂಧು ಬಳಗಗಳನೇಕವಿದ್ದವು; ಹುಡುಗಿ ಪದ್ಮಮ್ಮನನ್ನು, ಅಷ್ಟೊಂದು ಸುಂದರಿಯಲ್ಲದಿದ್ದರೂ ಅದೆಷ್ಟೋ ಮಂದಿ ಕೇಳಿ ಹೋಗುತ್ತಿದ್ದರು. ಸಿರಿವಂತರಿಗೆ—ಹುಡುಗಿ ಬಹಳ ಚಿಕ್ಕವಳು, ಇನ್ನೊಂದೆರಡು ವರ್ಷ ಹೋಗಲಿ ಮತ್ತೆ ಯೋಚಿಸೋಣ ಎಂಬುದಾಗಿಯೂ,ಬಡವರಿಗೆ—ಮನೆಯಲ್ಲಿ ಕುಡೀಲಿಕ್ಕೆ ಗಂಜಿಗೆ ಗತಿಯಿಲ್ಲ, ನನ್ನ ಮಗಳನ್ನು ಕೇಳಬಂದಿದ್ದಾನೆ; ಏಕೆ, ನನ್ನ ಮಗಳನ್ನು ಕೊಂಡುಹೋಗಿ ಹೊಟ್ಟೆಗೆ ಕೊಡದೆ ಕಷ್ಟ ಪಡಿಸಲಿಕ್ಕೋ ಎಂದು ತಾತ್ಸಾರ ದೃಷ್ಟಿಯಿಂದೀಕ್ಷಿಸುತ್ತಾ, ಅವರಿಗೆ ಹುಡುಗಿಯನ್ನು ಕೊಡುವುದಿಲ್ಲ ಎಂಬುದಾಗಿಯೂ ಹೇಳಿ, ಹುಡುಗಿಯನ್ನು ಕೇಳಲು ಬಂದವರನ್ನು ಹಿಂದೆ ಕಳುಹಿಸಿಕೊಡುತ್ತಿದ್ದರು. ಈಗ ಹುಡುಗಿ ಬೆಳೆದು ನಿಂತಿದ್ದಾಳೆ. ನನಗೆ ನನಗೆ ಎಂದು ಮೇಲೆ ಬಿದ್ದು ಕೇಳಿಕೊಂಡು ಬಂದ ವರರ ಕಡೆಯವರು ಈಗೆಲ್ಲಿದ್ದಾರೆ? ಕೇಶವರಾಯರು ಈಗ ನಿರ್ಗತಿಕರಾಗಿದ್ದಾರೆ. ಅಂದಿನ ಸಿರಿವಂತ ಬಂಧುಗಳು ಈಗ ಕಣ್ಣೆತ್ತಿ ನೋಡಹೋಗುವುದಿಲ್ಲ. ಒಬ್ಬಿಬ್ಬರು ಬಡವರಾದವರು ಅವರ ಸಹಾಯಕ್ಕೆಂದು ಮುಂದೆ ಹೊರಡುವರಾದರೆ, 'ಅವನು ಐಶ್ವರ್ಯದಲ್ಲಿ ಮೆರೆಯುತ್ತಿರುವ ಕಾಲದಲ್ಲಿ ನಿನಗೇನು ಸಹಾಯಮಾಡುತ್ತಿದ್ದ? ಊರ ಸೂಳೆಯರ ಬಾಯಿ

ಗಲ್ಲವೇ ಹಾಕಿದ. ಅಂದಮೇಲೆ ನೀನೇಕೆ ಅವನ ಸಹಾಯಕ್ಕೆ ಹೋಗುವಿ' ಎಂದವರನ್ನು ತಡೆಯುತ್ತಿದ್ದಾರೆ ಕೆಲವರು. ಅಂತೂ ಕೊನೆಯಲ್ಲಿ ಈಗ ಯಾರೂ ಗತಿಯಿಲ್ಲವೆಂದಾದ ಹೊತ್ತಿನಲ್ಲಿ ಮನೆಯಾಳಾಗಿದ್ದ ಸೋದರಳಿಯನೂ ತನ್ನ ಮಗಳಾದ ಪದ್ಮಮ್ಮನೂ ಮಾತ್ರವೇ ಹಗಲಿರುಳು ನಿದ್ದೆಗೆಟ್ಟು ಹತ್ತಿರವಿದ್ದು ನೋಡುತ್ತಿದ್ದಾರೆ.

ಪ್ರಪಂಚದಲ್ಲಿ ನಡೆಯುವುದೆಲ್ಲವೂ ಒಳ್ಳೆಯದಕ್ಕೇ. ಅಂತೆಯೇ ಈಗ ಕೇಶವರಾಯರಿಗೆ ಬುದ್ಧಿ ಬಂತು. ತಾವು ಮಾಡಿದ ಅಕೃತ್ಯಗಳನ್ನು ಈಗ ಒಂದೊಂದಾಗಿ ಬಿಡಿಸಿ ನೋಡಲಾರಂಭಿಸಿದರು. 'ಹಣ ಇರುವಾಗ ಎಷ್ಟು ಮಂದಿ! ಎಲ್ಲಿಲ್ಲದ ಸಂಬಂಧಗಳನ್ನು ಕಲ್ಪಿಸಿಕೊಂಡು ಬಂದು ಕುಳಿತು ತಿಂದು ಹೋದರು; ಈಗ ನಾನು ಸಾಯುತ್ತೇನೆನ್ನುವಾಗ ಆ ಒಂದೇ ಒಂದು ನರಹುಳು ವಾದರೂ ಇದೆಯೆ!' ಎಂದು ತಮ್ಮ ಮಂದಬುದ್ಧಿಯನ್ನೂ ಮನಸ್ಸಿಗೆ ತಂದು ಕೊಂಡು ವಿಧವಿಧವಾಗಿ ಚಿಂತಿಸಿದರು. ಬೆಳಕು ಹರಿವ ಮುನ್ನ ಕಾರ್ಗತ್ತಲು ಆವರಿಸುವಂತೆ ಕೇಶವರಾಯರ ಬುದ್ಧಿಯನ್ನು ಕಾರಿರುಳು ಮುಚ್ಚಿತ್ತು; ಈಗಷ್ಟೇ ಬೆಳಕು ಹರಿಯುತ್ತಿದೆ—ಕೇಶವರಾಯರ ಬುದ್ಧಿಯೂ ಸ್ವಚ್ಛವಾಗು ತ್ತಿದೆ. ದಿನಗಳೆದಂತೆ ಕೇಶವರಾಯರ ರೋಗ ಗುಣಮುಖವನ್ನು ಹೊಂದಿತು. ಆಗಲೆ ವೈರಾಗ್ಯ ಅವರಲ್ಲಿ ನೆಲೆಗೊಂಡಿತು. ಆದರೆ ಅದನ್ನು ತಮ್ಮ ಅಳಿಯನ ಮತ್ತು ಮಗಳ ಮುಂದೆ ಹೇಳಲು ಅಳುಕುತ್ತಿದ್ದರು. ರೋಗವಂತೂ ಸಂಪೂರ್ಣ ಗುಣಮುಖವಾಯ್ತು. ಮಗಳ ಮದುವೆಯ ವಿಚಾರ ಮಾಡ ಲಾರಂಭಿಸಿದರು. ಆದರೆ ಈಗ ಅದಾರಿಗೆ ಬೇಕಾಗಿದೆ ಆ ಹೆಣ್ಣು! ಕೇಶವ ರಾಯರ ಉಡಿಯಲ್ಲಿ ಹಣವಾಡುತ್ತಿರುವಾಗ ಅತ್ಯಂತ ಸ್ಫುರದ್ರೂಪ ಸುಂದರಿ ಯಾಗಿದ್ದ ಪದ್ಮ ಇಂದು ರೂಪಹೀನೆಯಾಗಿ ಕಾಣಿಸುತ್ತಿದ್ದಾಳೆ.

ಕೇಶವರಾಯರಿಗೆ ಯಾವ ದೇವರು ಬುದ್ಧಿ ಕೊಟ್ಟನೋ ಏನೋ! ಉಳಿದ ಹೊಲ ಮನೆಗಳನ್ನೆಲ್ಲಾ ಅಳಿಯನ ಹೆಸರಿಗೆ ಮಾಡಿ, ಪದ್ಮಳನ್ನು ಅವನಿಗೆ ಕೊಟ್ಟು ಮದುವೆಯನ್ನೂ ಮಾಡಿದರು. ನೋಡಿದವರು ಆಶ್ಚರ್ಯ ದಿಂದ ಮೂಗಿನ ಮೇಲೆ ಬೆರಳಿಡದಿರಲಿಲ್ಲ! ಕೆಲವರು, 'ಪಾಪ! ಕಡೆಗೆ ಆ ಹುಡುಗನಿಗೊಂದು ದಾರಿ ಮಾಡಿಬಿಟ್ಟ' ಎಂದೂ, ಇನ್ನು ಕೆಲವರು 'ಇದ್ದಾಗ ಅವನು ಮಾಡಿದ ಕೆಲಸ ನೋಡಿದೆಯಾ? ಏನು ಹೇಳಲಿ!. ಹೀಗೆ

ಮಾಡ್ತಾನಂತ ಕನಸಿನಲ್ಲೂ ನೆನಸಲಿಲ್ಲ. ಹುಡುಗನಿಗೆ ಭಾಗ್ಯ ಬಂದುಬಿಟ್ತು. ಅದು ಬಂತೂ ಅಂದ್ರೆ ಯಾರು ಹಿಡಿದರ ನಿಲ್ತದ ? ' ಎಂದೂ, ಮತ್ತೆ ಕೆಲವರು, ' ನೋಡ್ದಿಯಾ, ನಿನ್ನೆ ಮುಸುರೆ ತೊಳೀತಿದ್ದ ಹುಡುಗನಿಗೆ ಪಟ್ಟಾನೇ ಸಿಕ್ಕಿ ಬಿಟ್ತಲ್ಲಾ ! ಪಾಪ, ಇಷ್ಟು ದಿನ ಕಷ್ಟಪಟ್ಟದಕ್ಕೆ ಇನ್ನು ಸುಖ ಅನುಭವಿಸಲಿ ' ಎಂದರು.

ಹೀಗಿರುತ್ತ ಒಂದು ದಿನ ಕೇಶವರಾಯರು ಕಾಣದಾದರು ! ಮಲಗಿದ್ದ ಸ್ಥಳದಲ್ಲಿ ' ನನ್ನನ್ನು ಹುಡುಕುವ ಶ್ರಮವನ್ನು ಯಾರೂ ವಹಿಸಬಾರದು. ನಿಮಗಿಬ್ಬರಿಗೂ ಚಿರಂಜೀವಿಗಳಾಗಿ ಸದಾ ಸುಖಿಗಳಾಗಿ ಬಾಳಲು ಕರುಣಿಸಿ ಆಶೀರ್ವಾದ ನೀಡಲು ನಾನು ನನ್ನ ಹೃದಯಾಂತರಾಳದಿಂದ ದೇವರನ್ನು ಬೇಡಿ ಕೊಳ್ಳುತ್ತೇನೆ. ನಾನು ಜೀವದಿಂದಿದ್ದರೆ ಇನ್ನೊಮ್ಮೆ ನಿಮ್ಮಿಬ್ಬರನ್ನೂ ಸಂದರ್ಶಿಸು ವೆನು ' ಎಂದು ಬರೆದ ಕಾಗದದ ಚೂರೊಂದನ್ನು ಇಟ್ಟು ಮಾಯವಾಗಿದ್ದರು. ಅಳಿಯನೂ ಮಗಳೂ ದುಃಖಿಸಿದರಾದರೂ, ಎಷ್ಟು ಕಾಲದವರೆಗೆ ದುಃಖಿಸು ವುದು ? ಅಂತೂ ದಿನಗಳನೇಕ ಉರುಳಿದವು.

ಗಂಡ ಹೆಂಡಿರಿಬ್ಬರೂ ಕಷ್ಟಪಟ್ಟು ದುಡಿದರು. ಈಗ ನಿತ್ಯಾನಂದದಲ್ಲಿ ದಿನಗಳೆಯುತ್ತಿದ್ದಾರೆ. ಮಥುರನು ಇಂದು ಮಥುರಾನಾಥರಾಯರಾಗಿದ್ದಾರೆ. ಪದ್ಮ ಇಂದು ಪದ್ಮಮ್ಮಳಾಗಿದ್ದಾಳೆ. ' ಇಂದಿನ ಕಷ್ಟವೇ ನಾಳಿನ ಸುಖ ' ಎಂಬ ಮಾತಿಗೊಂದು ದೃಷ್ಟಾಂತವಾಯಿತು—ಮಥುರಾನಾಥರಾಯರ ಜೀವನ. ದೇಹವನ್ನು ದಂಡಿಸಿ ಬಂದ ಪ್ರತಿಫಲದಿಂದ ಶ್ರೀಮಂತರಾದವರು—ಅವರು ಬಡವರ ಕಷ್ಟನಷ್ಟ, ಸುಖದುಃಖ, ಬೇಕುಬೇಡಗಳನ್ನು ಅರಿತವರು, ಅರಿತು ವರ್ತಿಸುವವರು.

ಈಗ ಮಥುರಾನಾಥರಾಯರ ಮನೆಯಲ್ಲಿ ಕೆಲಸ ಮಾಡಲಿಕ್ಕೆ, ಗದ್ದೆ ಉಳಲಿಕ್ಕೆ, ಮತ್ತಿತರ ಕೆಲಸಕ್ಕೆ ಬೇಕಾದ ಆಳುಹೋಳುಗಳಿದ್ದಾರೆ. ಪದ್ಮಮ್ಮ ಅಂದಿನ ಖರ್ಚಿನ ಸಾಮಾನುಗಳನ್ನು ಅಡಿಗೆಯವಳ ಕೈಗೆ ಕೊಟ್ಟರೆ ಸರಿ ಮಧ್ಯಾಹ್ನದ ಅಡಿಗೆ ತಯಾರಾಗುವುದು. ಉಳಿದ ಸಮಯಗಳಲ್ಲಿ ಮಾರವಿದ್ದು ಕಂಡು ಅವರು ಮಾಡುವ ಕೆಲಸಗಳಲ್ಲಿ ತಪ್ಪುಗಳು ಕಂಡುಬಂದರೆ ಅವು ಗಳನ್ನು ತಿದ್ದುವುದು, ಊಟದ ವೇಳೆಯಲ್ಲಿ ಗಂಡನಿಗೆ ಬಡಿಸುವುದು—ಇಷ್ಟೇ ಪದ್ಮಮ್ಮನ ಈಗಿನ ಮನೆಯ ಕರ್ತವ್ಯ. ಕಷ್ಟಸುಖಗಳು ಮನುಷ್ಯನಿಗಲ್ಲದೆ

ಮತ್ತಾರಿಗೆ? ಅವುಗಳು ಮನುಷ್ಯನಿಗೇ ಮೀಸಲಾದವುಗಳು. ಪಟ್ಟ ಕಷ್ಟದ ಫಲವನ್ನು ಗಂಡಹೆಂಡಿರು ಅನುಭವಿಸುತ್ತಿದ್ದರೆ ಅದರಲ್ಲೇನು ಆಶ್ಚರ್ಯ!

'ಸಂಪಾದಿಸುವುದು ತಿನ್ನುವುದು!' ಇಷ್ಟಕ್ಕೇ ವಿದ್ಯೆ, ಬುದ್ಧಿ, ಹಣ ಎಲ್ಲಾ ಇರುವುದು; ಅದಕ್ಕಾಗಿಯೇ ನಾವು ಹುಟ್ಟಿರುವುದು; ಸಾಯುವುದರೊಳಗೆ ಚೆನ್ನಾಗಿ ತಿಂದುಂಡು ತೃಪ್ತರಾಗಿ ಸಾಯಬೇಕು; ಮತ್ತೆ, ನಾವು ಸಂಪಾದಿಸುವುದು ಏಕೆ? ಯಾರಿಗಾಗಿ? ನಾವು ಸಾಯುವಾಗ ಧನ ಧಾನ್ಯ ಸಂಪತ್ತು ನಮ್ಮ ಹಿಂದೆ ಬರುತ್ತದೆಯೆ? ನಾವು ತಿಂದುಂಡದ್ದೇ ನಮ್ಮ ಹಿಂದೆ ಬರುತ್ತದೆ!—ಎಂಬ ಅಭಿಪ್ರಾಯವನ್ನು ತಾಳಿ, ತಿನ್ನುವುದರಲ್ಲೇ ತಮ್ಮ ಜೀವಮಾನವನ್ನು ವ್ಯರ್ಥಮಾಡಿ, ಅಜ್ಞಾನಾಂಧಕಾರದಲ್ಲಿ ಮುಳುಗಿ, ಕಡೆಗೊಂದು ದಿನ ಲೋಕವೆಂದರೇನೆಂದರಿಯದೆ, ಲೋಕದ ಜನರ ಕಷ್ಟಸಂಕಷ್ಟಗಳನ್ನರಿಯದೆ ಮಡಿದು ಸುಡುಗಾಡು ಸೇರುವ ಮೂಢ ಮಾತ್ರವಲ್ಲ ಮೂರ್ಖ ಶ್ರೀಮಂತ ಪಶುಗಳೂ ನಮ್ಮೀ ಲೋಕದಲ್ಲಿ ಇಲ್ಲದಿಲ್ಲ! ಆದರೆ ಮಥುರಾನಾಥ ರಾಯರು ಅಂತಹವರಲ್ಲ. 'ಸಂಪಾದಿಸುವುದು ತಿನ್ನುವುದು!' ಇಷ್ಟನ್ನೇ ಮಾಡುತ್ತಾ ಹೋದರೆ ಅದರಿಂದ ಏನು ಪ್ರಯೋಜನ? ಅದರಿಂದ ತನ್ನನ್ನು ತಾನೇ ಸುಖದಲ್ಲಿರಿಸಿಕೊಂಡಂತಾಗುವುದು. ಅದರಲ್ಲಿ ಸಂಪೂರ್ಣ ಸ್ವಾರ್ಥತೆ ಮನೆಮಾಡಿಕೊಂಡಿರುವುದೇ ವಿನಾ ಲೋಕವನ್ನು ಕಣ್ದೆರೆದು ನೋಡಿದಂತಾಗುವುದಿಲ್ಲ. ಆದ್ದರಿಂದ ಯಾವ ರೀತಿಯಲ್ಲಿಯಾದರೂ ತಮ್ಮಿಂದ ಸಾಧ್ಯವಿರುವ ಪರೋಪಕಾರವನ್ನು ಮಾಡಬೇಕು ಎಂಬ ಅಭಿಪ್ರಾಯವುಳ್ಳವರು, ಮಥುರಾನಾಥರಾಯರು.

ವರ್ಷಗಳನೇಕ ಕಳೆದು ಹೋದವು. ಮಥುರಾನಾಥರಾಯರಿಗೆ ಈಗ ಐದಾರು ವರ್ಷದ ಮಗನೊಬ್ಬನಿದ್ದಾನೆ. ಅದೊಂದು ದಿನ ಸನ್ಯಾಸಿಯೊಬ್ಬನು ಬಂದು ಮಥುರಾನಾಥರಾಯರ ಮನೆಯನ್ನು ಪ್ರವೇಶಿಸಿ ಹೊರಗೆ ನಿಂತಿದ್ದ ಪದ್ಮಮ್ಮನನ್ನು ಕುರಿತು, "ಮಥುರನಿಲ್ಲವೇ ಮನೆಯಲ್ಲಿ?" ಎಂದನು. ಪದ್ಮಮ್ಮ ಇಲ್ಲವೆಂಬುದನ್ನು ಸೂಚಿಸಿ, ಕುಳಿತುಕೊಳ್ಳಲು ಯೋಗಿಗೆ ಪೀಠ ಕೊಟ್ಟರು. ಅನಂತರ ತಮ್ಮ ಕೆಲಸವನ್ನು ಮಾಡಲು ತೆರಳಿದರು. ಹಗ[illegible] ಅನಂತನು ಸನ್ಯಾಸಿಯನ್ನು ವಿಕೃತ ರೀತಿಯಲ್ಲಿ ಆಶ್ಚರ್ಯದಿಂದ ನೋಡುತ್ತ ಕುಳಿತಿದ್ದನು. ಪದ್ಮಮ್ಮ ಸನ್ಯಾಸಿಯನ್ನು ಗಮನಿಸದೆ ಹೋಗಲು ಕಾರಣ

ವೆಂದರೆ, ಪತಿ ಒಮ್ಮೊಮ್ಮೆ ಹೊರಗೆ ಬಡಬಗ್ಗರನ್ನೋ ಸನ್ಯಾಸಿಗಳನ್ನೋ ಮಾರ್ಗದಲ್ಲಿ ಕಂಡರೆ ಮಧ್ಯಾಹ್ನದ ಊಟಕ್ಕೆ ಮನೆಗೆ ಹೋಗುವಂತೆ ಹೇಳಿ ಕಳುಹಿಸುವುದೂ ಉಂಟು.

ಊಟದ ಸಮಯವಾದುದರಿಂದ ಮಥುರಾನಾಥರಾಯರು ಮನೆಗೆ ಬಂದರು. ಸನ್ಯಾಸಿ ಕೂಡಲೆ ಎದ್ದು ರಾಯರಿಗೆ ನಮಸ್ಕರಿಸಲು, ವಂದನೆ ಮಾಡಿ, ಕುಳಿತುಕೊಳ್ಳಲು ಹೇಳಿ ಮಗನೊಂದಿಗೆ ಒಳಹೊಕ್ಕರು ರಾಯರು. " ಯಾರದು ಸನ್ಯಾಸಿ, ನೀನು ಊಟಕ್ಕೆ ಕರೆದೆಯೇನು ? " ಎಂದರು ರಾಯರು. " ಅಯ್ಯೋ ! ಇದೇನು ? ಅವರು ಬಂದು ನಿಮ್ಮನ್ನು ಕೇಳಿದರು. ನೀವಿಲ್ಲ, ಹೊರಗೆ ಹೋಗಿದ್ದಾರೆ, ಎಂದು ಕೂತುಕೊಳ್ಳಲು ಆಸನ ಕೊಟ್ಟೆ. ಅಲ್ಲದೆ ನೀವೇ ಊಟಕ್ಕೆ ಕಳಿಸಿರಬಹುದೂಂತ ನೆನಸಿದೆ " ಎಂದು ತಮ್ಮ ಮೇಲಿನ ಕುತ್ತವನ್ನು ತೊಡೆದು ಹಾಕಿ ಮಾತಾಡಿದರು ಪದ್ಮಮ್ಮ.

ಮಥುರಾನಾಥರು ಪತ್ನಿ ಹೇಳಿದ್ದನ್ನು ಕೇಳಿ, ತಾವೂ ಕಳಿಸಲಿಲ್ಲ, ಅವಳೂ ಕರೆಯಲಿಲ್ಲ—ಹಾಗಾದರೆ ಈತನಾರು ? ಮಾರ್ಗದಲ್ಲಿ ಯಾರಾದರೂ ಇಲ್ಲಿ ಬಂದರೆ ಊಟ ಸಿಗಬಹುದೆಂದು ಹೇಳಿರಬಹುದು ಎಂದು ಊಹಿಸಿ, ಮಗನ ನ್ನೆತ್ತಿಕೊಂಡು ಬಂದು, ಸನ್ಯಾಸಿ ಕುಳಿತಿದ್ದ ಕುರ್ಚಿಯ ಎದುರುಗಡೆ ಇದ್ದ ಆರಾಮಾಸನದಲ್ಲಿ ಅಡ್ಡಾದರು. ಆಗ ಸನ್ಯಾಸಿಯ ಕಣ್ಣುಗಳಲ್ಲಿ ನೀರಾಡುತ್ತಿದ್ದು ದನ್ನು ನೋಡಿ, " ಅದೇಕೆ, ತಾವು ದುಃಖಿಸುತ್ತಿರುವಂತೆ ಕಾಣುವುದಲ್ಲಾ ! " ಎಂದು ಕೇಳಲು, " ಏನಿಲ್ಲ, ನನ್ನ ಮಗಳೂ, ನನ್ನ ಅಳಿಯನೂ ನನ್ನನ್ನು ಗುರುತಿಸಲಾರದೆ ಹೋದರು...." ಎಂದಷ್ಟೇ ಹೇಳಬೇಕಾದರೆ ಮಥುರಾನಾಥರು ಸನ್ಯಾಸಿಯ ಕಾಲ ಬುಡದಲ್ಲಿ ಶಿರವನಿಟ್ಟುದನ್ನು ನೋಡಿ ಅನಂತನು ಓಡಿ ಹೋಗಿ, ಹೇಳಲು ಬಾಯಿ ಬರದೆ, ತಾಯಿಯ ಕೈಯನ್ನು ಹಿಡಿದು ಎಳೆದು ಕೊಂಡೇ ಬಂದನು.

" ನಿನ್ನ ತಂದೆಯನ್ನು ನಿನಗೆ ಗುರುತಿಸಲಾಗಲಿಲ್ಲವೆ, ಪದ್ಮಾ ? " ರಾಯರು ಪ್ರಶ್ನಿಸಿದರು. ಚಿತ್ತಭ್ರಮೆ ಹಿಡಿದಂತಾಗಿ ಪದ್ಮಮ್ಮ ನಿಂತಲ್ಲಿಯೇ ಕುಳಿತು ತನ್ನ ತಂದೆಯ ಮುಖವನ್ನು ನೋಡಲಾರಂಭಿಸಿದರು. ಅನಂತರ ತಾವೂ ಅತ್ತರು. ಆದರೂ ಅನೇಕ ವರ್ಷಗಳ ತರುವಾಯ ತಮ್ಮ ಕಣ್ಣಿಗೆಟಕಿದ ತಂದೆಯನ್ನು ನಗುಮೊಗದಿಂದ ಸ್ವಾಗತವಿತ್ತರು.

ಅಂದಿನ ಊಟೋಪಚಾರಗಳಾದ ತರುವಾಯ ಮಾತುಕತೆಗಳಿಗಾರಂಭ ವಾಯಿತು. ಒಂದು ವರ್ಷದ ತನಕ ಸಂಚಾರದಲ್ಲಿಯೆ ಕಳೆದುದಾಗಿಯೂ, ಉಳಿದ ಏಳೆಂಟು ವರುಷಗಳನ್ನು ರಾಮೇಶ್ವರದಲ್ಲಿ—ರಾಯನ ಸನ್ನಿಧಿಯಲ್ಲಿ—ಕಳೆದುದಾಗಿಯೂ ತಿಳಿದು ಬರಲು ಮಥುರಾನಾಥರಾಯರು ಬಹು ಸಂತೋಷ ತಾಳಿ ತಮ್ಮ ಮನಸ್ಸಿನಲ್ಲಿ ಬಹಳ ಸಮಯದಿಂದ ಅಡಗಿದ್ದು ಪ್ರೇರೇಪಿಸುತ್ತಿದ್ದ ತಮ್ಮ ಮನೋಭೀಷ್ಟವನ್ನು ಮಾವನಿಗೆ ಹೇಳಿದರು. ಮಾವನು ಅಳಿಯನ ಮಾತುಗಳನ್ನು ಕೇಳಿ ಬಹಳ ಸಂತೋಷಿಸಿ ಅದಕ್ಕೆ ತಮ್ಮ ಹೃತ್ಪೂರ್ವಕವಾದ ಒಪ್ಪಿಗೆಯನ್ನಿತ್ತರು.

ಅದೇ ಮೇರೆಗೆ ಕಟ್ಟಿಸಿದ ಆಶ್ರಮವೇ "**ರಮಾನಂದ ಆರೋಗ್ಯಾಶ್ರಮ**". ಇಲ್ಲಿ ಬಡವರಿಗೆ ಎಲ್ಲ ತರದ ಸಹಕಾರವನ್ನೂ ಕೊಡುತ್ತಿದ್ದರು. ಗತಿಯಿಲ್ಲದ ಮಕ್ಕಳನೇಕ ಅಲ್ಲಿ ಬೆಳೆಯುತ್ತಿದ್ದವು. ಅವರಿಗೆ ಊಟ, ವಿದ್ಯೆ, ಉಡಿಗೆ ತೊಡಿಗೆ ಇವೆಲ್ಲವೂ ಆಶ್ರಮದಲ್ಲಿಯೇ ನಡೆಯುತ್ತಿದ್ದವು. ಇವೆಲ್ಲದರ ಮೇಲ್ವಿಚಾರಣೆ, ವಿದ್ಯೆ ಕೊಡುವುದು ಮುಂತಾದ ಕೆಲಸಗಳು ರಮಾನಂದರ—ಕೇಶವರಾಯರ—ಕೈಯಲ್ಲಿತ್ತು. ಇದಲ್ಲದೆ, ಹೊರಗಿನಿಂದ ಬರುವ ಬಡ ಮಕ್ಕಳಿಗೂ ವಿದ್ಯೆ ದೊರಕುತ್ತಿತ್ತು. ಹೀಗೆ 'ರಮಾನಂದ ಆರೋಗ್ಯಾಶ್ರಮ'ವು ಬ್ರಹ್ಮಾವರದಲ್ಲಿ ಪ್ರಸಿದ್ಧಿ ಪಡೆಯಿತು. ಒಂದು ವಾರಕ್ಕೊಮ್ಮೆ ಮಥುರಾನಾಥರಾಯರು ಹೋಗಿ ಬರುವುದು—ಅಲ್ಲಿನ ಮಕ್ಕಳನ್ನು ಸಂತೋಷಪಡಿಸುವುದು—ಅದರೊಂದಿಗೆ ತಾವೂ ಸಂತಸಪಡೆಯುವುದು. ಹೀಗೆ ಮಥುರಾನಾಥರಾಯರ ಜೀವನವು ಆನಂದಸಾಗರದಲ್ಲಿ ತೇಲಾಡುತ್ತಿದ್ದಿತು.

ಇದೇ ಆಶ್ರಮದಲ್ಲಿ ಅಂದು ರಮಾನಂದರಿಗೆ ದೊರಕಿದ ಆ ಮಗುವೂ ಬೆಳೆಯುತ್ತಿದ್ದಿತು.

*      *      *      *

ಆ ಮಗುವಿನ ಆರೈಕೆಯನ್ನು ಮಾಡುತ್ತಿದ್ದ ಕಾಂಚನೆಗೆ ಜ್ವರಬಾಧೆ ವಿಪರೀತವಾಗಲು ಅವಳನ್ನು ಆಸ್ಪತ್ರೆಗೆ ಒಯ್ದಿದ್ದರು. ಕಾರಣ ಮಗುವಿನ ಆರೈಕೆ ಮಾಡಲು ಸೂಕ್ತ ಜನವಿಲ್ಲದಾಯಿತು. ಈ ಕೆಲಸಕ್ಕೆ ಯಾರನ್ನು ನಿರ್ಧರಿಸುವುದು ಎಂಬುದನ್ನೇ ಧ್ಯಾನಿಸುತ್ತಿದ್ದಾರೆ ಅಳಿಯ ಮಾವಂದಿರಿಬ್ಬರೂ. ಯಾವ ಉಪಾಯವೂ ಕಾಣದಾಗಲು, ಮಥುರಾನಾಥರಾಯರು ತಮ್ಮ ಮನೆ

ಊಳಿಗದವಳಾದ ರಂಗಮ್ಮನನ್ನೇ ಈ ಕಾರ್ಯಕ್ಕೆ ನಿಯಮಿಸುವುದಾಗಿ ನಿಶ್ಚಯಿಸಿದರು.

ಮನೆಯ ಕೆಲಸವೆಲ್ಲ ಪದ್ಮಮ್ಮನ ಮೇಲೆ ಬೀಳಲು, 'ಉಸ್' ಎಂದು ತಮ್ಮ ಕಷ್ಟವನ್ನು ಸಹಿಸಿಕೊಳ್ಳುತ್ತಲೂ, ಕಾರ್ಯವನ್ನು ಸಾಂಗವಾಗಿ ನೆರವೇರಿಸುತ್ತಿದ್ದರು.

ಅಕಾಸ್ಮಾತ್ತಾಗಿ ರಮಾನಂದರು ಮನೆಯ ಕಡೆ ಬರುವುದನ್ನು ನೋಡಿ ಆಶ್ಚರ್ಯಗೊಂಡ ಅವರ ಅಳಿಯನು, ಅವರಿಗೆ ಸ್ವಾಗತವಿತ್ತನು. ಅನಂತರ ಮಾತಿಗಾರಂಭವಾಯಿತು.

"ಮಗೂ ಮಧುರಾ, ಇದೀಗ ಇಲ್ಲಿಗೆ ಬರಲು, ಇಂದು ಬೆಳಗಿನಲ್ಲಿ ಸಂಭವಿಸಿದ ಒಂದು ಸನ್ನಿವೇಶವೇ ಕಾರಣವಾಗಿದೆ!"

"ಅದ್ಯಾವುದು?"

"ನೀನು ಕಾಂಚನೆಯ ಸ್ಥಳದಲ್ಲಿ ಇನ್ನೊಬ್ಬಳನ್ನು ನಿಯಮಿಸಿರುವೆಯಲ್ಲ, ಅವಳು ಯಾರೆಂಬುದರ ಪರಿವೆಯಿದೆಯೆ ನಿನಗೆ?"

"ಅವಳ್ಯಾರು? ನಮ್ಮಲ್ಲಿ ಮೊದಲು ಊಳಿಗಮಾಡುತ್ತಿರಲಿಲ್ಲವೆ—ಆ ಮುದುಕಿ ಪಾರಮ್ಮ............ತಾನು ಅವಳ ಮೊಮ್ಮಗಳು ಎಂಬುದಾಗಿ ಆಕೆಯೇ ತಿಳಿಸಿದ್ದಳು........"

"ಅದೇಕೆ ಸುಳ್ಳಾಗಬಾರದು?"

"ತಾವೇಕೆ ಈ ವಿಷಯದಲ್ಲಿ ಇಷ್ಟು ಕಷ್ಟ ಪಡುತ್ತೀರಿ; ಸಂಭವಿಸಿದ ಘಟನೆಯಾದರೂ ಏನು, ಹೇಳಬಾರದೆ?"

"ಆತುರಪಡಬೇಡ. ಹೇಳುವೆನು ಕೇಳು. ನಾನಿಂದು ಮುಂಜಾವದಲ್ಲಿ ನನ್ನ ಭಗವದ್ವಂದನೆಯನ್ನು ತೀರಿಸಿಕೊಂಡು ಆಶ್ರಮವನ್ನು ತಲಪಿದೆ. ಮಗುವಿನ ಕ್ಷೇಮವನ್ನು ವಿಚಾರಿಸಲೋಸುಗ ಆ ಗೃಹವನ್ನು ಪ್ರವೇಶಿಸಲು ರಂಗಮ್ಮನು ಮಗುವಿಗೆ ಮೊಲೆಯುಣಿಸುತ್ತಿದ್ದುದು ನನಗೆ ಕಂಡುಬಂದಿತು. ಬಾಗಿಲಿಗೆ ಬೆನ್ನು ಹಾಕಿ ಕುಳಿತಿದ್ದವಳು, ನನ್ನ ಕಾಲ ಸಪ್ಪಳವಾಗಲು, ಒಮ್ಮೆಲೆ ಎಚ್ಚರಗೊಂಡು ಹಿಂದಿದ್ದ ಹಾಲಿನ ಕುಪ್ಪಿಯನ್ನು ತೆಗೆದು ಮಗುವಿನ ಬಾಯಿಗೆ ಹಿಡಿದಳು. ನಾನಿದೆಲ್ಲವನ್ನೂ ನೋಡಿದೆನಾದರೂ ಪಿಟ್ಟೆನ್ನದೆ ಒಳಹೊಕ್ಕು ಮಗುವನ್ನು ನೋಡಿಕೊಂಡು ಹಿಂತಿರುಗಿದೆ. ಆಗ ಅವಳ ಕಣ್ಣುಗಳು ಊದಿ

ಕೊಂಡಿದ್ದುದರಿಂದ, ಅವಳು ಅಳುತ್ತಿದ್ದಳೆಂಬುದು ಸ್ಪಷ್ಟವಾಗಿ ತಿಳಿದು ಬರುತ್ತಿತ್ತು."

"ತಮ್ಮ ಮಾತಿನಲ್ಲಿ ರಂಗಮ್ಮನ ವಿಷಯದಲ್ಲಿ ಏನೋ ಗೂಢವಿದೆ ಎಂಬುದಾಗಿ........"

"ಹೌದು. ನನಗೂ ಹಾಗೇ ಭಾಸವಾಗುತ್ತಿದೆ. ನಾವಾಗಿ ಅವಳನ್ನು ವಿಚಾರಿಸುವುದೆಂದರೆ ನನಗದು ಅಷ್ಟು ಉಚಿತವೆಂದು ತೋರುವುದಿಲ್ಲ."

"ಮತ್ತೆ ಹೇಗೆ ಸಾಧ್ಯ ?"

"ಅದಕ್ಕೆ, ಮೊದಲು ಪಾರಮ್ಮನನ್ನು ಇಲ್ಲಿಗೆ ಬರಮಾಡಿ, ಈ ಗೂಢವನ್ನು ಅವಳಿಂದಲೇ ಬಿಡಿಸುವ ಪ್ರಯತ್ನ ಮಾಡಬೇಕು."

ಈ ವಿಧದಲ್ಲಿ ತಮ್ಮ ಮನಸ್ಸಿನಲ್ಲಿದ್ದುದನ್ನು ರಮಾನಂದರು ಅಳಿಯನಿಗೆ ನಿರೂಪಿಸಿ ಹೊರಟರು. ಮಥುರಾನಾಥರು ಮಾವನನ್ನು ಕಳುಹಿಸಿಕೊಟ್ಟು ಅಂದೇ ಈ ಸಂಗತಿಯನ್ನು ಸಹಧರ್ಮಿಣಿಯ ಕಿವಿಯಲ್ಲಿ ಹೇಳಿದರು. ಇದನ್ನು ಸಾಧಿಸುವ ಕಾರ್ಯ ಪದ್ಮಮ್ಮನ ಪಾಲಿಗೆ ಸೇರಿತು.

* * * *

"ಪಾರಮ್ಮಾ, ಬಂದೆಯಾ ? ಎಲ್ಲಾ ಬಿಡಿಸಿಕೊಂಡು ಬಂದೆಯಾ ?" ಎಂದರು ಪದ್ಮಮ್ಮ.

"ಇಲ್ಲ ತಾಯಿ. ಅವಳೇನನ್ನೂ ಹೇಳೋದಿಲ್ಲಾ. ಅವಳು ಹಾಡಿದ ಹಾಡನ್ನೇ ಪುನಃ ಪುನಃ ಅನ್ನುತ್ತಿದ್ದಾಳೆ."

"ಅದೇನೆಂದು ?"

"ಏನೆಂದು! ಅವಳೂ ಕೂಡ ನನ್ನ ಜಾತಿಯವಳಂತೆ—ಪತಿ ತೀರಿಕೊಂಡನಂತೆ—ಆಗ ಯಾರೂ ಗತಿಯಿಲ್ಲದಂತಾದಳಂತೆ—ಹಾಗೇ ಬಿಕ್ಕೆ ಬೇಡುತ್ತಾ ಬಂದು ನನ್ನನ್ನು ಸೇರಿದಳಂತೆ."

"ಏನೋ ಸುಳ್ಳು ಹೇಳುವಂತಿದೇಲ್ಲ ನಿನ್ನ ಮಾತು ಕೇಳಿದರೆ. ಅವಳು ಮೊದಲು ನಮಗೆ....ನೀನವಳ ಅಜ್ಜಿ—ಅವಳ ಗಂಡನ ತಂದೆಯ ತಾಯಿ—ಎಂದು ಹೇಳಿದಳಲ್ಲ. ಅದನ್ನೀಗ ನೀನು ನನ್ನೊಡನೆ ಮರೆಮಾಚುತ್ತೀಯಲ್ಲ."

"ಅಯ್ಯೋ, ನನಗೆ ಹಾಗೊಬ್ಬ ಮೊಮ್ಮಗಳೇ ಇಲ್ಲವಲ್ಲಾ, ತಾಯಿ."

"ಹಾಗಾದರೆ ಅವಳೇಕೆ ಹಾಗೆ ಹೇಳಿದಳು. ಪರವಾ ಇಲ್ಲ. ಕ್ರಮೇಣ ತಿಳಿದೀತು. ನೀನು ಈ ಕಾರ್ಯದಲ್ಲಿ ಎಚ್ಚರದಿಂದಿರು. ಹೂಂ!"

" ಆಗ್ಲಿ, ತಾಯಿ."

ಪಾರಮ್ಮನು ಪದ್ಮಮ್ಮನಿಗೆ ವಚನವಿತ್ತು, ಪದ್ಮಮ್ಮನಿಗೆ ಅಂದಿನ ಚಿಲ್ಲರೆ ಕೆಲಸಗಳನ್ನು ಮಾಡಿಕೊಟ್ಟು ಹಿಂತೆರಳಿದಳು.

ಕಾಂಚನೆಯು ಗುಣಮುಖಳಾಗಿ ತನ್ನುಜ್ಜುಗವನ್ನು ಸ್ವೀಕರಿಸಲು, ರಂಗಮ್ಮನು ಗತ್ಯಂತರವಿಲ್ಲದೆ ತನ್ನ ಹಿಂದಿನ ಪದವಿಯನ್ನೇ ಸೇರಿದಳು.

ಪಾರಮ್ಮನಿಗಂದು ಏನೋ ಮೈಕೈ ನೋವೆದ್ದಿತ್ತು. ಪ್ರಾಯಶಃ ಪಾರಮ್ಮ ಅಂದು ಪದ್ಮಮ್ಮನಿಗೆ ಮನೆಗೆಲಸದಲ್ಲಿ ಸಹಾಯ ಮಾಡಿದುದರಿಂದಲೇ ಆಗಿರ ಬೇಕು. ರಂಗಮ್ಮನು ಸಮೀಪವಿದ್ದು ಪಾರಮ್ಮನ ಬೆನ್ನೊತ್ತುತ್ತಾ ಇರಲು ಅವಳ ಕಂಗಳಿಂದ ಉಕ್ಕಿಬಂದ ಕಣ್ಣೀರ ಹನಿಗಳೆರಡು ಪಾರಮ್ಮನನ್ನು ಎಚ್ಚರ ಗೊಳಿಸಿದವು. ಆಗ ಅವಳು, " ಏನಮ್ಮ, ಮೈಮೇಲೆ ಏನೋ ನೀರ ಹನಿ ಬಿದ್ದಂತಾಯಿತಲ್ಲಾ........" ಎಂದು ಕೇಳಲು, ರಂಗಮ್ಮನು, " ಏನಿಲ್ಲ, ಅದು ನೆತ್ತಿಯ ಬೆವರ ಹನಿ " ಎಂದು ಅದನ್ನು ತನ್ನ ಸೀರೆಯ ಸೆರಗಿನಿಂದ ತೊಡೆದಳು.

" ನಿನ್ನ ಮೆತ್ತನ ಕೈಗಳ ಒತ್ತಡದಿಂದ ನನಗೆ ಹೊಸ ಹುರುಪು ಬಂದಂತಾ ಗಿದೆ, ತಾಯಿ. ನನಗೂ ನಿನ್ನ ಹಾಗೆ........ಹಾಂ !........ಆ ಮೂಢ ಸುಬ್ಬನ ಹೆಂಡ್ತಿ ಮನೆಯಿಂದ ಓಡ್ಸಿ ಬಿಟ್ಟು........ಅವಳು ಎಲ್ಲಿ ಹೋದ್ಳೋ ಪಾಪ.... ಆ ಹುಡ್ಗನೂ ಎಲ್ಲಿಯೋ ಹೇಳದೆ ಕೇಳದೆ ಓಡ್ಹೋಗಿ ಬಿಟ್ಟಾಂತೆ ! "

" ಅವರ್‍ಯಾರಜ್ಜಿ ? "

" ಯಾರೂಂತ ಹೇಳ್ಲಿ, ತಾಯಿ. ಹುಣ್ಸೂರು ಗ್ರಾಮದಲ್ಲಿ ನನಗೊಬ್ಬ ತಮ್ಮ ಇದ್ದಾನೆ. ಸುಬ್ರಾಯ ಅಂತ ಹೆಸ್ರು. ಅವನಿಗೆ ಇಬ್ಬರು ಗಂಡು ಮಕ್ಳು. ದೊಡ್ಡವ ವಿಜಯನಿಗೆ—ಮಂಗಳೂರಲ್ಲಿ ಮಾಧವರಾಯರೂಂತ ಒಬ್ಬರಿದ್ದಾರೆ. ಅವರ ಮಗಳ್ನ ತಂದು ಮದುವೆ ಮಾಡಿಸಿದ್ರು. ಪಾಪ, ಎಷ್ಟು ಒಳ್ಳೇ ಹುಡುಗಾಂತಿ ಅಂವ; ಬಂಗಾರದಂಥಾ ಹುಡುಗ. ದೇವ್ರು ತಡೆಯ ಲಾರ್‍ದೆ ಕೊಂಡ್ಹೋಗ್ ಬಿಟ್ಟ. ಅವನ ಹೆಂಡ್ತಿ ಸ್ವರ್ಣ........ಹ್ಹ ! ಸ್ವರ್ಣ ಅಂದ್ರೆ ನಿಜ ಸ್ವರ್ಣಾನೇ ಆಗಿದ್ಳು ! ಆ ಹುಡಿಗೀನಾದ್ರೂ ಸುಖದಲ್ಲಿರ್‍ಲಿಕ್ಕೆ ಬಿಟ್ಟಾಳೇ—ಆ ಮಾರಿ ಮುಂಡೆ ಜಾನಕಿ. ಅವಳನ್ನೂ ಮನೆ ಬಿಟ್ಟು ಓಡ್ಸಿದ ಳಂತೆ......."

" ಇಲ್ಲಾಜ್ಜಿ, ಅವಳನ್ನು ಓಡಿಸ್ಲಿಲ್ಲ. ಅವಳಾಗೇ ಓಡಿಹೋದಳು."

" ಹಾಂ! ನಿನಗೂ ಗೊತ್ತಿದೇನವ್ವಾ—ಈ ಸಂಗ್ತಿ."

" ಹೌದಜ್ಜೀ, ನಂಗೂ ಗೊತ್ತಿದೆ. ನಾನೂ ಮಂಗಳೂರಿನವಳೇ. ನನ್ನನ್ನೂ ಹುಣ್ಸೂರು ಗ್ರಾಮದಲ್ಲಿ ತಂದಿದ್ದರು. ಸ್ವರ್ಣ ನನ್ನ ಸಹಪಾಠಿ. ಮಾಡೋದೇನು? ನಮ್ಮಿಬ್ಬರ ತಲೇ ಮೇಲೂ ದೇವ್ರು ಒಂದೇ ಅಕ್ಷರ ಬರೆದ್ಬಿಟ್ಟಿದ್ದಾನೆ."

" ಆ ಮಾರಿ ಮುಂಡೆ ಅಷ್ಟೇನೆ ಮಾಡಿದ್ದಲ್ಲ, ಅವಳನ್ನು ಮನೆಯಿಂದ ಹೊರಡ್ಸುವಾಗ ಅವಳು ಗರ್ಭಿಣಿಯಂತೆ. ಪಾಪ! ಎಲ್ಲಿ ಹೋದ್ಲೋ, ಏನಾರ ಆಯ್ತೋ ಏನೋ! ಅಷ್ಟೇ ಅಲ್ಲ—ಅವಳು ಹೊರಟ್ಹೋದ ದಿನಾನೇ ಅವಳ ಮಗ ಕಿಶೋರ, ಬಿ.ಎ. ಪಾಸಾದವ, ಎಲ್ಲಿಗೋ ಹೇಳದೆ ಕೇಳದೆ ಓಡ್ಹೋಗಿ ಬಿಟ್ನಂತೆ."

" ಇದನ್ನೆಲ್ಲಾ ನಿನಗಾರಜ್ಜಿ ಹೇಳಿದ್ರು?"

" ಅದೇ ಅವರ ಹೊಲದಲ್ಲಿ ಕೆಲಸ ಮಾಡ್ತಾನಲ್ಲ ತನಿಯ, ಅವ್ನು ಗರ್ಭಿಣಿ ಹೆಂಡ್ತಿಯನ್ನು ಇಲ್ಲಿ ತಾಯಿ ಮನೇಲಿ ಬಿಡ್ಲಿಕ್ಕೇಂತ ಮೊನ್ನೆ ಇಲ್ಲಿಗೆ ಬಂದಿದ್ದ; ಎಲ್ಲಾ ಹೇಳಿದ."

" ಸರಿ. ಅವನ ಮಾತು ಕೇಳಿಕೊಂಡು ಜಾನಕಮ್ಮನೋರನ್ನ ಬಯ್ಬಹುದೇ?"

" ಅವನ ಮಾತ್ಕೇಳಿ ಅಲ್ಲಾ, ತಾಯಿ, ಅವಳ ಹಣೇಬರಹ ನಂಗೆ ಮೊದ್ಲೇ ಗೊತ್ತಿದೆ. ಅವಳಿಂದಾಗಿ ನನ್ತಮ್ಮ ನನ್ನ ಗೋಟ್ರಾನೇ ಬಿಟ್ಬಿಟ್ಟಿದ್ದಾನೆ. ಇಲ್ದಿದ್ರೆ ಅವ್ನ ಭಾವ ಸತ್ತಾಗ ಅಂವ ಬರದೆ ಇರ್‍ತಿದ್ನೆ; ಚಿಕ್ಕಂದಿನಲ್ಲಿ ಅವ್ನಿಗೆ ನಾನು ಅಂದ್ರೆ ಜೀವ........"

" ಅದನ್ನೆಲ್ಲಾ ಈಗ ಮನಸ್ಸಿಗೆ ತಂದ್ಕೊಂಡು ಏನು ಫಲ, ಅಜ್ಜಮ್ಮ. ಅವರನ್ನು ಹೇಳ್ಲೂ ಬಾರದು........ಅಂದ್ರೆ ಅವರಿಗೆ ಕಾಲಿನ ವಾತದ ನೋವಿನಿಂದ ಒಳಗೆ ಆಚೀಚೆ ನಡೆಯೋದೆ ಬಹಳ ಕಷ್ಟ........ಕಣ್ಣು ಕೂರುತ್ತಿದೆ, ನಾನು ಒಂದಿಷ್ಟು........"

" ಹೌದಮ್ಮ, ಬೆಳಗಾಗಿನಲ್ಲಿ ಏಳೋದು ಬೇಡವೇ? ಹೋಗಮ್ಮಾ, ಹೋಗು, ಎಷ್ಟೊಂಹೊತ್ತಾಯ್ತು!"

ರಂಗಮ್ಮನೆದ್ದು ಬಂದು ತನ್ನ ಹುಲ್ಲಿನ ಚಾಪೆಯನ್ನು ಹಾಸಿ ಮಲಗಿದಳು. ಅವಳ ಉಮ್ಮಳಿಕೆ ಅವಳನ್ನು ಒಳಗೊಳಗೇ ದಹಿಸುತ್ತಿದ್ದಿತಾದುದರಿಂದ ಅವಳ ಕಣ್ಣುಗಳು ಉಬ್ಬಿಕೊಂಡಿದ್ದವು. ಮುಖವು ಕೆಂಚನೆ ಕೆಂಪಾಗಿದೆ. ಒಮ್ಮೊಮ್ಮೆ ನೀರು ತಾನಾಗಿ ಅವಳಿಗರಿಯದಂತೆ ಮುತ್ತುಗಳ ಸರಣಿಯಂತೆ ಉರುಳಿ ಹೋಗುತ್ತಿದ್ದವು. ಆ ಸಮಯದಲ್ಲಿ ಅವಳ ಕಠಿಣವಾದ ದುಃಖದ ಕಾರಣವನ್ನು ಕೇಳಿ ಒಲವಿನ ಎರಡು ಮೃದು ಮಾತುಗಳನ್ನಾಡಿ ಅವಳ ಮನಸ್ಸಿಗೆ ಶಾಂತಿಯನ್ನು ಕೊಡುವವರಾರು? ಅದಾವ ಸಂತಾಪವು ಅವಳ ಧಮನಿಯನ್ನು ಭೇದಿಸಿ ಕೊರೆಯುತ್ತಿದ್ದಿತೊ, ಅವಳು ಬಿಕ್ಕಿಬಿಕ್ಕಿ ಅಳಲಾರಂಭಿಸಿದಳು.

"ರಂಗಮ್ಮಾ, ಅದಾರು ಅಳುವ ಶಬ್ದ........" ಎಂದು ಒಮ್ಮೆಲೆ ಎಚ್ಚರವಾದ ಪಾರಮ್ಮ ಕೇಳಿದಳು.

ರಂಗಮ್ಮನು ಮೋರೆ ಉಜ್ಜಿಕೊಂಡು, "ಯಾರೂ ಇಲ್ಲವಲ್ಲಾ" ಎಂದಳು.

"ಸರಿ. ಯಾರೋ ಅತ್ತ ಹಾಗೆ ಕೇಳಿತು. ನೀನೇ ಕನಸಿನಲ್ಲೇನಾದರೂ ಅತ್ತೆಯೇನೋ ಎಂದು ಕೇಳಿದೆ" ಎಂದು ಪಾರಮ್ಮ ಸುಮ್ಮನಾದಳು.

ಅಷ್ಟರಲ್ಲಿ ಕೋಳಿ ಕೂಗಿತು. ರಂಗಮ್ಮ ಬೆಚ್ಚಿಬಿದ್ದಳು. ಅವಳು ಆ ಇಡೀ ರಾತ್ರಿ ಕಣ್ಣು ಮುಚ್ಚಿರಲಿಲ್ಲ. ಅಂತೂ ಎದ್ದು ತನ್ನ ನಿತ್ಯಾನುಷ್ಠಾನಕ್ಕೆ ಕೈಹಾಕಿದಳು.

೫

ಅಂದು ಆಫೀಸು ಇರಲಿಲ್ಲವೇನೊ, ಮಾಧವರಾಯರು ಆರಾಮಕುರ್ಚಿಯಲ್ಲಿ ಬಿದ್ದುಕೊಂಡಿದ್ದಾರೆ. ಅವರಿಗೆ ಊಟವಾದಾಕ್ಷಣ ಎಲೆಯಡಿಕೆ ಹಾಕುವುದು ಒಂದು ಅಭ್ಯಾಸ. ಕಾವೇರಮ್ಮ ಗಂಡನ ಕರೆ ಕೇಳಿಯೇ ಕಾರಣ ತಿಳಿದುಕೊಂಡು, ತಾಂಬೂಲದ ಹರಿವಾಣವನ್ನು ಕೈಯಲ್ಲಿ ಹಿಡಿದುಕೊಂಡು, ಸುಣ್ಣದ ಪಾತ್ರೆಗಾಗಿ ಮನೆಯೊಳಗೆ ಅಲ್ಲಲ್ಲಿ ಮೂಲೆ ಮೂಲೆ ಹುಡುಕಾಡುತ್ತಿದ್ದರು. "ಏನು ಮಾಡುತ್ತೀಯೆ ಒಳಗೆ? ಕರೆದು ಗಂಟೆ ಕಳೆದ್ಹೋಯ್ತು; ಇನ್ನೂ ಕಾಣೋದಿಲ್ಲ ಲ್ಲಾ" ಎಂದುದನ್ನು ಕೇಳಿ "ಹಾಂ ಹಾಂ! ಬಂದೆ.... ಸುಣ್ಣದ ಕರಡಿಗೆ ಹುಡುಕಿ ಹುಡುಕಿ ಹೇಗೂ ಸಿಕ್ಕಿತು! ಇನ್ನು ಅಡಿಕೆ ತುಂಡು

ಮಾಡ್ಲಿಕ್ಕೆ ಚೂರಿಗೆ ಏನ್ಮಾಡ್ಲಿ ಹಾಂ! ಸಿಕ್ಕಿತು, ಬಂದೆ" ಎಂದು ಹೇಳುತ್ತ ಕೈಗೆ ದೊರೆತ ಒಂದು ಮೊಂಡು, ತಲೆ ತುಂಡಾದ ಚೂರಿಯೊಂದನ್ನು ತೆಗೆದು ಹರಿವಾಣದಲ್ಲಿರಿಸಿ, ಪತಿಯ ಮುಂದೆ ತಂದಿಟ್ಟರು.

"ಮನೆಯೊಳಗೆ ಚೆನ್ನಾಗಿ ಹುಡುಕಿದರೆ ಸಾವಿರ ಚಾಕು ಸಿಕ್ಕೀತು. ಎಲ್ಲಾ ಬಿಟ್ಟು ಈ ಮೊಂಡು ಚಾಕು ತಂದಿದ್ದೀಯಲ್ಲ—ಹೂಂ! ಅದಾದ್ರು ಸಿಕ್ಕಿತಲ್ಲ, ಅದೇ ದೊಡ್ಡ ಪುಣ್ಯ!" ಎಂದು ಹೇಳಿ ಅದೇ ಚೂರಿಯಿಂದ ವಿಶ್ವಪ್ರಯತ್ನದಿಂದ ಅಡಿಕೆ ತುಂಡು ಮಾಡಿದರು.

ಕಾವೇರಮ್ಮ ನಿಂತಲ್ಲಿಯೇ ಕುಸಿದು ಕುಳಿತರು. ಕಣ್ಣುಗಳಲ್ಲಿ ನೀರಾಡುತ್ತಿದ್ದುದು ಕಾಣಬರುತ್ತಿತ್ತು. ಇದರಲ್ಲಿ ರಾಯರನ್ನು, ಅಂದರೆ ಪತಿಯನ್ನು ಯಾವುದರಲ್ಲೋ ಉದ್ರೇಕಗೊಳಿಸುವ ಶ್ರದ್ಧೆಯಿದೆ ಎಂಬುದು ಒಡೆದು ಕಾಣುತ್ತಿತ್ತು. ಇದನ್ನು ಕಂಡ ಪತಿದೇವರು ಸತ್ತಿಗೆಯನ್ನು ಎತ್ತಿಕೊಂಡು ಎಲ್ಲಿಗೋ ಹೊರಡಲುದ್ಯುಕ್ತರಾದರು. ಇದರ ಇಂಗಿತವನ್ನರಿತ ಸತೀದೇವಿ "ಎಲ್ಲಿಗೆ ಈ ಬಿಸಿಲಲ್ಲಿ, ಕೆಲ್ಸಾ ಇಲ್ದಿದ್ರೂ, ಮನೇಲಿ ಕೂರ್‍ಬಾರ್‍ದೇ ಸ್ವಲ್ಪ" ಎಂದು ಹೇಳುತ್ತ ಕಣ್ಣಿನಿಂದ ಹೊರಬಂದ ನೀರನ್ನು ಉಜ್ಜಿಕೊಂಡರು. ಮಾಧವರಾಯರು ಉಪಾಯವಿಲ್ಲದೆ ಅಲ್ಲಿಯೇ ಕೂತರು.

"ಒಂದು ಹುಡುಗಿಯನ್ನು ಕೊಟ್ಟು ಬಂದ ಸುಖವನ್ನೂ ಕಷ್ಟವನ್ನೂ ಪಡೆದುದಾಯಿತು. ಕಡೆಗೆ ಸಾಕು ಸಾಕೂಂತ ಊರು ಬಿಟ್ಟು ಓಡಿಯೂ ಬಿಟ್ಟು. ಎಲ್ಲಿದೆಯೋ........ಏನಾಯಿತೋ.........ಸತ್ತಿತೋ.........ಬದುಕಿತೋ........ ಆದರ ಮೇಲೆ ಗರ್ಭಿಣಿ...." ಎಂದು ತಡೆಯುಲಾರದೆ ಕಣ್ಣಲ್ಲಿ ನೀರ್ಗರೆಯುತ್ತ, "ಹುಡುಗಿ ಹೆಂಗ್ಸಾಗಿ ಮಾಸ ಆರಾಯ್ತು. ನೀವು ಇನ್ನೂ ಸುಮ್ಮನೆ ಕೂತಿದ್ದೀರಿ. ಬೇಗ ಒಮ್ಮೆ ಆದರೆ, ಹುಡುಗನಿಗೆ ಒಂದು ತರ್‍ಬೇಕು. ನಂಗೆ ಸೊಂಟಾನೇ ತೆಗೀಲಿಕ್ಕಾಗೋದಿಲ್ಲ. ಕೂತು ಏಳ್ಬೇಕಾದ್ರೆ ಪ್ರಾಣ ಹೋಗ್ತಿದೆ" ಎಂದು ಕಾವೇರಮ್ಮ ಹೇಳಿದರು.

ಮಾಧವರಾಯರಿಗೆ ಹಿರಿಯ ಮಗಳ ವಿಚಾರ ಬಂದಾಗ ಮನಸ್ಸಿಗೇನೋ ಸ್ವಲ್ಪ ವ್ಯಥೆಯಾಯಿತು. ಆದರೆ ಫಲವೇನು? ಯಾರಿದ್ದರೇನು? ತಾಯಿಯಿದ್ದರೇನು? ತಂದೆಯಿದ್ದರೇನು? ಎಲ್ಲಾ ವ್ಯರ್ಥ! ಹೆಂಡತಿ, ಮಕ್ಕಳು ಮರಿಗಳು, ಅಕ್ಕ ತಂಗಿ, ಅಣ್ಣ ತಮ್ಮ, ಬಂಧುಬಳಗದವರು—ಎಲ್ಲ ವ್ಯರ್ಥ!

ಆಧುನಿಕ ಪ್ರಪಂಚದಲ್ಲಿ ಹಣವೇ ಪ್ರಧಾನವಾಗಿದೆ. ಜೇನಿರುವಲ್ಲಿ ನೊಣ ಹೇಗೆ ಮುತ್ತಿಕೊಂಡಿರುವುವೋ, ಅಂತೆಯೇ ಮನುಷ್ಯರು ಎಲ್ಲಿ ಹಣವಿರು ವುದೋ ಅಷ್ಟರತನಕ ಅಲ್ಲಿರುವರು. ಅನಂತರ ಮಧು ತೀರಲು ನೊಣಗಳು ಮಾಯವಾಗುವಂತೆ, ಮನುಷ್ಯರು ತಮ್ಮ ಆಶ್ರಯದಾತರ ಕೈ ಬರಿದಾಯಿ ತೆನ್ನುವಾಗ ಮಾಯವಾಗುತ್ತಾರೆ. ಕಡೆಗೆ ಅವರೇ ನಮಗೆ ಎದುರಾಗುವರು. ಜಗತ್ತು ಮನಕ್ಕಿಂತಲೂ ಹಣಕ್ಕೆ ಪ್ರಾಧಾನ್ಯವಿತ್ತಿದೆ. ಸ್ವರ್ಣ ಗಂಡನ ಮನೆಗೆ ಹೋದ ಹೊಸದರಲ್ಲಿ ತಾಯಿಗೆ ತಂಗಿಗೆ ಎಂದು ತನ್ನ ವಸ್ತ್ರ ಒಡವೆ ಹಣ ಕಾಸೆಂದು ಎಷ್ಟೋ ತನ್ನ ಮನಃಪೂರ್ವಕವಾಗಿ ಕೊಟ್ಟಾಗ ಚೆನ್ನಾಗಿ ಅವಳನ್ನು ಪ್ರೀತಿಸಿದರು; ಮಗಳೇ ಸ್ವರ್ಗವೆಂದು ಭಾವಿಸಿದರು. ಆದರೆ ಅವಳಿಗೆ ಕಷ್ಟ ಬಂದು ತಂದೆತಾಯಿಗಳಿರುವರೆಂಬ ಧೈರ್ಯದಿಂದ ಮನೆಬಾಗಿಲಿಗೆ ಬಂದಾಗ, ಅವಳು ಬೇಡವಾದಳು. ಅವಳನ್ನು ಕರೆದು ಅವಳ ಸಮಸ್ಯೆಯನ್ನು ಒಡೆದು, ಬಿಡಿಸಿ, ಚೆನ್ನಾಗಿ ಪರಾಂಬರಿಸಿ ವಿಚಾರಿಸಿ ನೋಡುವ, ನೋಡಬೇಕೆಂಬ ಬುದ್ಧಿಯು ಆ ತಂದೆಗೂ ಹುಟ್ಟಲಿಲ್ಲ, ಆ ತಾಯಿಗೂ ಬರಲಿಲ್ಲ! ಇಂಥಾ ತಾಯ್ತಂದೆಯರು ಇದ್ದರೇನು, ಸತ್ತರೇನು? ಈಗ ಅವಳನ್ನು ನೆನೆದು ಕೊರಗು ವುದು! ಏಕೆ?....ಆಗ ಸಮಾಜ ಬೇಕಾಗಿತ್ತು; ಮಗಳಿಗಿಂತಲೂ ಸಮಾಜವೇ ಹಿರಿದಾಗಿ ಕಂಡಿತು. ಸಮಾಜಕ್ಕೆ ಬೇಡವಾದ ಕೂಡಲೆ ತಾಯ್ತಂದೆಯರಿಗೂ ಬೇಡವಾದಳು—ಮಗಳು! ಸಮಾಜವು ಕಡೆಗಣಿಸಿದರೂ, ಈ ಅಂಥ ಸಮಾ ಜಕ್ಕೆ ಹೆದರಿ ಹಿಂಜರಿದ ತಾಯ್ತಂದೆಯರಿಗೆ ಬೇಡವಾದರೂ ಅವಳ ದೈವ ಕೈಬಿಡಲಿಲ್ಲ!

ಕಾವೇರಮ್ಮ ಹೀಗೆ ಒರಸೆಯಾಗಿ ಮಾತಾಡುತ್ತಿರಲು, ರಾಯರಿಗೆ ಸಿಟ್ಟು ಬಂದು, "ಬಾಯಿ ಮುಚ್ಚಿ ಸುಮ್ಮನೆ ಕೂರು; ಬಾಯಿಗೆ ಬಂದದ್ದನ್ನೆಲ್ಲಾ ಅನ್ನಬೇಡ. ಎಲ್ಲಾ ನನಗೆ ಗೊತ್ತಿದೆ. ನಿನಗೆ ಎಷ್ಟು ಬೇಕೋ ಅಷ್ಟು ನೋಡಿ ಕೊಂಡು ನಾಲಿಗೆ ಬಾಯೊಳಗಿಟ್ಟುಕೊಂಡಿರುವುದು ನಿನ್ನ ಕೆಲಸ" ಎಂದು ಖಡಾಖಡಿ ಅಂದುಬಿಟ್ಟರು. ಕಾವೇರಮ್ಮ ಕಣ್ಣಲ್ಲಿ ನೀರಿಲ್ಲದಿದ್ದರೂ ನೀರನ್ನು ತರಿಸಿಕೊಂಡು ಸೆರಗಿನ ತುದಿಯಿಂದ ಒರಸಿಕೊಳ್ಳುತ್ತ ಒಳಗೆ ನಡೆದರು. ಗಂಡನಿಗೆ ಸಿಟ್ಟು ಬರುವ ವರೆಗೆ ಕೂತು ಮಾತಾಡುವುದು, ಸಿಟ್ಟು ಬಂದಿತು ಎಂದು ಅರಿತ ಕೂಡಲೆ ಅಥವಾ ಸಿಟ್ಟು ಬಂದು ಯಾವುದಾದರೂ ಮಾತಿನ

ಮೂಲಕ ಸಿಡಿದು ಹೊರಬಂದ ಕೂಡಲೆ, ಮತ್ತೆ ಮಾತು ಮುಂದರಿಸದೆ ತೆಪ್ಪಗೆ ಎದ್ದು ಹೋಗಿಬಿಡುವುದು—ಕಾವೇರಮ್ಮನ ಮದುವೆಯಾಗಿ ಅಂದಿನ ವರೆಗಿನ ಸದಾಕಾಲದ ವಾಡಿಕೆಯಾಗಿ ಹೋಗಿತ್ತು.

ಪ್ರಕಾಶನು ತನ್ನ ವಾಚನಾಲಯದಲ್ಲಿ ಕೂತು ಅದಾವುದೋ ಮಣ ಮಣಿಸುತ್ತಿದ್ದನು. ಎದುರಿಗೆ ಟಪ್ಪಾಲು ಪೇದೆ ಬಂದು ನಿಂತಿದ್ದುದನ್ನು ಕೂಡ ಕಾಣದ ಅವನ ದೃಷ್ಟಿ ಕೈಯಲ್ಲಿದ್ದ ಪುಸ್ತಕದಲ್ಲೇ ನೆಟ್ಟಿದ್ದಿತು. ಕಡೆಗೆ ಉಪಾಯವಿಲ್ಲದೆ, " ಸ್ವಾಮಿ, ಪತ್ರ " ಎಂದ ಟಪ್ಪಾಲು ಪೇದೆ. ಕಟ್ಟೋಲೆ ಯನ್ನೊಡೆದು ಪತ್ರದಲ್ಲಿ ಬರೆದಿದ್ದ ವಿಷಯಗಳನ್ನು ಮನನ ಮಾಡಿಕೊಂಡನು. ಅದರೊಂದಿಗೆ ಅವನ ಮೊಗವರಳಿದುದು ಕಂಡುಬಂತು. ಆನಂದವನ್ನು ತಡೆಯ ಲಾರದೆ ಅಲ್ಲಿಂದೆದ್ದು, " ಅಮ್ಮಾ ! " ಎಂದು ಕೂಗಿಕೊಂಡು ಒಳಹೊಕ್ಕನು.

" ಅಮ್ಮ ತೋಟಕ್ಕೆ ಎಲೆ ಕೊಯ್ದುಕೊಂಡು ಬರ್ಲಿಕ್ಕೆ ಹೋಗಿದ್ದಾಳೆ. ಕಾಗದ ಬಂದಿದೆಯೇ ಅಣ್ಣಾ, ಎಲ್ಲಿಂದ ? " ತುಳಸಿ ಉತ್ತರವಿತ್ತು ಪ್ರಶ್ನೆಯನ್ನೂ ಕೇಳಿದಳು.

" ನಿನ್ನ ಗಂಡನಿಂದ ! ಹೋಗು, ಹೋಗಿ ಅಮ್ಮನನ್ನು ಕರ್ಕೊಂಡು ಬಾ."

" ಬೇಕಾದರೆ ಹೋಗಿ ಕರ್ಕೊಂಡು ಬಾ....ಮತ್ಯಾಕೆ ನನ್ನನ್ನು ಯಾವಾಗ ನೋಡಿದರೂ ಹುರಿದು ತಿನ್ತಿ !....ನಾನು ಹೋಗುವುದಿಲ್ಲ."

" ಹೋಗಿ ಕರೆದುಕೊಂಡು ಬಾರೆ, ಇಲ್ಲವಾದರೆ ನೂರು ವರ್ಷ ಅಲ್ಲೇ ಕಳೆದಾಳು—ಯಾರ ಹತ್ರಾದರೂ ಪಟ್ಟಾಂಗ ಹೊಡೆಯುತ್ತಾ " ಎಂದು ತಂಗಿ ಯನ್ನು ತಾಯಿಯಿದ್ದಲ್ಲಿಗೆ ಓಡಿಸಿದ ಪ್ರಕಾಶ.

ತುಳಸಿ ತಾಯಿಯಿದ್ದಲ್ಲಿಗೆ ಧಾವಿಸಿದಳು. ಮಗಳನ್ನು ಕೂಡಿಕೊಂಡು ಬರುತ್ತ ಕಾವೇರಮ್ಮ, " ಇಷ್ಟು ಹೊತ್ತು ಮನೆಯಲ್ಲೇ ಕೊಳೆಯುತ್ತಿದ್ದೆ, ಆಗ ಅವನಿಗೆ ಹೇಳ್ಲಿಕ್ಕೆ ಏನೂ ತೋರ್ಲಿಲ್ಲ; ಹೊರಗೆ ಕಾಲಿಡಬೇಕಾದರೆ ಬಂದು ಬಿಡುತ್ತಾಳೆ ತಂಗಿ, ಹಾರಿಕೊಂಡು ಅಮ್ಮನನ್ನು ಕರೀಲಿಕ್ಕೆ—ಅಮ್ಮನಿಗೆ ಜೀವ ಹೋಗೋ ಹಾಂಗೆ ! " ಎಂದು ಬಡಬಡಿಸುತ್ತ ಮನೆ ತಲಪಿದರು.

" ಏನೋ ಅದು, ಪ್ರಕಾಶ, ಕರೆದೆಯೇನೊ ? "

" ಹೌದಮ್ಮ. ನಾಳೆ ತೇಜಪಾಲ ಬರುವನಂತೆ; ಇಗೋ ತಾರು."

" ಅಲ್ಲ ! ಇದೇನಚ್ಚರಿ ! ಅಸ್ಸ್......ಅದೇನು ಕರ್ಮ........ ಅದ್ಯಾವುದನ್ನೋ ಕಲೀಲಿಕ್ಕೆ ಹೋಗಿದ್ದನಲ್ಲ........ಪಾಸೆ ? "

" ಹಾಂ ಹಾಂ ! ಐ.ಸಿ.ಎಸ್. ಪಾಸಾದನಂತೆ."

" ಮತ್ತೇನು ! ನಮ್ಮ ಭಾಗ್ಯ ! "

" ಅದೇಕೆ ನಮ್ಮ ಭಾಗ್ಯ ? "

" ಆಗ ತಿಳಿದೀತು— ನಿನ್ನ ಭಾವನಾಗುವಾಗ !........"

" ಮುಡುಕಬೇಡಮ್ಮ ! ಅದು ಆಕಾಶದ ಹಣ್ಣು ! ನಿನ್ನ ಮಗಳು ಮಂಗಳೂರಿನ ಸೆಕೆಂಡರಿ ಶಾಲೆ ಪಾಸಾದೊಡನೆ ಅತಿ ದೊಡ್ಡ ವಿದ್ಯಾವತಿ ಅಂತ ತಿಳೀಬೇಡ. ಎಂಟನೇ ತರಗತಿಗೂ ಐ.ಸಿ.ಎಸ್.ಗೂ ಅಜಗಜಾಂತರ ! ಆಕಾಶದ ಮಾವಿನ ಹಣ್ಣು ನಿನ್ನ ಕೈಗೆ ಬರಲಾರದು ! "

" ಏಕೆ ?.... ಅಯ್ಯೋ, ಅದೇನು ಕರ್ಮ........ ಅದು ಕಲ್ತರೆ ಕೆಲಸ ಮಾಡದಿದ್ರೂ— ಎಷ್ಟು— ಮುನ್ನೂರೋ ನಾನ್ನೂರೋ ಏನೋ ಕೂತಲ್ಲಿಗೇ ಬರುವದಂತಲ್ಲ."

" ಅದು ಅವನ ದಿನದ ಒಂದು ಹೊತ್ತಿನ ವೆಚ್ಚಕ್ಕೆ ಸಾಲದು, ಗೊತ್ತೆ ? "

" ಏನೋಪ್ಪ ! ಅವನ ತಲೇಲಿ ಏನು ಬರೆದಿದ್ದಾನೋ ಏನೋ ? ಆ ಭಗವಂತನ ಇಚ್ಛೆಯಂತಾಗ್ಲಿ........"

" ಪಾಪ ; ಏನು ಭಕ್ತೆ ! " ಎಂದು ಭಾವಭಂಗಿಯಿಂದ ತೋರಿಸಿದ ಮಗ.

ಪ್ರಕಾಶನಿಗೆ ಅಂದೇನೋ ಒಂದು ತರದ ಹುರುಪು. ದಿನಾಲು ಊಟಕ್ಕೆ ಕುಳಿತಾಗ ಸಾವಿರಾರು ತಪ್ಪು ಅರಸುವವ— ಇಂದು ಮೇಲೋಗರಕ್ಕೆ ಉಪ್ಪು ಕಡಿಮೆಯಾಗಿದ್ದರೂ ಗಪಗಪನೆ ಊಟ ಮಾಡಿ ಎದ್ದುಬಿಟ್ಟ. ಇದರಿಂದ ತಾಯಿ ಮಗಳಿಗೆ ಮನಃಶಾಂತಿ ದೊರಕಿತು. ತಾಯಿತಂದೆಯರನ್ನಾದರೂ ಸಮಾಧಾನ ಪಡಿಸಬಹುದೆಂಬ ಧೈರ್ಯ ತುಳಸಿಗಿತ್ತು; ಆದರೆ ಅಣ್ಣನ ಕಣ್ಣು ಕೆರಳಿತೆಂದರೆ ನೆತ್ತಿಗಣ್ಣಿನ ಅರಿವಾಗುತ್ತಿತ್ತವಳಿಗೆ. ಪ್ರಕಾಶ ಮನೆಯಲ್ಲಿರದಿದ್ದರೆ, ತುಳಸಿಗದು ರಾಯನಿಲ್ಲದ ಕೋಟೆ ; ಅದಕ್ಕವಳೇ ರಾಣಿ. ಅಣ್ಣನ ತಲೆ ದೂರದಲ್ಲಿ ಕಂಡರೆ ಸಾಕು, ತುಳಸಿ ಮನೆಯಲ್ಲಿ ಮಾರ್ಜಾಲಕ್ಕೆ ಸಮಾನ. ತುಳಸಿ ಅಂದು ಅಣ್ಣನ ಇಂಗಿತವನ್ನು ಅರಿತುಕೊಂಡು, ಮಣೆಯ ಮೇಲಿದ್ದ ಗಡಿಯಾರವನ್ನು ಮೇಲಿಂದ ಮೇಲೆ ನೋಡುತ್ತ, ಕುತೂಹಲಪೂರ್ವಕವಾಗಿ ಮಾರ್ಗವನ್ನು ನಿರೀಕ್ಷಿಸು ತ್ತಿದ್ದಳು. ಅದೇಕೋ ಮಾರ್ಗವನ್ನು ನೋಡುತ್ತಿದ್ದವಳು ಒಮ್ಮೆಲೆ ಜಿಗಿದು ಮನೆಯೊಳಗೋಡಿದಳು.

"ಏಕೆ ಹೀಗೆ ಹಾರ್‍ತಿಯೋ ಏನೋ, ನನಗೇನೂ ತಿಳಿಯೋದಿಲ್ಲ" ಎಂದ ಕಾವೇರಮ್ಮನಿಗೆ, "ಅಣ್ಣಾ ಬರ್‍ತಾನಮ್ಮ" ಎಂಬ ತುಳಸಿಯ ವಾಕ್ಯ ಅಡ್ಡಗಟ್ಟಿತು.

ಕಾವೇರಮ್ಮ ಹೊರಗೆ ಬಂದು ನೋಡಿದರು. ನೋಡಿ ಹಿಗ್ಗಿ ಆನಂದ ಭರಿತರಾಗಿ, ಮಗನೊಂದಿಗೆ ಬರುವ ಆಂಗ್ಲ ಪದ್ಧತಿಗನುಸಾರವಾದ ವೇಷಭೂಷಣ ಗಳಿಂದಲಕೃತನಾದ ಸುಂದರ ತರುಣನನ್ನು ಆದರದಿಂದ ಬರಮಾಡಿಕೊಂಡರು.

"**I wonder why your mother has gone very thin!** (ನಿಮ್ಮ ತಾಯಿ ಇಷ್ಟೇಕೆ ಕೃಶಳಾಗಿದ್ದಾಳೆ? ಆಶ್ಚರ್ಯ!)" ಆ ತರುಣನೆಂದ.

"**Day and night she is worrying about her daughter's marriage** (ತಮ್ಮ ಮಗಳ ಮದುವೆ ಚಿಂತೆ—ಹಗಲು ರಾತ್ರಿ)" ಎಂದು ಆ ತರುಣನಿಗೆ ಉತ್ತರವಿತ್ತ ಪ್ರಕಾಶ.

ಆಂಗ್ಲ ಭಾಷೆಯ ಅರಿವಿಲ್ಲದ ಕಾವೇರಮ್ಮನಿಗೆ ಇವರ ಮಾತುಗಳು ಮಂಗಭಾಷೆಯಂತೆ ತೋರಿರಬೇಕು—ಮಾತಿನ ಅರ್ಥವನ್ನರಿಯಲಾರದೆ ನಿರಾಶರಾಗಿ ಒಳಗೆ ಹೋದರು.

ಮಗಳೊಂದಿಗೆ ಸೇರಿ ತಾಯಿ ಸಂಜೆಯ ಫಲಾಹಾರಗಳ ಅಣಿಮಾಡಿದರು. ಉಪಾಹಾರವಾಯಿತು. ಇಬ್ಬರೂ ಕೂಡಿಕೊಂಡು ಗಾಳಿ ಸೇವನೆಗೆಂದು ತಿರುಗಾಡ ಹೊರಟರು.

ಮನೆಯಲ್ಲಿ ರಾತ್ರಿಯ ಊಟಕ್ಕೆ ತಯಾರಾಗುತ್ತಿತ್ತು. ಐದಾರು ಬಗೆಯ ಪದಾರ್ಥ, ಹಪ್ಪಳ, ಸಂಡಿಗೆ, ಮಂಡಿಗೆ, ಪಾಯಸ, ಅದು ಇದು ಎಂದು. ಅಂದು ಪರಮಾನ್ನ ಭೋಜನವನ್ನೇ ಮಾಡಿಟ್ಟು, ಗಂಡಸರನ್ನು ಕಾಯುತ್ತ, ಮಗಳೊಂದಿಗೆ ಹರಟೆ ಹೊಡೆಯುತ್ತ ಕುಳಿತಿದ್ದರು ಕಾವೇರಮ್ಮ.

ಗಂಡನು ಬಂದೊಡನೆ ಕಾವೇರಮ್ಮ "ಹುಡುಗನನ್ನು ಕಾಣುವುದಿಲ್ಲವಲ್ಲ, ಸ್ವಲ್ಪ ಮೇಲೆ ಹೋಗಿ ನೋಡಿ ಬನ್ನಿ" ಎಂದೆನ್ನಲು, "ಬಂದಾನು, ಗಂಟೆ ಎಂಟಾಗಲಿಲ್ಲ........" ಎಂದು ಮಾಧವರಾಯರು ಮೆಲ್ಲನೆ ಆಯಾಸವನ್ನು ಕಡಿಮೆ ಮಾಡಲೆತ್ನಿಸುತ್ತ ಕೂಡ ಹೋದರು. "ಹೋಗಿ ನೋಡೀಂದ್ರೆ, ಮಾಡಿದ್ದೆಲ್ಲ ಆರಿಹೋಗುತ್ತಿದೆ" ಎಂದು ಸ್ವಲ್ಪ ಸಿಡುಕಿನಿಂದ ಹೇಳಿದರು.

ಎಲ್ಲರೂ ಬಂದುದಾಯಿತು. ಊಟವೂ ಆಯಿತು. ಆದರೆ ಯಾರಿಗೂ ಸಮಾಧಾನವಿಲ್ಲ. ಏಕೋ ಎಲ್ಲರ ಮುಖದಲ್ಲೂ ವಿಷಾದದ ಚಿಹ್ನೆ. ಅದಕ್ಕೆ ತೇಜಪಾಲರಾಯನು ಊಟ ಮಾಡಿದುದರಲ್ಲಿ, ಅವನಿಗೆ ಒಂದಿನಿಸೂ ಸಂತುಷ್ಟಿ ಆಗಲಿಲ್ಲವೆಂದು ಕಂಡುಬಂದುದೇ ಕಾರಣವಾಗಿತ್ತು. ಅಲ್ಲದೆ, ಬೆಳಗಾಗಿನಲ್ಲಿ ಆತ ಬ್ರಹ್ಮಾವರಕ್ಕೆ ಹೊರಡುವವನಿದ್ದಾನೆ.

ವಿಲಾಯತಿಯಲ್ಲಿ ಮಾಂಸವನ್ನೆ ತಿಂದು, ಮಾಂಸದ ಸತ್ತ್ವನ್ನೆ ಕಡಿದು ಸದಾ ಮಾಂಸದಲ್ಲಿಯೆ ಹೊರಳಾಡುತ್ತಿದ್ದವನಿಗೆ ಈ ಬ್ರಾಹ್ಮಣಸಂತರ್ಪಣೆ ಅದೆಲ್ಲಿ ಹಿಡಿಸೀತು! ಬಡಿಸಿದ ಅರ್ಧವನ್ನು ಉಣ್ಣುವಾಗಲೆ ಅವನಿಗೆ ಸಾಕು ಸಾಕಾಗಿ ಹೋಯಿತು. ಆದರೂ ಅವನಿಗೆ ಯಾವ ತರದ ಬೇಜಾರೂ ಇರಲಿಲ್ಲ. ಮನೆಯವರಿಗೆ ಮಾತ್ರ ಸ್ವಲ್ಪ ಕರಕರೆ.

೬

ಮಾಣಿಕ್ಯದಂತಹ ಮಗನಾದರೋ ಮನೋರೋಗದಿಂದ ಹೃದ್ರೋಗ ಪೀಡಿತನಾಗಿ ಇಲ್ಲದಂತಾದನು! ಕಿರಿಯವನಾದರೂ ಇದ್ದಾನೆ ಎನ್ನುವ ಧೈರ್ಯವಿದೆಯೆ, ಅವನನ್ನೂ ಕಳೆದುಕೊಂಡಾಗಿದೆ. ಸೊಸೆ—ಅವಳು ಅತ್ತೆಯ ಬಾಧೆಯನ್ನು ತಡೆಯಲಾರದೆ ಮನೆ ಬಿಟ್ಟು ಹೋದಳು. ಸುಬ್ಬರಾಯರು ಒಳ್ಳೆಯ ಮನುಷ್ಯರಾದರೂ ತಮ್ಮ ಪತ್ನಿಯ ದೆಸೆಯಿಂದಾಗಿ ಸಂಭವಿಸಿದ ಅನಾಹುತಗಳಿಂದ ಬೇಯುತ್ತಿದ್ದಾರೆ. ಆದರೆ ಮಾಡುವುದೇನು? ಸದಾಚಾರಿ ದುರಾಚಾರಿಯ ಮಧ್ಯೆ ಇದ್ದ ಪಕ್ಷದಲ್ಲಿ ಅವನೂ ದುರಾಚಾರಿಯೆಂದೇ ಗಣಿಸಲ್ಪಡುವನು. ಆಗ ಅವನು ಪಡುವ ಕಷ್ಟವನ್ನೇ ಇವನೂ ಪಡಬೇಕಾಗುವುದು ಸ್ವಾಭಾವಿಕ. ಅದಕ್ಕಾಗಿ ಯಾರನ್ನು ದೂರುವುದು? ಹಣೆಯಲ್ಲಿ ಬರೆದುದನ್ನು ಅಳಿಸುವುದಾದರೂ ಹೇಗೆ?

ಈಗ ಸುಬ್ಬರಾಯರನ್ನೂ ಜಾನಕೀಬಾಯಿಯನ್ನೂ ದೊಡ್ಡಪ್ಪ ದೊಡ್ಡಮ್ಮ ಎಂದು ಕರೆಯಲು ಅವರಿಗೊಬ್ಬ ಮಗನು ಬಂದು ಸೇರಿದ್ದಾನೆ. ಅವಾವ ರೀತಿಯಲ್ಲಿ ಅವನು ಸಂಬಂಧಿಕನೋ ಯಾರಿಗೂ ಗೊತ್ತಿಲ್ಲ. ಅಂತೂ ಪ್ರಕೃತದಲ್ಲಿ ತೀರ ಸಮೀಪದ ಬಂಧುವಾದ, ಸಂಬಂಧಿಕನಾದ! ಅಷ್ಟೇ ಏಕೆ, ಹೊಟ್ಟೆ ಮಗನಿಗಿಂತಲೂ ಹಿರಿದಾದ! ಒಂದು ರೀತಿಯಲ್ಲಿ ಹೇಳುವುದಾದರೆ ಹಣದ

ಒಂದು ವಿಷಯವನ್ನು ಬಿಟ್ಟರೆ ಮನೆಯ ಆಡಳಿತಗಾರನೂ ಅತನೇ ಆದ. ಇದು ಯಾತಕ್ಕಾಗಿ ಎಂಬುದನ್ನು ಯಾರು ಬಲ್ಲರು? ಹಣಕಾಸು ಆಸ್ತಿ ಸಂಪತ್ತುಗಳಿಂದ ಕೂಡಿದವರಿಗೆ ಸಂಬಂಧಿಕರಿಗೆ ಕಮ್ಮಿಯೆ ಈ ಲೋಕದಲ್ಲಿ? ಅಂಥವರಲ್ಲಿ ಈ ಮಗನೂ ಒಬ್ಬ. ಇವನ ಹೆಸರು ಕೋದಂಡ ರಾಯನೆಂದು. ಆದರೆ ಯಾವ ಕಾರಣದಿಂದಲೋ ಅವನನ್ನು ಎಲ್ಲರೂ ಕೋಚಪ್ಪ ಎಂದೇ ಕರೆಯುತ್ತಿದ್ದರು.

ಕೋಚಪ್ಪ ಐದು ತಿಂಗಳಿರಡಾಗಬೇಕಾದರೆ ಜಾನಕೀಬಾಯಿಯವರನ್ನು ಪರಂಧಾಮಕ್ಕೇರಿಸಿದ! ಜಾನಕೀಬಾಯಿ ಸತ್ತುದರಿಂದ ಸುಬ್ಬರಾಯರಿಗುಂಟಾದ ದುಃಖಕ್ಕಿಂತಲೂ ಹೆಚ್ಚು ಖೇದ ಕೋಚಪ್ಪನಿಗೆ. ಆಗ, "ಅಯ್ಯೋ ದೊಡ್ಡಮ್ಮ, ಇಷ್ಟು ದಿನ ನಿನ್ನನ್ನು ತಾಯಿ ಹಾಗೆ ನೋಡಿಕೊಂಡಿದ್ದು, ಈಗ ನನ್ನನ್ನು ನಿರ್ಗತಿಕನನ್ನಾಗಿ ಮಾಡಿದೆಯಲ್ಲಾ" ಎಂದು ಬೊಬ್ಬಿಟ್ಟು ಅತ್ತ. ಏನು ಮಾಡಿ ಏನು ಪ್ರಯೋಜನ! ವೈಕುಂಠಕ್ಕೆ ತೆರಳಿದ ವೈದೇಹಿಯವರು ಹಿಂತೆರಳುವರೆ?

ಸುಬ್ಬರಾಯರಿಗೆ ಈಗ ತಾನೆ ಬುದ್ಧಿ ಬರುತ್ತಿದೆ! ನಡೆದುದೆಲ್ಲವನ್ನೂ ಕಣ್ಣಾಮುಂದೆ ಚಿತ್ರಿಸಿಕೊಳ್ಳುತ್ತಿದ್ದಾರೆ. ಒಮ್ಮೆ ವಿಜಯ, ಮತ್ತೊಮ್ಮೆ ಸ್ವರ್ಣ, ಇನ್ನೊಮ್ಮೆ ಕಿಶೋರ, ಮಗುದೊಮ್ಮೆ ನಡೆದ ಆಯಾ ಘಟನೆಗಳು, ತಾವು, ತಮ್ಮ ಹೆಂಡತಿ—'ಎಲ್ಲವೂ ಆಗ ಹೇಗಿತ್ತು? ಮನೆ ಹೇಗಿತ್ತು? ಈಗ ಹೇಗಿದೆ? ಮತ್ತೆ ವಿಜಯಾ! ನಿನಗೆ ಮದುವೆಯಾಗಿಯೂ ಪತ್ನಿಯೊಂದಿಗೆ ಸುಖದ ಬಾಳುವೆ ನಡೆಸಲು ಇಲ್ಲದಾಯಿತಲ್ಲಾ! ಯಾರಿಂದ? ನಿನ್ನ ತಾಯಿಯಿಂದ! ಪಾಪ, ಆ ಸಾಧ್ವೀಮಣಿ ನಿನ್ನ ಹೆಂಡತಿ, ಸ್ವರ್ಣಳ ಗತಿ! ನಾಯಿಗಿಂತಲೂ ಹೆಚ್ಚಾಗಿ ದುಡಿದಳು, ಕಷ್ಟಪಟ್ಟಳು! ಮಾವನೆಂದರೆ ಮರಣಕ್ಕೂ ಸಿದ್ಧಳಿದ್ದಳು! ಅಂದಮೇಲೆ ಗಂಡನೆಂದರೆ ಎಷ್ಟಿದ್ದಿರಬಹುದು ಅವಳಲ್ಲಿ! ಪತಿಗಾಗಿ ಅವಳು ಪಟ್ಟ ಕಷ್ಟವೆಷ್ಟು?.... ಜಾನಕೀ! ನೀನು ಅವಳ ಮೇಲೆ ಎಂಥ ಘೋರ ಅಪವಾದವನ್ನು ಹೊರಿಸಿದೆ!........ ಆದರೆ ಕಿಶೋರನೇಕೆ ಮನೆ ಬಿಟ್ಟು ಹೋದ? ಇದಕ್ಕೆ ಯಾವ ಕಾರಣವೂ ಕಂಡುಬರುವುದಿಲ್ಲವಲ್ಲ! ಒಂದು ವೇಳೆ........ಛಿ! ಛಿ! ಅದೆಂದಿಗೂ ಇರಲಾರದು! ಒಂದು ವೇಳೆ ಅವನು ಪ್ರಯತ್ನಿಸಿದರೂ ಅವಳಂಥವಳಲ್ಲ! ಲೋಕವೇನು ಬೇಕಾದರೂ ಅಂದುಕೊಳ್ಳಲಿ

........ಎಲ್ಲಾ ದೈವಚಿತ್ತ ! ನನ್ನ ಅಂತ್ಯಕಾಲದಲ್ಲಿ ಬಾಯಿಗೆ ಗಂಗೋದಕ ಹುಯ್ಯಲೂ........! ' ಹೀಗೆ ಹಲಕೆಲವು ಯೋಚನೆಗಳು ಸುಬ್ಬರಾಯರ ಮನೋಸಾಗರದಲ್ಲಿ ಮೂಡಿ ಮುಳುಗುತ್ತಿದ್ದವು. ಕಡೆಯ ವಾಕ್ಯವನ್ನು ಉಚ್ಚರಿಸಿ ಪೂರ್ಣಗೊಳಿಸಬೇಕಾದರೆ, " ನಾನಿದ್ದೇನೆ ದೊಡ್ಡಪ್ಪ, ನನ್ನನ್ನು ತಮ್ಮ ಮಗನೆಂದೇ ತಿಳಿಯಿರಿ " ಎಂದು ಸುಬ್ಬರಾಯರ ದುಃಖಕ್ಕೆ ಅಣೆಕಟ್ಟು ಕಟ್ಟಿದನು. ಅಲ್ಲದೆ, ಕಣ್ಣಲ್ಲಿ ಸ್ವಲ್ಪ ನೀರನ್ನೂ ತಂದುಕೊಂಡ, ಕೋಚಪ್ಪ ! ಅದೆಂಥ ನೀರೋ ಹೇಳುವುದು ಅಸಾಧ್ಯ !

" ದೊಡ್ಡಪ್ಪ, ನಾನು ಮನೆಗೆ ಹೋಗಿ ಬರ್ಲಾ ? "

" ಏಕೋ ? "

" ಇಲ್ಲಿ ಉಣ್ಲಿಕ್ಕೆ ತಿನ್ಲಿಕ್ಕೆ ಏನೂ ಮಾಡೋದು ಬೇಡ್ವೇ ? ಅದ್ಕೇ.... ಅಮ್ಮನನ್ನೂ ಕರ್ಕೊಂಡು ಬರ್ತೇನೆ, ಶೇಷಮ್ಮನನ್ನು ! "

" ಹೂಂ ! ಏನಾದ್ರೂ ಮಾಡು."

ಕೋಚಪ್ಪ ಹೋಗಿ ತನ್ನ ತಾಯಿಯನ್ನು ಕರೆದುಕೊಂಡು ಬಂದ. ಸುಬ್ಬರಾಯರಿಗೆ ಈಗ ಬಾಯಿಗೆ ರುಚಿಯಾಗಿ ಊಟ, ದಿನಾಲು ಸ್ನಾನ ದೊರಕಲನುವಾಯಿತು. ಮನಸ್ಸಿಗೆ ಸಮಾಧಾನವಿಲ್ಲದಿದ್ದರೂ ಆರೋಗ್ಯದ ಮಟ್ಟಿಗೆ ಏನೂ ಬಾಧೆಯಾಗುವಂತಿರಲಿಲ್ಲ. ಕೋಚಪ್ಪನ ಅಂತರಂಗದಲ್ಲಿ ಈಗೊಂದು ಆಸೆ ಉದ್ಭವಿಸಿತು. ಹುಣಸೂರು ಗ್ರಾಮದಲ್ಲಿ ಹುಡುಗಿಯರಿಗೇನೂ ಕಡಿಮೆಯಿರಲಿಲ್ಲ ; ದಿನವೆಲ್ಲಾ ಅವರ ಮುಖಗಳು ಅವನನ್ನು ದರ್ಶಿಸದೆ ಇರವು. ಗದ್ದೆಗಳಲ್ಲಿ ಕೆಲಸ ಮಾಡುವ ಅಣ್ಣತಮ್ಮಂದಿರಿಗೋ ಅಪ್ಪಂದಿರಿಗೋ ಗ್ರಾಮಗಾನಗಳನ್ನು ಹಾಡುತ್ತಲೂ ನಲಿಯುತ್ತಲೂ ಬುತ್ತಿಯನ್ನು ಕಟ್ಟಿಕೊಂಡು ಹೋಗುವ ತರುಣಿಯರ ದರ್ಶನ ದೊರೆಯುವಾಗಲೆಲ್ಲ ಪುಳಕಿತನಾಗುವ ಕೋಚಪ್ಪ ತನ್ನ ಭವಿಷ್ಯವನ್ನು ಮುಂದೆ ತಂದುಕೊಂಡು, ನಾನಾವಿಧವಾಗಿ ಎಣಿಸಿಕೊಂಡು ಆನಂದಿಸುವ ! ಈ ಆನಂದ ಸದಾ ಕನಸಾಗಿಯೇ ಉಳಿದು ಬಿಡುವುದೋ ಎಂಬ ಭಯ ಮಾತ್ರ ಅವನನ್ನು ಬಾಧಿಸದಿರುತ್ತಿರಲಿಲ್ಲ.

ನಿಜಪುತ್ರನ ಅಂತರಂಗದ ಅಭಿಲಾಷೆಯನ್ನು ಅರಿತ ಶೇಷಮ್ಮನು ಸುಬ್ಬರಾಯರಿಗೆ ಮಾಯದ ಬಲೆಯನ್ನು ಬೀಸಿಯೇ ಇದ್ದಳು. ಆದರೆ ಯಾವಾಗಲೂ ಕಿರಿಯ ಮಗ ಕಿಶೋರನ ವ್ಯಸನದಲ್ಲಿ ಬೇಯುತ್ತಿದ್ದ ಸುಬ್ಬರಾಯರು

ಶೇಷಮ್ಮನ ಬಲೆಯಲ್ಲಿ ಬೀಳುವುದು ಅಸಾಧ್ಯವಾಗಿ ಕಂಡುಬರಲು, ಇನ್ನು ಮಗನನ್ನೇ ತನ್ನ ವಿವಾಹದ ವಿಷಯದಲ್ಲಿ ಸುಬ್ಬರಾಯರ ಮುಂದೆ ಉಚ್ಚರಿಸುವಂತೆ ಮಾಡುವುದೇ ಹಿತವೆಂದು ಭಾವಿಸಿ, ಕಾಲನಿರೀಕ್ಷಣೆ ಮಾಡುತ್ತಿದ್ದಳು.

ಕೋಚಪ್ಪನು ಪಲ್ಯದ ಗಿಡಗಳಿಗೆ ನೀರು ಹಾಕಿ ಉಸ್ಸೆಂದು ಬಂದು ಒಂದಿಷ್ಟು ಕುಳಿತುಕೊಳ್ಳುವ ಎಂದು ಹಿಂಬಾಗಿಲಿನಿಂದ ಪ್ರವೇಶಿಸಲು, ಶೇಷಮ್ಮನು ಸಿಟ್ಟುಸಿರು ಬಿಡುತ್ತಾ ಕಣ್ಣೊರಸಿಕೊಳ್ಳುವುದನ್ನು ಲಕ್ಷ್ಯಿಸಿದನು. ಅಲ್ಲದೆ ತನ್ನಲ್ಲಿ ಏನೇನೋ ಅಂದುಕೊಳ್ಳುತ್ತಿರುವುದನ್ನೂ ಗಮನಿಸಿ, ಅದಕ್ಕೆ ಕಿವಿಗೊಡುತ್ತಾ ಒಂದೆಡೆ ಮರೆಯಾಗಿ ನಿಂತು ಕೇಳಿದನು. ಪಕ್ಕದ ಕೋಣೆಯಲ್ಲಿ ಸುಬ್ಬರಾಯರು ಎಚ್ಚರಿಕೆಯಲ್ಲಿದ್ದು ರಾಮಾಯಣದ ಯಾವುದೋ ಒಂದು ಭಾಗವನ್ನು ಓದುತ್ತ ಕಣ್ಣೀರಿಡುತ್ತಿದ್ದರು.

ಸುಬ್ಬರಾಯರು ಗ್ರಂಥ ಮುಚ್ಚಿ ಒಳಗಿನ ಮಾತಿಗೆ ಕಿವಿಗೊಡಲಾರಂಭಿಸಿದರು.

"ಎಲ್ಲಾ ಅಪ್ಪೆ!....ಯಾರಿದ್ದೇನು? ಅವರವರಿಗೆ ಆಯಾಯ ಜನವಿರಬೇಕು! ಹುಡುಗನಿಗೆ ಪಾಪ ವರ್ಷ ಇಪ್ಪತ್ತ್ಯೈದಾಯಿತು, ಒಂದು ಮದ್ವೆ ಮಾಡ್ಸಿ ಕಣ್ಣಾರೆ ನೋಡೋಣಾಂದ್ರೆ....ಹೂಂ! ನನಗೆಲ್ಲಿಂದ ಬರ್ಬೇಕು ಆ ಭಾಗ್ಯ! ಆ ಒಂದು ಜೀವ ಇರುತ್ತಿದ್ದರೆ ಈ ವರೆಗೆ ಸುಮ್ಮಗಿರುತ್ತಿದ್ರೆ? ಎಲ್ಲಿಗಾದ್ರು ಹೋಗಿ, ಯಾರ ಕೈಕಾಲಾದ್ರೂ ಹಿಡಿದು, ಆ ಹುಡುಗನಿಗೊಂದು ಕಾರ್ಯ ಮಾಡದಿರುತ್ತಿದ್ರೆ! ಪಾಪ, ಹುಡುಗ ತನ್ನ ಆಸೆಯನ್ನು ಹೊರಗೆ ಹೇಳದೆ ಒಳಗೊಳಗೇ ಚಿಂತಿಸಿ ದಿನ ಹೋದ ಹಾಗೆ ಬತ್ತಿಕೊಂಡೇ ಬರ್ತಾನೆ! ನೋಡೋರ್‍ಯಾರು, ಕೇಳೋರ್‍ಯಾರು? ನನಗೂ ಆ ದೇವರಿಗೂ ಗೊತ್ತು ಅವ್ನಿಗಾಗಿ ನಾ ಪಡೋ ಕಷ್ಟ, ಪಡೋ ಪಾಡು! ಹೆಂಗಾದ್ರೂ ಆ ಹುಡ್ಗನಿಗೊಂದು ಕಾರ್ಯ ಆಗ್ಬೋದ್ರೆ, ತೃಪ್ತೀಂದ ಪ್ರಾಣಾ ಬಿಡೋಣ ಅಂದ್ರೆ ದೇವರು...." ಎಂದು ಮುಂತಾಗಿ ಮಣಮಣಿಸುತ್ತ ಮಧ್ಯೆ ಮಧ್ಯೆ ಸೀನುತ್ತ ಒಲೆಯುರಿಸುತ್ತಿದ್ದ ಶೇಷಮ್ಮನು ಮೇಲೋಗರವನ್ನು ಕೆಳಗಿಳಿಸಿ, ಒಲೆಯಲ್ಲಿ ಒಗ್ಗರಣೆಗೆಂದು ಕಾವಲಿಯಿಟ್ಟು ಸಾಸಿವೆಗೆಂದು ಕಪಾಟಿನ ಪಕ್ಕಕ್ಕೆ ಸರಿದಾಗ ಕೋಚಪ್ಪನು ತೋಳ ಮೇಲಿನ ವಸ್ತ್ರವನ್ನು ತಲೆಗೆ ಕಟ್ಟಿಕೊಳ್ಳುತ್ತ ಆಗ ತಾನೆ ಬಂದವನಂತೆ ಮೂಲೆಯಲ್ಲಿದ್ದ ಬಾಳೆಯೆಲೆಯನ್ನು ಊಟಕ್ಕೆ ಸಿದ್ಧಪಡಿಸುತ್ತಿದ್ದನು.

ಶೇಷಮ್ಮನ ದುಃಖೋಕ್ತಿಗಳನ್ನು ಕೇಳಿದ ಸುಬ್ಬರಾಯರು ಒಂದು ನಿಟ್ಟುಸಿರು ಬಿಟ್ಟರು. ಆಗಲೆ ಕೋಚಪ್ಪನ ಕರೆ ಬರಲು ರಾಯರು ಊಟಕ್ಕೆದ್ದರು. ಮೆಲ್ಲನೆ ಎದ್ದು ಅಡಿಗೆ ಕೋಣೆಯಿಂದ ಕೈಕಾಲು ತೊಳೆದುಕೊಳ್ಳಲು ಬಚ್ಚಲಿಗೆ ಹೋಗುತ್ತಿದ್ದ ಸುಬ್ಬರಾಯರನ್ನು ಕಂಡ ಶೇಷಮ್ಮನು ಒಮ್ಮೆ ಗಟ್ಟಿಯಾಗಿ ಸೀನಿದಳು! ಸುಬ್ಬರಾಯರಿಗೆ ಎಲ್ಲವೂ ಕೇಳಿಸಬೇಕೆಂದೇ ಶೇಷಮ್ಮ ಈ ಮೊದಲು ಆ ಮಾತುಗಳನ್ನು ಮಾತಾಡಿದ್ದು. ಆದರೂ ಅವರಿಗೆ ಕೇಳಿಸಿತೋ ಇಲ್ಲವೋ ಎಂಬ ಸಂದೇಹದಿಂದ ಗಟ್ಟಿಯಾಗಿ ಸೀನಿದ್ದು. ಆದರೆ ಸುಬ್ಬರಾಯರು ಅದನ್ನು ಗಮನಿಸದವರ ಹಾಗೆ ಹೋಗಿ ಬಿಟ್ಟರು.

* * * *

ಏನಾದರಾಗಲಿ, ಎಂದು ಸುಬ್ಬರಾಯರು ಅದೇ ತಿಂಗಳಲ್ಲಿ ಕೋಚಪ್ಪನಿಗೆ ಅದೇ ಗ್ರಾಮದೊಳಗಿನ ಸಾಧಾರಣ ರೂಪದ ಒಂದು ಹುಡುಗಿಯನ್ನು ನೋಡಿ ಹಣ ವೆಚ್ಚ ಮಾಡಿ ಮದುವೆ ಮಾಡಿಸಿದರು.

ಹುಡುಗಿಯನ್ನು ಧಾರೆಯೆರೆದು ಕೊಡುವಾಗ ಅದನ್ನು ಸ್ವೀಕರಿಸಲು ಕೋಚಪ್ಪನಿಗೊಬ್ಬ ಚಿಕ್ಕಪ್ಪ ಎಲ್ಲಿಂದಲೋ ಸಿದ್ಧನಾದ, ಆ ವೇಳೆಯಲ್ಲಿ. ಉಡಲು ಸರಿಯಾದ ಒಂದು ಬಟ್ಟೆಯೂ ಇಲ್ಲದ ಆ ಚಿಕ್ಕಪ್ಪನಿಗೆ ಸುಬ್ಬರಾಯರು ಬಟ್ಟೆಯನ್ನೂ ಒದಗಿಸಿದರು. ಅವನ ಹೆಂಡತಿಗೂ ಒಂದು ಸೀರೆ ಕೊಳ್ಳುವುದಕ್ಕೆ ಹಣವಿತ್ತರು.

ಮದುವೆಯಂತೂ ಸಾಂಗವಾಗಿ ಮುಗಿಯಿತು. ಬಂದ ಅತಿಥಿಗಳೆಲ್ಲರೂ ಹೋದುದಾಯಿತು. ಆದರೆ ಅಕಾಸ್ಮಾತ್ತಾಗಿ ಕಾರ್ಯಕ್ಕೊದಗಿದ ಕೋಚಪ್ಪನ ಚಿಕ್ಕಪ್ಪನು 'ರೈಲು ಹುಳ'ವಂತೆ ಮನೆ ಬಿಟ್ಟು ಕದಲದೆ, ಸುಬ್ಬರಾಯರ ಮನೆಯಲ್ಲಿಯೇ ಸುಳಿದುಕೊಂಡಿದ್ದನು. ಬಾಯಿಬಿಟ್ಟು ಹೋಗೆನ್ನಲಾರದೆ ಎಲ್ಲರೂ ಸುಮ್ಮನಿದ್ದರು; ಅವರೂ ಸುಮ್ಮನಿದ್ದರು. ಸುಬ್ಬರಾಯರ ಜೀವನ, ಬೆಕ್ಕು ಸಾಕಿದ ಸನ್ಯಾಸಿಯಂತಾಯಿತು!

'ತಂದೆಯಿಲ್ಲದ ಮಗನನ್ನು ಸಾಕಿದವನೇ ತಂದೆ' ಎಂಬಂತೆ ಸುಬ್ಬರಾಯರನ್ನು ಕೋಚಪ್ಪನು ದೊಡ್ಡಪ್ಪ ಎಂದು ಕರೆಯುವುದು ಹೋಗಿ ಈಗ 'ದೊಡ್ಡ' ಎಂಬುದು ಮಾಯವಾಗಿ ಬರಿ 'ಅಪ್ಪ' ಎಂಬುದು ಮಾತ್ರವೇ ಉಳಿಯಿತು.

ಈಗಸ್ಟೇ ಕೋಚಪ್ಪನು ತನ್ನ ಬಾಲವನ್ನು ಕೋಡಗನಂತೆ ಹೊರ ಬಿಡುತ್ತಿದ್ದಾನೆ. ಅವನ ಭಾವೀ ಚಿಕ್ಕಪ್ಪನು ಅದನ್ನು ಹಿಡಿದೆಳೆದು ಅದಕ್ಕೆ ದೃಢಾಕಾರವನ್ನು ಕೊಡುತ್ತಿದ್ದಾನೆ. ಕೋಚಪ್ಪನಿಗೆ ನಿಜನಾಗಿಯೂ ಮಂಗ ನಂತೆ ಬಾಲವಿತ್ತೇ! ಎಂದು ಯಾರೂ ಆಶ್ಚರ್ಯಪಡಬೇಕಾಗಿಲ್ಲ. ಆ ಬಾಲ ವೆಂಬುದು, ಸುಬ್ಬರಾಯರ ಆಸ್ತಿಯೆಲ್ಲವೂ ಅವರ ಅನಂತರ ವಾರಸುದಾರ ರಿಲ್ಲದೆ ಸಿಕ್ಕಾಬಟ್ಟೆಯಾಗಿ ಹೋಗುವುದಲ್ಲ, ಆದುದರಿಂದ ಅದನ್ನು ತನ್ನ ಹೆಸರಿ ನಲ್ಲಿ ಮಾಡಿಸುವಂತೆ ಅವರ ಮುಂದೆ ಪ್ರಸ್ತಾಪಿಸಬೇಕು ಎಂಬ ಕೋಚಪ್ಪನ ಸಂಚು. ಈ ಸಂಚು ನಡೆಯುವುದೋ ಇಲ್ಲವೋ ಎಂಬುದರ ಕಡೆಗೆ ಅವನ ಗಮನವಿರಲಿಲ್ಲ. ಕಾರಣ ಅದನ್ನು ಸಾಧಿಸಲಿಕ್ಕೆ ತಾನು ಟೊಂಕ ಕಟ್ಟಿರುವು ದಾಗಿ ಕೋಚಪ್ಪನಿಗೆ ಅವನ ಚಿಕ್ಕಪ್ಪನ ಭಾಷೆಯಿತ್ತು! ದಿನ ಹೋದಂತೆ ಕೋಚಪ್ಪನ ಕೋಪತಾಪಗಳು ಅಧಿಕರಿಸಲಾರಂಭಿಸಿದವು. ಶೇಷಮ್ಮನ ಕೋಪತಾಪಗಳು ಅಷ್ಟೊಂದು ವಿಶೇಷವಾಗಿಲ್ಲದಿದ್ದರೂ ಅವಳ ಕೊಂಕು ಮಾತುಗಳು ಸುಬ್ಬರಾಯರನ್ನು ಸಿಟ್ಟಿಗೆಬ್ಬಿಸುತ್ತಿದ್ದವು. ಆದರೂ ಅವರಲ್ಲಿ ಸಹನ ಶಕ್ತಿಯು ಬಲವಿದ್ದುದರಿಂದ ಅವರು ಅದಾವ ತರಹದ ಮಾತಿಗೂ ಸಿಟ್ಟಿನ್ನುತ್ತಿರಲಿಲ್ಲ. 'ಆದರೆ ಹೋಗಲಿ, ಪಾಪ! ಬದುಕಿಕೊಳ್ಳಲಿ ಎಂದು ಮನೆ ಯಲ್ಲಿ ಸ್ಥಾನ ಕೊಟ್ಟು ಇಷ್ಟೆಲ್ಲಾ ಉಪಕಾರ ಮಾಡಿದ್ದರಿಂದಲೇ ಅಲ್ಲವೇ ಇದೆಲ್ಲಾ!........ಯಾರನ್ನು ಹೇಳಿ ಏನು ಪ್ರಯೋಜನ?........ಎಲ್ಲಾ ನನ್ನ ಪ್ರಾಲಬ್ಧ!....ಮತ್ತೇನು ಹೇಳುವುದು?....ಮನುಷ್ಯನಿಗೆ ಅನ್ನ ಹಾಕುವುದ ಕ್ಕಿಂತ ನಾಯಿಗೆ ತಿಳಿನೀರು ಹಾಕಿದರೆ ಎಷ್ಟೋ ಉತ್ತಮ! ಎಲ್ಲಾದರೂ ನಮ್ಮನ್ನು ನೋಡಿದರೆ ಪ್ರೀತಿಯಿಂದ ಬಾಲ ಅಲ್ಲಾಡಿಸಿಕೊಂಡು ನಮ್ಮ ಹತ್ತಿರಕ್ಕೆ ಓಡಿ ಬರುತ್ತದೆ!....' ಎಂದು ಮುಂತಾಗಿ ತಮ್ಮೊಳಗೇ ಮೆಲುಕು ಹಾಕದಿರಲಿಲ್ಲ.

ಆ ದಿನ ಸುಬ್ಬರಾಯರಿಗೆ ಕಾಲುನೋವು ಹೆಚ್ಚಿ ಹಾಸಿಗೆಯಲ್ಲಿ ಮಲಗಿ ನರಳುತ್ತಿದ್ದರು. ಇಂದು—ಅಂದು ಕೋಚಪ್ಪ ಸುಬ್ಬರಾಯರ ವಿಷಯದಲ್ಲಿ ವಹಿಸಿದ ದಕ್ಷತೆ ಎಲ್ಲೋ ಮಾಯವಾಗಿ ಹೋಗಿದೆ. ಅವನ ಸುಳಿವೇ ಇರಲಿಲ್ಲ, ಸುಬ್ಬರಾಯರ ಮನೆಯ ಕಡೆ. ಉಳಿದವರು ಅಷ್ಟಕ್ಕಷ್ಟೆ! ಕೋಚಪ್ಪ ತನ್ನ ಹೆಂಡತಿಯನ್ನು ಮಾವನ ಮನೆಗೆ ಕಳುಹಿಸಿಕೊಟ್ಟಿದ್ದ. ಕೋಚಪ್ಪನ ಚಿಕ್ಕ

ಪ್ಪನು—ಶೇಷಮ್ಮ ತನ್ನ ಮನೆಯ ಕೆಲಸಗಳನ್ನೆಲ್ಲಾ ತನ್ನ ಹೆಂಡತಿಯಿಂದಲೆ ಸಾಧಿಸಿಕೊಳ್ಳುತ್ತಿದ್ದಾಳೆ, ತಾನು ದೊಡ್ಡ ಯಜಮಾನಿಯ ಹಾಗೆ ಕುಳಿತುಕೊಂಡು, ಎಂದು ತಿಳಿದು ಬರಲು, ಸಮಿಾಪದಲ್ಲೇ ಒಂದು ಚಿಕ್ಕ ಕೋಣೆ ಮಾಡಿಕೊಂಡನು. ಅಕ್ಕಿ ಬೇಳೆ, ಉಪ್ಪು ಹುಳಿ ಸಾಮಾನುಗಳನ್ನೆಲ್ಲ ತನ್ನ ಹೆಂಡತಿಗೆ ಹೇಳಿ ಅವಳ ಕೈಯಿಂದಲೇ ಸುಬ್ಬರಾಯರ ಮನೆಯಿಂದಲೇ ಕಂಡು ಕಾಣದೆ ಹೆಚ್ಚು-ಕಮ್ಮಿ ಕದ್ದು, ದಾಸ್ತಾನು ಮಾಡಿಕೊಂಡಿದ್ದ, ಆ ಪುಣ್ಯಾತ್ಮ! ಶೇಷಮ್ಮ ಅದನ್ನೆಲ್ಲಾ ನೋಡಿದರೂ ಏನೂ ಮಾತಾಡಲಿಲ್ಲ. 'ಹೋದರೆ ಹೋಗಲಿ, ಪಾಪ!' ಎಂದುಕೊಂಡು ಸುಮ್ಮನಿದ್ದುಬಿಟ್ಟಳು. ಎಂಥ ಉದಾರ ಬುದ್ಧಿಯವಳಾಕೆ! ಹೋದರೆ ಯಾರದು ಹೋಯಿತು? ಇಂಥ ಉದಾರ ಬುದ್ಧಿಯ ಹೆಂಗಸರು ನಮ್ಮ ಸಮಾಜದಲ್ಲಿ ಬೇಕಾದಷ್ಟು ಇದ್ದಾರೆ. ಮಾತ್ರ—ಸೂಕ್ಷ್ಮವಾಗಿ ನೋಡಬೇಕು.

ಇಡೀ ರಾತ್ರಿ ನರಳುತ್ತ ಬಿದ್ದು ಗೋಳಿಡುತ್ತಿದ್ದ ಸುಬ್ಬರಾಯರನ್ನು ಏನೆಂದು ಕೇಳದೆ ವಿಚಾರಿಸದೆ ನಿದ್ದೆಬಂದವನಂತೆ ಮಲಗಿದ್ದು ಬೆಳಗಾಗುವುದರೊಳಗೆ ಎದ್ದು ಎಲ್ಲಿಗೋ ಹೊರಟು ಹೋಗಿಬಿಟ್ಟ ಕೋಚಪ್ಪ. ಶೇಷಮ್ಮ ಕೃತ್ರಿಮ ಹೊಟ್ಟೆನೋವಿನಿಂದ ಸಂಕಟಪಡುತ್ತಿದ್ದ ಕಾರಣ ಬೆಳಿಗ್ಗೆ ಬೇಕಾದ ಉಪಾಹಾರದ ವ್ಯವಹಾರವೇನೂ ಸಜ್ಜಾಗುವಂತಿರಲಿಲ್ಲ.

ಟಪ್ಪಾಲು ಪೇದೆ ಹೊರಗಿನಿಂದ ಕರೆದ ದನಿ ಕೇಳಲು ಶೇಷಮ್ಮನ ಹೊಟ್ಟೆನೋವು ಎಲ್ಲಿ ಮಾಯವಾಯಿತೋ ಏನೋ ಕಾಗದ ತೆಗೆದುಕೊಳ್ಳಲು ತ್ವರೆ ಮಾಡಿದಳು. ಆದರೆ ಶೇಷಮ್ಮನ ದೈವದೋಷವೆಂದೇ ಹೇಳಬೇಕು, ಸುಬ್ಬರಾಯರು ಟಪ್ಪಾಲು ಪೇದೆಯನ್ನು ತಮ್ಮ ಸಮಿಾಪದಲ್ಲಿ ಕರೆದು ಕುಳ್ಳಿರಿಸಿಕೊಂಡು ಏನೋ ಮಾತಾಡುತ್ತಿದ್ದರು. ಶೇಷಮ್ಮನಿಗೆ ಅದನ್ನು ತಿಳಿದುಕೊಳ್ಳಲು ಆವಳ ಕಿವಿ ಚೀರ ಮಂದವಾಗಿದ್ದುದೂ ಮತ್ತು ಕೋಚಪ್ಪನು ಆ ಸಮಯದಲ್ಲಿ ಅಲ್ಲಿ ಇಲ್ಲದೆ ಇದ್ದುದೂ ಸುಬ್ಬರಾಯರಿಗೆ ದೈವಸಹಾಯ ತುಂಬಾ ಆಯಿತು.

ಸುಬ್ಬರಾಯರು ಟಪ್ಪಾಲು ಪೇದೆಯ ಕೈಯಲ್ಲಿ ಎರಡು ರೂಪಾಯಿಗಳನ್ನು ಕೊಟ್ಟುದು ಶೇಷಮ್ಮನ ಕಣ್ಣಿಗೆ ಬಿಂಕಿಯಂತೆ ಅರಳಿತು. ಕೋಚಪ್ಪ ಬರುವುದೇ ತಡ ತಾಯಿ ಇದನ್ನು ಅವನ ಕಿವಿಗೆ ಹಾಕಿಬಿಟ್ಟಳು. ಆ ದಿನ ಕಳೆದು ಬೆಳಗಾಗಬೇಕಾದರೆ ಕೋಚಪ್ಪನ ಹೆಂಡತಿ, ಚಿಕ್ಕಮ್ಮ, ಚಿಕ್ಕಪ್ಪ

ಅವನ ಇಡೀ ಸೈನ್ಯವೇ ಸುಬ್ಬರಾಯರ ಮನೆಯಲ್ಲಿ ತಿರುಗಿ ತುಂಬಿದವು. ಅದೇ ಹೊತ್ತಿಗೆ ಸರಿಯಾಗಿ ಮಾಧವರಾಯರು ಮಂಗಳೂರಿನಿಂದ ಪತ್ನೀ ಸಮೇತರಾಗಿ ಬಂದಿಳಿದರು. ಬತ್ತಿ ಎಲುಬು ತೊಗಲಾಗಿದ್ದ ಸುಬ್ಬರಾಯರನ್ನು ನೋಡಿ ಕಣ್ಣೀರಿಟ್ಟರು.

ಕಾವೇರಮ್ಮನ ಕೈಕಾಲು ತೊಳೆಯಲು ಬಚ್ಚಲಿಗೆಂದು ಬರುವಾಗ ಅಡಿಗೆ ಕೋಣೆಯಲ್ಲಿ ಕೆಲವು ನಿಂತೂ ಕೆಲವು ಕೂತೂ ಇದ್ದ ಕೋಚಪ್ಪನ ಸೈನ್ಯವನ್ನು ನೋಡಿ ಬೆರಗಾದರು. ಮೋರೆ ತೊಳೆದು ಬಂದು ಕುಳಿತ ಕಾವೇರಮ್ಮ ಮಾಧವರಾಯರಿಗೂ ಸುಬ್ಬರಾಯರಿಂದ ವಿಷಯವೆಲ್ಲ ಸಂಪೂರ್ಣವಾಗಿ ಚಾಚೂ ತಪ್ಪದೆ ತಿಳಿಯಿತು. ಕೋಚಪ್ಪ ಹೊರಗೆ ಜಗಲಿಯಲ್ಲಿ ನಿಂತು ಕೊಂಡು ಉಗುರು ಕಚ್ಚುತ್ತಾ ಏನೋ ಬಹಳ ಆಲೋಚನೆಯಲ್ಲಿದ್ದ. ಪ್ರಾಯಶಃ 'ಸೋತೆವಲ್ಲ! ಇನ್ನು ಸ್ವಲ್ಪಕಾಲ ಬಾಲ ಮುದುಡಿಸಿಕೊಂಡು ತೆಪ್ಪಗೆ ಕೂಡಬಹುದಿತ್ತು! ಹಾರಿದ್ದು ಮೋಸವಾಯಿತು!' ಎಂದು ಯೋಚಿಸುತ್ತಿದ್ದಿರಬೇಕು.

ಅದೇ ವಕೀಲರನ್ನು ಕರೆತಂದು ಸುಬ್ಬರಾಯರ ಆಸ್ತಿಯ ಬಾಬತು ಉಯಿಲು ಬರೆಸಿದರು. ಅಂತೂ ಕೋಚಪ್ಪನೇ ಮೊದಲಾದ ಸೈನ್ಯವೆಲ್ಲವನ್ನೂ ಮನೆಯಿಂದ ಹೊರದಬ್ಬಿದ್ದೂ ಆಯಿತು.

ಅಂದೇ ಬ್ರಹ್ಮಾವರದ 'ರಮಾನಂದ ಆರೋಗ್ಯಾಶ್ರಮ'ದ ಧನಿಗಳೂ ಮುಖ್ಯಾಧಿಪತಿಗಳೂ ಆದ ಮಧುರಾನಾಥರಾಯರ ಆಗಮನ. ಸುಬ್ಬರಾಯರ ಮನೆಯಲ್ಲಿ ಸಂಭ್ರಮದ ಊಟ ಸಜ್ಜಾಗುತ್ತಿತ್ತು.

* * * *

'ಈ ನನ್ನ ಹುಣಸೂರು ಗ್ರಾಮದ ಆಸ್ತಿಗೆ ವಾರಸುದಾರರು ಇಬ್ಬರು. ಅವರ ಹೆಸರು ಸ್ವರ್ಣ (ನನ್ನ ಸೊಸೆ, ಹಿರಿಯ ಮಗನ ಹೆಂಡತಿ) ಮತ್ತು ಕಿಶೋರ (ನನ್ನ ಕಿರಿಯ ಮಗ). ಇವರಿಬ್ಬರೂ ಕಾಣೆಯಾಗಿರುವ ಕಾರಣ, ಈ ನನ್ನ ಆಸ್ತಿಯನ್ನು ಬ್ರಹ್ಮಾವರದ 'ರಮಾನಂದ ಆರೋಗ್ಯಾಶ್ರಮ'ದ ಧನಿಗಳಾದ ಶ್ರೀಮಾನ್ ಮಧುರಾನಾಥರಾಯರ ವಶದಲ್ಲಿ ಒಪ್ಪಿಸುತ್ತೇನೆ. ಅವರೇ ಇವರ ಪೂರ್ಣ ಜವಾಬ್ದಾರಿಕೆಯನ್ನು ವಹಿಸುವರೆಂದು ಸಂಪೂರ್ಣ ಭರವಸೆಯಿದೆ. ಮೇಲ್ಕಾಣಿಸಿದ ವಾರಸುದಾರರು ಬಂದು ಕೇಳುವ ಕಾಲದಲ್ಲಿ

ಆಸ್ತಿಯನ್ನು ಒಪ್ಪಿಸತಕ್ಕದ್ದು. ಇಲ್ಲವಾದಲ್ಲಿ ಆಸ್ತಿಯೆಲ್ಲವೂ 'ರಮಾನಂದ ಆರೋಗ್ಯಾಶ್ರಮ'ಕ್ಕೇ ಸಲ್ಲುವುದು....' ಎಂದು ಸುಬ್ಬರಾಯರೂ ಮಾಧವ ರಾಯರೂ ಪ್ರತ್ಯಕ್ಷವಿದ್ದು ವಕೀಲರಿಂದ ಬರೆಯಿಸಿದರು.

ಮಥುರಾನಾಥರಾಯರು ಬಂದು ಊಟೋಪಚಾರಗಳಾಗಿ ತಾಂಬೂಲ ಹಾಕಿಕೊಳ್ಳುತ್ತಿರುವಾಗ, ಮಾಧವರಾಯರು ಸುಬ್ಬರಾಯರ ಆಸ್ತಿಯ ವಿಷಯ ದಲ್ಲಿ ಮಾತೆತ್ತಿ, ಅವರಿಂದ ಉಯಿಲನ್ನು ಇಸುಕೊಂಡು ಮಥುರಾನಾಥರಿಗೆ ತೋರಿಸಿದರು. ಅವರು ಓದಿ ನೋಡಿ ಸುಬ್ಬರಾಯರಿಗೂ ಮಾಧವರಾಯರಿಗೂ ಶಹಭಾಸ್‌ಗಿರಿಯನ್ನಿತ್ತು ಕೊಂಡಾಡಿದರು. ಸುಬ್ಬರಾಯರ ಆಸ್ತಿಯ ಸಂಪೂರ್ಣ ಜವಾಬ್ದಾರಿಕೆಯನ್ನು ವಹಿಸುವುದಾಗಿ ವಚನವಿತ್ತು ಮಥುರಾನಾಥರಾಯರು ತಮ್ಮೂರಿಗೆ ತೆರಳಿದರು. ಬೀಗದ ಕೈಯನ್ನು ಮಥುನಾಥರ ವಶಪಡಿಸಿದ ತರು ವಾಯ ಸುಬ್ಬರಾಯರಿಗೆ ನೆಮ್ಮದಿ ದೊರೆಯಿತು. ಮನೆಯ ಚೆಂಬು ಹಿತ್ತಾಳೆಯ ಪಾತ್ರೆಗಳೆಲ್ಲವನ್ನೂ ಕೋಚಪ್ಪನ ಸೈನ್ಯದವರು ತಮತಮಗೆ ಸಿಕ್ಕಿದ್ದನ್ನು ಕೊಚ್ಚಿ ಕೊಂಡು ಹೋಗಿದ್ದರು. ಆದರೂ ಸುಬ್ಬರಾಯರಿಗೆ 'ಸಾಮಾನು ಹೋದರೂ ಚಿಂತೆಯಿಲ್ಲ, ಅದರೊಂದಿಗೆ ನನ್ನ ಶನಿಗಳೂ ಬಿಟ್ಟುಹೋದವಲ್ಲಾ, ಅದೇ ಸಾಕು!' ಎಂಬೊಂದು ಮಹಾನಂದ.

ಮಾಧವರಾಯರು ಮನೆಯ ಎಲ್ಲ ಸಾಮಾನುಗಳನ್ನೂ ತೆಗೆದು ಕೊಂಡು ಪತ್ನೀಸಮೇತರಾಗಿ, ಸುಬ್ಬರಾಯರೊಂದಿಗೆ ಮಂಗಳೂರಿಗೆ ಬಂದು ಸೇರಿದರು.

ಈಗಷ್ಟೇ ಮಾಧವರಾಯರಿಗೆ ಮನೆಯ ಮುಂದೆ ತಿರುಕಳಂತೆ ಬಂದು ನಿಂತ ಮಗಳ ಮೂರ್ತಿಯು ಚಿತ್ರಪಟದಂತೆ ಮನೋ ನಯನಗಳ ಮುಂದೆ ಸುಳಿದಾಡುವುದನ್ನು ಮನಸ್ಸಿಗೆ ತಂದುಕೊಂಡಾಗ ದುಃಖವಾಗುತ್ತಿದೆ! ಮಗಳನ್ನು ಅರಸಬೇಕೆಂಬ ಯೋಚನೆಯು ಮಾಧವರಾಯರ ಮನಸ್ಸನ್ನು ಕೊರೆಯುತ್ತಿದ್ದಿತು. 'ಆದರೆ ಎಲ್ಲಿ ಹುಡುಕುವುದು? ಸತ್ತಳೊ, ಬದುಕಿದ್ದಾಳೊ! ಬದುಕಿದ್ದರೆ ಎಲ್ಲಿದ್ದಾಳೊ ಯಾರು ಬಲ್ಲರು? ಅಯ್ಯೋ! ಅಂದು ಪೂರ್ಣ ಗರ್ಭಿಣಿಯಾಗಿದ್ದಳು!....ಆಗ ಅವಳನ್ನು ಆದರಿಸದೆ ಅಟ್ಟಿದ ನನ್ನ ಜೀವಕ್ಕೆ ಧಿಕ್ಕಾರ! ಮೂಢರಾದ, ಲೋಕಾಪವಾದಕ್ಕೆ ಬೆದರುವ ನನ್ನಂಥ ಹೇಡಿಗಳು ಲೋಕದೊಳಗೆ ಇನ್ನೆಷ್ಟು ಮಂದಿಯಿರುವರೋ? ಲೋಕಾಪವಾದಕ್ಕೆ ಹೆದರಿ

ದೈವದ್ರೋಹ ಮಾಡಿದ ನಾನು ನರನೇ ? ಅಲ್ಲಾ, ನರಪಿಶಾಚಿಯೇ ! ನನ್ನಂಥ ಈ ಪಾಪಿಗೆ ಪರಮಾತ್ಮನು ಏಕೆ ಜನ್ಮ ಕೊಟ್ಟ ? ' ಎಂದು ಮಗಳು ಸ್ವರ್ಣಳ ವಿಷಯವಾಗಿ ಯೋಚಿಸುತ್ತಾ ಕುಳಿತಲ್ಲಿಯೇ ತಲೆ ತಿರುಗಿ ಬಿದ್ದುಬಿಟ್ಟರು, ಮಾಧವರಾಯರು. ಉಪಚಾರವೇನೋ ಆಯಿತು, ಆದರೆ ಆ ವಿಚಾರಗಳು ಮಾತ್ರ ಮಾಧವರಾಯರ ಮನಸ್ಸಿನಲ್ಲಿ ಅಚ್ಚಳಿಯದೆ ಉಳಿದವು.

೭

ಪದ್ಮಮ್ಮ ಇಂದು ರಂಗಮ್ಮನಿಗೆ ಒಂದು ದೊಡ್ಡ ಕೋಣೆಯನ್ನು ಗುಡಿಸಿ ನೀರು ಹಾಕಿ ತೊಳೆದು ಸ್ವಚ್ಛವಾಗಿರಿಸುವ ಕಾರ್ಯವನ್ನು ಒಪ್ಪಿಸಿದ್ದಳು. ಅದೇಕೆಂದರಿಯದಿದ್ದರೂ ರಂಗಮ್ಮ, ಕಾರಣವೆಲ್ಲ ತನಗೇಕೆ, ಹೇಳಿದ ಕೆಲಸ ವನ್ನು ತಾನು ಮಾಡುವುದು ತನ್ನ ಕರ್ತವ್ಯ ಎಂದುಕೊಂಡು, ತನ್ನ ಕಾರ್ಯ ವನ್ನು ಅಧಿಕ ದಕ್ಷತೆಯಿಂದ ನಿರ್ವಹಿಸಿದಳು. ಮಧುರಾನಾಥರಾಯರು ಬಂದು ನೋಡಿದರು. ವಿದ್ಯುತ್‌ಶಕ್ತಿಯ ಬೀಸಣಿಗೆಯ ಕೆಳಗೆ ನೇರವಾಗಿ ಒಂದು ಹೊಸ ದಾದ ಮೇಜು ಕುರ್ಚಿ ಇರಿಸಿದುದಾಯಿತು. ಮೇಜಿನ ಮೇಲೆ ಇರಿಸಿದ್ದ ಲೇಖನಸಾಮಗ್ರಿಗಳನ್ನು ತೆಗೆಸಿ ಮಧುರಾನಾಥರಾಯರು ಹೊಸದಾಗಿ ತಂದಿದ್ದ ವೆಲ್ವೆಟ್ಟಿನ ವಸ್ತ್ರ ಹಾಸಿ, ಅದರ ಮೇಲೆ ಆ ಲೇಖನಸಾಮಗ್ರಿಗಳನ್ನು ಇರಿಸಿ ದರು. ಬಾಗಿಲಿಗೆ ಮಣಿಮಾಲೆಗಳ ತೋರಣ. ಒಳಗೆ ಅನೇಕ ಲೋಕವಿಖ್ಯಾತ ರಾದ ಪುರುಷ ಸ್ತ್ರೀಯರುಗಳ ಭಾವಚಿತ್ರಗಳಿದ್ದವು. ವರ್ಣ ಪತ್ರಗಳಿಂದ ಕೋಣೆಯ ಅಟ್ಟವನ್ನು ಮರೆಮಾಡಿದ್ದರು. ವಿದ್ಯುದ್ದೀಪಗಳು ಉರಿಯುತ್ತಿ ದ್ದವು. ಮಧ್ಯೆ ಮಧ್ಯೆ ಬಣ್ಣ ಬಣ್ಣದ ಬುರುಡೆಗಳು ಹೊಳೆಯುತ್ತಿದ್ದವು. ಮೇಜಿನೆದುರು ದರ್ಶನಾಪೇಕ್ಷಿಗಳಿಗೆ ಬಂದರೆ ಕೂಡಲು ಆರಾಮಕುರ್ಚಿಗಳು, ಸೋಫಾಗಳು ಇರಿಸಿದ್ದವು. ಕೋಣೆಯ ಕಡೆಯ ಪಾರ್ಶ್ವದಲ್ಲಿ, ಹಿಂದೆ ಮಲ ಗುವ ದೊಡ್ಡ ಮಂಚವು ಮೆತ್ತನಾದ ಹಾಸಿಗೆಯಿಂದಲೂ ಥರದೆಯಿಂದಲೂ ಮೂರು ನಾಲ್ಕು ತಲೆದಿಂಬುಗಳಿಂದಲೂ ಕೂಡಿ ಸಜ್ಜಾಗಿದ್ದಿತ್ತು.

ಸಮಯವಾಯಿತು, ಬರುವ ಸಮಯವಾಯಿತು ಎನ್ನುತ್ತ ಎಲ್ಲರೂ ಸಂತೋಷದಿಂದ ಹೊರಬಾಗಿಲಿಗೆ ಬಂದು ನಿಂತರು! ರಂಗಮ್ಮ ತನ್ನ ಕೆಲಸ ವನ್ನು ಪೂರೈಸಿ, ತನ್ನ ಗುಡಿಸಲಿಗೆ ತೆರಳಿದ್ದಳಾದ್ದರಿಂದ ಅವಳು ಅಲ್ಲಿ ಕಾಡು ಬರಲಿಲ್ಲ.

"ಅಮ್ಮಾ, ರಂಗಮ್ಮನೆಲ್ಲಿ?" ಎಂದು ಅನಂತ ಕೇಳಿದ.

"ನಾನೇನು ಕಂಡೆ? ಕೆಲಸವಾಯಿತಲ್ವೆ, ಹೋಗಿರ‍್ಬಹುದು. ಅವಳೇಕೆ ಈಗ ನಿನಗೆ?" ಎಂದರು ಪದ್ಮಮ್ಮ.

"ಅವಳನ್ನೂ ನಿಲ್ಲಹೇಳಬಾರದಾಗಿತ್ತೆ ಇಂದು?"

"ಆ ಮುದುಕಿ ಅಲ್ಲಿ ಉಪವಾಸ ಆಗೊಲ್ವೆ, ಅವಳಿಲ್ಲಿ ಉಳಿದಿದ್ರೆ?"

"ಅದೂ ನಿಜವೆ; ಅದನ್ನು ಮರೆತಿದ್ದೆ ನಾನು."

ಪದ್ಮಮ್ಮನ ಮಗ ಅನಂತ ಈಗ ಹದಿನೈದು ವರ್ಷವವನಾಗಿದ್ದಾನೆ. ಪದ್ಮಮ್ಮ ತನ್ನ ತಾಯಾಗಿದ್ದರೂ ಅವಳಿಗಿಂತಲೂ ಅಧಿಕ ವಾತ್ಸಲ್ಯದಿಂದ ತನ್ನನ್ನು ಸಾಕಿ ಸಲಹಿದ ರಂಗಮ್ಮನನ್ನು ಪ್ರೀತಿಸುತ್ತಿದ್ದನು. ಅನಂತನ ಯಾವ ಕಾರ್ಯವನ್ನೇ ಆಗಲಿ—ಕಠಿಣದ್ದಾಗಲಿ, ಸುಲಭದ್ದಾಗಲಿ—ಶಕ್ಯವಿದ್ದಷ್ಟು ಅವನಿಗೆ ಮಾಡಿಕೊಟ್ಟು ಮನಸ್ತೃಪ್ತಿಯನ್ನು ಕೊಡುತ್ತಿದ್ದಳು. ಅಲ್ಲದೆ ಚಿಕ್ಕಂದಿನಲ್ಲಿ ದಿನಾಲು ಸ್ನಾನಮಾಡಿಸಿ, ಅಂಗಿ ತೊಡಿಸಿ, ತಲೆ ಬಾಚಿ, ನೆತ್ತಿಗೊಂದು ಬೊಟ್ಟಿಟ್ಟು, ವಾಯುಸೇವನೆಗೆಂದು ಅವನನ್ನು ತಿರುಗಾಡಲು ಕರೆದೊಯ್ದು, ಮನೆಗೆ ತಂದು ಬಿಟ್ಟು, ತನ್ನ ಗುಡಿಸಲಿಗೆ ತೆರಳುತ್ತಿದ್ದ ರಂಗಮ್ಮನನ್ನು ಅನಂತನು ಮರೆಯುವುದಾದರೂ ಹೇಗೆ? ಒಮ್ಮೊಮ್ಮೆ ಮರೆಯಾಗಿದ್ದುಕೊಂಡು ರಂಗಮ್ಮ ಅಳುವುದನ್ನು ಅನಂತನು ನೋಡಿದ್ದನು. ಆದರೆ ಅದನ್ನು ಕೇಳಿ ಕಾರಣವನ್ನು ಅರಿತುಕೊಳ್ಳಬೇಕೆಂಬ ಲವಲವಿಕೆ ಅಭಿಲಾಷೆ ಇದ್ದರೂ, ಕೇಳಿದರೆ ಅವಳು ಹೇಳುವಳೋ ಇಲ್ಲವೋ ಎಂಬ ಅಂಜಿಕೆಯಿಂದ ಅನಂತ ಹಿಂಜರಿಯುತ್ತಿದ್ದನು.

ಮಥುರಾನಾಥರಾಯರಿಗೆ ಮೋಟಾರಿನ ಸಪ್ಪಳ ಕೇಳಿಬಂತು. ಒಳಗಿನಿಂದ ತೇಜಪಾಲನು ಹೊರಗೆ ಇಳಿದು, ಒಳಗಿದ್ದ ಆಂಗ್ಲ ತರುಣಿಗೆ ವಂದಿಸಿ, ಕೃತಜ್ಞತೆಯನ್ನು ಸೂಚಿಸಿ ಮನೆಯ ಮೆಟ್ಟಿಲಿನ ಸಮೀಪಕ್ಕೆ ಬಂದು ನಿಂತನು. ಬಾಗಿಲಿನ ಮುಂದೆ ಮಥುರಾನಾಥರು ಕಳುಹಿಸಿದ್ದ ಜಟ್ಕಾಗಾಡಿ ಬರಿದಾಗಿ ಬಂದು ನಿಂತಿದ್ದಿತು. ಪದ್ಮಮ್ಮ ತೇಜಪಾಲನಿಗೆ ಆರತಿ ಎತ್ತಿ, ಬತ್ತಿ ನಂದಿಸಿ, ಅವನ ನೆತ್ತಿಗೊಂದು ಬೊಟ್ಟಿಟ್ಟು ಒಳಗೆ ಕಳುಹಿಸಿ, ತಾವು ಮಾರ್ಗದ ಸಮೀಪಕ್ಕೆ ಹೋಗಿ, ಆ ಕುರಿನೀರನ್ನು ಚೆಲ್ಲಿ ಹಿಂತಿರುಗಿ ಬಂದು, ಹರಿವಾಣವನ್ನು ಹೊರಗೇ ಕವುಚಿಹಾಕಿ ಒಳಗೆ ನಡೆದರು.

ಮಧುರಾನಾಥರಾಯರು "ನೀನು ಬರುತ್ತೀಯೆಂದು ತಂತಿ ದೊರೆತಂದಿನಿಂದ ನಿನಗೆಂದು ಕಾದು ಕಾದು ಬೇಸತ್ತೆವು; ಹೊರಟು ಹತ್ತು ಹನ್ನೆರಡು ದಿವಸವಾಯಿತಲ್ಲ, ಇಷ್ಟು ಸಮಯ ಏನು ಮಾಡುತ್ತಿದ್ದಿ ?" ಎಂದರು.

ತೇಜಪಾಲ "ಏನು ಮಾಡುವುದು cousin, ದಾರೀಲಿ meetದ friends ಬಿಡದೆ ಎಳೆದೊಯ್ಯುತ್ತಾರೆ. ಇಷ್ಟು ಬೇಗ arrive ಆದದ್ದೇ ನಿಮ್ಮ fortune ಅನ್ಬೇಕು."

ಪದ್ಮಮ್ಮ "ಸರಿಯಪ್ಪ, ಎದ್ದು ಸ್ನಾನ ಮಾಡಿ, ಊಟ ಮಾಡು. ಆಮೇಲೆ ಎಷ್ಟು ಬೇಕಾದ್ರು ಕುಳಿತು ಮಾತ್ನಾಡು" ಎಂದರು.

ತೇಜಪಾಲ "Yes. ಮೊದಲು bath ಆಗ್ಬೇಕು. ಆಮೇಲೆ everything. ಊಟ-ಗೀಟ ಏನೂ ಬೇಡ ನಂಗೆ. Miss Linda ನನ್ನ class-mate. ಅವಳ ಕರೆಗೆ object ಮಾಡುವುದು ಆಗಲಿಲ್ಲ. ನನ್ನ ಹೊಟ್ಟೆಯನ್ನು ಅವಳು full ಮಾಡ್ಸಿಬಿಟ್ಟಿದ್ದಾಳೆ. Therefore ಊಟ-ಗೀಟ ಮಾಡುವುದು ಸಾಧ್ಯವೇ ಇಲ್ಲ ನಂಗೆ. First ಒಂದು bath ಆಗ್ಬೇಕು. ಅನಂತ್ರ car ಬರ್ತದೆ—clubಗೆ ಹೋಗ್ಬೇಕು."

ತೇಜಪಾಲ ಪದ್ಮಮ್ಮನಿಗೆ ಸಹೋದರನಾಗಬೇಕು. ಅವನು ಪದ್ಮಮ್ಮನ ತಾಯಿಯ ತಂಗಿಯ ಮಗ. ಈತನಿಗೆ ವಿದ್ಯೆಯಲ್ಲಿ ಹೆಚ್ಚಿನ ಆಸಕ್ತಿಯಿದ್ದುದರಿಂದ ಉದಾರ ಹೃದಯರಾದ ಮಧುರಾನಾಥರು ಇವನ ವಿದ್ಯೆಯ ಜವಾಬ್ದಾರಿಕೆಯನ್ನು ವಹಿಸಿಕೊಂಡರು. ಕ್ರಮೇಣ ಈತನು ತಂದೆತಾಯಿಗಳನ್ನು ಕಳೆದುಕೊಂಡು ನಿರ್ಗತಿಕನಾಗಲು ಮಧುರಾನಾಥರಿಗೇ ಮರೆಹೊಕ್ಕನು. ಅಂತೂ ಅವರ ಧನಸಹಾಯದಿಂದ ವಿದ್ಯಾಸಂಪಾದನೆ ಮಾಡಿಕೊಂಡು 'ಐ.ಸಿ.ಎಸ್.'ಗೆ ತಲಪಿ ಉತ್ತೀರ್ಣನಾಗಿ ಇಂದು ಮನೆಗೆ ಹಿಂತಿರುಗಿ ಬಂದಿದ್ದಾನೆ.

ಮನೆಯಲ್ಲಿ ಯಾರೂ ಮಾಂಸಾಹಾರವನ್ನು ಕಂಡಿರದಿದ್ದರೂ ಈಗ 'ಚಾಪ್ಸು' ತಯಾರಾಗುತ್ತಿತ್ತು. ಮಧುರಾನಾಥರ ಮನೆಗೆ ತೇಜಪಾಲನ ಸಂದರ್ಶನಕ್ಕೆಂದು ಬರುವ ಅತಿಥಿಗಳಿಗೇನೂ ಕಡಿಮೆಯಿರಲಿಲ್ಲ. ಬರುವವರೆಲ್ಲರೂ ತೇಜಪಾಲನ ಒತ್ತಾಯದಿಂದ ಉಪಚಾರ ಸ್ವೀಕಾರ ಮಾಡದೆ ಹಿಂತಿರಳುತ್ತಿರಲಿಲ್ಲ. ಕೆಲವರು ಅದಕ್ಕಾಗಿಯೇ ಬಂದು 'ಬೇಡ ಬೇಡ'ವೆಂದು ಚೆನ್ನಾಗಿ ಬೇಕಾದಷ್ಟು ತುಂಬಿಸಿಕೊಂಡು ಹೋಗುತ್ತಿದ್ದರು. ಮದ್ಯದ ಸೀಸೆ

ಗಳ ತೇಜಪಾಲನ ಕೋಣೆಯ ಕಪಾಟಿನೊಳಗೆ ತುಂಬಿದ್ದವು. ವಿದ್ಯುತ್ ಸಂ ತ ಬೀರು(Radio)ವೊಂದು ತೇಜಪಾಲನ ಕೋಣೆಯನ್ನಲಂಕರಿಸದಿದ್ದುದರಿ. ಅವನು ತನ್ನ ಮಿತ್ರರ ಅವಹೇಳನಕ್ಕೆ ಪಾತ್ರನಾದ. ಈ ಮಾತು ಗುಸುಗುಸು ಎನ್ನುವಷ್ಟರಲ್ಲಿ ಅದೂ ಬಂದು ಸೇರಿತು—ತೇಜಪಾಲನ ಹಾಲಿನೊಳಗೆ.

ಇಷ್ಟರಲ್ಲಿ ಬ್ರಹ್ಮಾವರದ ಕಲೆಕ್ಟರನಾಗುವ ಸುಯೋಗ ತೇಜಪಾಲನನ್ನು ಅರಸದಿರಲಿಲ್ಲ! ಉಚ್ಚ ಅಭಿಮಾನದಿಂದಲೂ ಸೌಲಭ್ಯದಿಂದಲೂ ತನ್ನ ಉದ್ಯೋಗನನ್ನು ನಿಯಮಾನುಸಾರವಾಗಿ ತೇಜಪಾಲನು ನಡೆಸಿಕೊಂಡು ಬಂದನು.

ಉದ್ಯೋಗದಿಂದ ಸಂಜೆ ಹಿಂತೆರಳುವಾಗ ಐದಾರು ಮಿತ್ರರೊಂದಿಗೆ ಸೇರಿಕೊಂಡು ತಿರುಗಾಡಿ ಮನೆಗೆ ಬಂದು ಸೇರುತ್ತಿದ್ದ. ಇದಕ್ಕೆ ಮುಂಚಿತವಾಗಿ ಆಫೀಸಿನ ಪೇದೆಯು ಐದಾರು ಮದ್ಯದ ಸೀಸೆಗಳನ್ನೂ ಸಿಗರೇಟಿನ ಡಬ್ಬಿಗಳನ್ನೂ ತಂದು 'ರಾಯರು ಕಳಿಸಿದರು' ಎಂದು ಹೇಳಿ ಮನೆಯಲ್ಲಿ ತಂದುಕೊಟ್ಟು ಹೋಗುತ್ತಿದ್ದನು. ತೇಜಪಾಲನು ಮಿತ್ರರೊಂದಿಗೆ ಮನೆ ಸೇರಿದನೆಂದರೆ ತೀರಿತು, ಎಲ್ಲರೂ ಕೂಡಿ ಮದ್ಯದ ಸೀಸೆಗಳನ್ನು ಬರಿದು ಮಾಡುತ್ತಿದ್ದರು. ಬೆಳಿಗ್ಗೆ ಹತ್ತು ಘಂಟೆಗೆ ತೇಜಪಾಲ ಮನೆ ಬಿಟ್ಟು ಹೊರಡುವಾಗ ಹಾಲೆಲ್ಲಾ ಸಿಗರೇಟಿನ ರಾಶಿಯಿಂದ ತುಂಬಿರುತ್ತಿತ್ತು. ಇದನ್ನೆಲ್ಲ ಗುಡಿಸಿ ಸ್ವಚ್ಛ ಮಾಡುವ ಕೆಲಸ ರಂಗಮ್ಮನದು.

ಇತ್ತೀಚೆಗೆ ತೇಜಪಾಲನ ಪೇದೆ ರೋಗಪೀಡಿತನಾಗಿದ್ದ ಕಾರಣ ಮಧ್ಯಾಹ್ನದ ಊಟವನ್ನು ಆಫೀಸಿಗೆ ತಲಪಿಸುವ ಕೆಲಸವೂ ರಂಗಮ್ಮನಿಗೆ ಸೇರಿತು. ಈ ಸಂಧಿಯ ಸಹಾಯದಿಂದ ರಂಗಮ್ಮ ತನ್ನೊಂದು ಮನೋಭೀಷ್ಟವನ್ನು ಸಾಧಿಸಿಕೊಳ್ಳುತ್ತಿದ್ದಳು. ಕಲೆಕ್ಟರ್ ಆಫೀಸಿಗೆ ಹೋಗುವ ದಾರಿಯ ಮಧ್ಯೆ 'ರಮಾನಂದ ಆರೋಗ್ಯಾಶ್ರಮ'ವು ನೆಲೆಗೊಂಡಿದ್ದುದು ಅತ್ಯಂತ ಸಹಾಯಕರ್ತೃವಾಗಿದ್ದಿತು. ರಮಾನಂದರಿಗೆ ಅಂದು ದೊರೆತಿದ್ದ ಎಳಗೂಸು ಇಂದು ಹತ್ತು ವರ್ಷದ ಮುದ್ದು ಕುವರಿಯಾಗಿ ಬೆಳೆದು ನಿಂತಿದ್ದಳು. ಆಶ್ರಮದ ಹಲವು ಮಕ್ಕಳೊಂದಿಗೆ ಈ ರತ್ನವು—ರತ್ನದಂತಲ್ಲ—ವಿಜಯಮಣಿಯಂತೆ ಪ್ರಕಾಶಿಸುತ್ತಿದ್ದಳು. ರಂಗಮ್ಮನಿಗೆ ವಿಜಯಳನ್ನು ಕಂಡಾಗಲೆಲ್ಲ

ಮಿಗಿಲಾದ ಮನಾನಂದ ದೊರೆತು ಆನಂದಾಶ್ರುಗಳ ಮೂಲಕ ಹೋಗ ತ್ತುತ್ತಿದ್ದಿತು. ಮಧ್ಯಾಹ್ನದ ಊಟಕ್ಕೆ ಶಾಲೆಯಿಂದ ಆಶ್ರಮಕ್ಕೆ ತೆರಳುಗ ಯ ಕುಮಾರಿಯನ್ನು ನೋಡದೆ ರಂಗಮ್ಮನು ಗುರುತಿಟ್ಟ ಸ್ಥಳದಿಂದ ಅಲ ತ್ತಿರ ಲಿಲ್ಲ. ಸಮಯವಿದ್ದರೆ ವಿಜಯಕುಮಾರಿಯನ್ನು ಕರೆದು ಹತ್ತಿರದಲ್ಲಿಯೆ ಇರುವ ಮರದ ನೆರಳಲ್ಲಿ ಕುಳಿತು, ಆಡಿ ಮುದ್ದಿಟ್ಟು ಯಾವುದಾದರೂ ತಂದಿದ್ದ ಕಾಗದದ ಪೊಟ್ಟಣವನ್ನು ಅವಳ ಕೈಗಿತ್ತು ಕಳುಹಿಸಿ ಮುಂದೆ ಹೆಜ್ಜೆಯಿಡು ತ್ತಿದ್ದಳು. ಸಮಯವಿಲ್ಲದಾಗ ಬರೀ ಮುದ್ದಿಟ್ಟು, "ಏನೂ ತರಲಿಲ್ಲವಮ್ಮ, ನಾಳೆ ತರುವೆನು!" ಎಂದು ಹೇಳಿ ನಿಲ್ಲದೆ ಮುಂದೆ ಹೋಗುತ್ತಿದ್ದಳು. ಹೀಗೆ ರಂಗಮ್ಮ ಮತ್ತು ವಿಜಯಕುಮಾರಿಯ ಸಾಮಿಪ್ಯ ದಿನಗಳೆದಂತೆ ಬಲವಾಗಿ ಬಲಿತುದು ಯಾರ ಗೋಚರಕ್ಕೂ ಬಂದಿರಲಿಲ್ಲ.

ತೇಜಪಾಲನು ಉಂಡು ಹೊರಗಿಟ್ಟ ಪಾತ್ರೆಗಳನ್ನು ತೊಳೆದು ಸರಿಯಾಗಿಟ್ಟು, ನೀರು ಕುಡಿದು ಇಟ್ಟಿದ್ದ ಕುಪ್ಪಿಯನ್ನು ತೆಗೆಯಲು ಒಳಹೊಕ್ಕಾಗ ತೇಜಪಾಲನು, "ನೀನು ಕುಡೀಲಿಲ್ಲ, ಸ್ವಲ್ಪ ಕುಳಿತುಕೊ. ಈಗ ಕುಡಿದು ಕೊಡ್ತೇನೆ" ಎಂದುದನ್ನು ಕೇಳಿ ರಂಗಮ್ಮ ಹೊರಗೆ ಕಾಲಿಡಲು, "ನಿನ್ನನ್ನು ಇನ್ನೊಮ್ಮೆ ಕರೆಯಬೇಕೇನು? ಇಗೋ, ಇಲ್ಲಿಯೇ ಕುಳಿತುಕೊ" ಎಂದು ಸಮಿಪದಲ್ಲಿದ್ದ ಒಂದು ಸ್ಟೂಲನ್ನು ರಂಗಮ್ಮನ ಕಡೆಗೆ ದೂಡಿದನು. ರಂಗಮ್ಮ ಅಂಜಿ ಕೂಡದೆ ಬಾಗಿಲಲ್ಲೇ ನಿಂತುಕೊಂಡಳು. "ಹೂಂ! ಕುಳಿತುಕೊ, ರಂಗಮ್ಮ. ಇಲ್ಲಿ ಬೇರೆ ಯಾರೂ ಇಲ್ಲ! ಎಲ್ಲಾ ಊಟಕ್ಕೆ ಹೋಗಿದ್ದಾರೆ; ಇನ್ನು ಎಲ್ಲರೂ ಬರುವುದು ಮೂರು ಮೂರೂವರೆ ಘಂಟೆಯ ಅನಂತರ. ಇಲ್ಲ ದಿದ್ದರೆ office hoursನಲ್ಲಿ ನಿನ್ನನ್ನು ಹಾಗೆ ಸ್ಟೂಲ್ ಕೊಟ್ಟು ಕುಳಿತುಕೊಳ್ಳ ಲಿಕ್ಕೆ ಅಂದೇನೆ!....ಸುಮ್ನೆ ಕೂತ್ಕೊ....ನನ್ನಲ್ಲಿ ಬಡವರು-ಸಿರಿವಂತರು, ಹೆಣ್ಣು-ಗಂಡು ಎಂಬ ಮೂಢ ಭೇದಭಾವಗಳು ಲೇಶವೂ ಇಲ್ಲ. ಕಾರಣ ಅಂಜಬೇಡ, ಧೈರ್ಯವಾಗಿ ಕುಳಿತುಕೊ. ಅಹಹ! ಅಂಜುತ್ತೀಯೇಕೆ? ನಾನು ಐ.ಸಿ.ಎಸ್. ಕಲ್ತು ಕಲೆಕ್ಟರ್ ಆದ ಮಾತ್ರಕ್ಕೆ ಇಂಪ್ರನೇನೂ ಆಗಿಲ್ಲ ವಷ್ಟೆ! ಸಾಮಾನ್ಯ ಪುರುಷನಂತೆ ನಾನೂ ಒಬ್ಬ ಗಂಡಸಲ್ಲವೆ?" ಎಂದು ತಡೆದು ನೀರು ಕುಡಿಯದೆ ಏನೋ ಬರೆಯಲಾರಂಭಿಸಿದನು. ಆದರೆ ಅವನ ಭಾವ ನೋಟಗಳು ಎಲ್ಲಿ ನಾಟಿದ್ದವೆಂದು ಯಾರು ಬಲ್ಲರು! ರಂಗಮ್ಮ ಬಹಳ

ಹೊತ್ತಿನ ತನಕ ಕಾದಳು. ತೇಜಪಾಲ ನೀರು ಕುಡಿದು ಸೀಸೆಯನ್ನು ಹಿಂದೆ ಕೊಡುವುದನ್ನು ಮರೆತುಬಿಟ್ಟನೋ ಎಂದು ಭಾಸವಾಯಿತವಳಿಗೆ. ಬೆಕ್ಕಿಗೆ ಆನಂದವಾದರೆ ಇಲಿಗೆ ಪ್ರಾಣಸಂಕಟ! ಅದರಂತೆ ಆಯಿತೀಗ, ರಂಗಮ್ಮನ ಪಾಡು.

ತೇಜಪಾಲ, "ತಂಗೀ, ಏಕೆ ಸುಮ್ನೆ ನಿಂತುಕೊಂಡಿದ್ದಿ, ಕೂತ್ಕೋಮ್ಮ" ಎನ್ನುತ್ತಾ ಎದ್ದು ಹೊರಗೆ ನಡೆದನು. ಊಟವನ್ನು ಮಾಡಿ ಇಷ್ಟು ಹೊತ್ತು ನೀರು ಕುಡಿಯದೆ ಇದ್ದ ಆತನಿಗೆ ಬಿಕ್ಕಳಿಕೆ ಬರಲಿಲ್ಲವೇನೋ! ರಂಗಮ್ಮ ಎಷ್ಟೆಷ್ಟು ಗೋಡೆಗೊರಗಿ ತಾಗಿ ಒತ್ತಿ ನಿಂತಿದ್ದರೂ ಆಚೆ ಎಷ್ಟು ಸ್ಥಳವಿದ್ದರೂ ತೇಜಪಾಲನ ತೋಳು ರಂಗಮ್ಮನ ಬೆನ್ನಿಗೆ ತಾಗಿಯೇ ಹೋಯಿತು, ಅವನು ಹೊರಗೆ ಹೋಗುವಾಗ! ರಂಗಮ್ಮನಿಗೆ ಕಣ್ಣಿದ್ದರೂ ಲೋಕ ಕಾಣದಾಯಿತು! ಆದರೆ ಮಾಡುವುದೇನು? ತಾನು ಸಿರಿವಂತರ ಕಾಲಡಿಯ ದೂಳಿನಂತೆ ಸೇವೆ ಮಾಡಿ ಸವೆಯಲೇ ಬೇಕಾದ ಕಾಲ ಒದಗಿ ಬಂದಿರುವಾಗ ಇದನ್ನೆಲ್ಲಾ ಸಹಿಸಿಕೊಳ್ಳಲೇಬೇಕು! ತೇಜಪಾಲನು ಧೂರ್ತ ದೃಷ್ಟಿಯುವನೆಂಬುದನ್ನು ರಂಗಮ್ಮ ತನ್ನ ಅಂತರ್ದೃಷ್ಟಿಯಿಂದಲೇ ಅರಿತು ಕೊಂಡಳು! ಹಸಿಗೊಂಡಿದ್ದ ತನ್ನ ಕಣ್ಣುಗಳನ್ನೊಮ್ಮೆ ಸೆರಗಿನ ತುದಿಯನ್ನೆಳೆದು ತೊಡೆದಳು. ಹೃದಯದಲ್ಲಿಯೇ ಗಂಡನನ್ನು ನೆನೆದುಕೊಂಡಳು. ಪ್ರಪಂಚದ ಮಾಯೆಯೊಳಗೆ ಮರೆಯಾಗಿಹೋದ ತನ್ನ ಸುಖದ ಸುದಿನಗಳನ್ನು ತನ್ನ ಮನೋನೇತ್ರಗಳ ಮುಂದೆ ಚಿತ್ರಿಸಿದಾಗ ಅವಳ ಮುಖದಲ್ಲಿ ಮುಗುಳುನಗು ಅರಳಿತು; ಆದರೆ ಆಗಲೇ ಅವಳ ಮೊಗ ಬಾಡಿತು. ಆಗ ತೇಜಪಾಲನೂ ಒಳಹೊಕ್ಕನು—'ಸಾಮಾನ್ಯ ಮನುಷ್ಯನಂತೆ ನೀನೊಬ್ಬ ಗಂಡಸೆ? ಹುಂ! ಸಾಮಾನ್ಯ ಮನುಷ್ಯನ ಪಾದಗಳನ್ನು ತೊಳೆದು ಆ ನೀರನ್ನು ನೀನು ಕುಡಿಯ ಬೇಕು! ನೀನೊಬ್ಬ ಐ.ಸಿ.ಎಸ್. ಕಲಿತ ಅಲ್ಪನು! ಹೆಣ್ಣುನಾಯಿಯನ್ನು ಕಂಡು ನಾಲಿಗೆ ಹೊರಗೆ ಹಾಕಿ ಅದರ ಹಿಂದೆ ಓಡುವ ಗಂಡು ನಾಯಿಗೆ ಸಮಾನನಾದವನು!....' ಎಂದು ಅನೇಕ ರೀತಿಯಾಗಿ ಬಹಳ ಯೋಚನೆಯಲ್ಲಿ ಮುಳುಗಿದ್ದಳು, ರಂಗಮ್ಮ. ರಂಗಮ್ಮನ ಎದೆಯನ್ನು ಮುಚ್ಚಿದ್ದ ಬಟ್ಟೆ ಕಣ್ಣೀರಿನಿಂದ ತೊಯ್ದು ಹೋಗಿದ್ದುದನ್ನು ಓರೆ ನೋಟದಿಂದ ಗುರುತಿಸಿದ ತೇಜಪಾಲ, ರಂಗಮ್ಮನು ತನ್ನ ಇಂಗಿತವನ್ನು ಅರಿತುಕೊಂಡಳೋ ಎಂಬ

ಭಯದಿಂದಲೋ ಏನೋ ಕುಪ್ಪಿಯನ್ನು ತೆಗೆದು, ನೀರನ್ನು ಕಿಟಕಿಯಿಂದ ಹೊರಚೆಲ್ಲಿ ರಂಗಮ್ಮನನ್ನು ಕರೆದನು. ಸೀಸೆಯನ್ನು ಕೈಯಲ್ಲಿ ಹಿಡಿದುಕೊಂಡು ತನ್ನನ್ನೇ ಎವೆಯಿಕ್ಕದೆ ನೋಡುತ್ತಿದ್ದ ತೇಜಪಾಲನನ್ನು ನೋಡಿದ ರಂಗಮ್ಮನಿಗೆ ತನ್ನೆದುರು ಪಿಶಾಚಿಯೇ ರೂಪ ತಾಳಿ ನಿಂತಿದೆಯೋ ಎಂದು ಭಾಸವಾಗಿ, ಸೀಸೆಯನ್ನು ಅವನ ಕೈಯಿಂದ ಇಸುಕೊಂಡು ನಡೆದೇಬಿಟ್ಟಳು. ತನ್ನ ಕೈಯಲ್ಲಿನ ಸೀಸೆಯನ್ನು ಹಾಗೆ ಎಳೆದು ತೆಗೆದುಕೊಂಡು ಹೋದ ರಂಗಮ್ಮನನ್ನು ನೆನೆದು ಮುಗುಳು ನಗೆ ನಕ್ಕ ತೇಜಪಾಲ.

ಎಷ್ಟು ದೊಡ್ಡ ಸುರೂಪಿಯೂ ಸುವಿದ್ಯಾವಂತನೂ ವರ್ತನ ಸರಿಯಾಗಿಲ್ಲದ ಪಕ್ಷದಲ್ಲಿ ಅವನು ಕುರೂಪಿಯೆಂದೂ ಕುವಿದ್ಯಾವಂತನೆಂದೂ ಗಣಿಸಲ್ಪಡುವನು. ಅವನಿಗೆ ಸಮಾಜದಲ್ಲಿ ಮರ್ಯಾದೆ ತನ್ನಿಂದ ತಾನೇ ಕಡಿಮೆಯಾಗುವುದು. ಅವನ ಮುಖದಲ್ಲಿಯ ಲಕ್ಷಣ, ಲಕ್ಷ್ಮೀಕಟಾಕ್ಷ ಮಾಯವಾಗುತ್ತದೆ; ಮತ್ತೆ ಆ ಸ್ಥಾನದಲ್ಲಿ ಕಟುಕನ ಧೂರ್ತತನದ ಲಕ್ಷಣ ಮೇಲೆದ್ದು ಕಾಣಲಾರಂಭಿಸುತ್ತದೆ.

ವಿಲಾಯತಿಯಲ್ಲಿ ಆಂಗ್ಲ ತರುಣಿಯರ ಮಧ್ಯೆ ಮದ್ಯಪಾನದಿಂದ ಮತ್ತನಾಗಿ ಕಾಮಾತುರನಾಗಿ ನರಕದಲ್ಲಿ ಸ್ವರ್ಗಸುಖವನ್ನು ಅನುಭವಿಸುತ್ತಿದ್ದ ಕಲೆಕ್ಟರ್ ತೇಜಪಾಲರಾಯರಿಗೆ ಮಧ್ಯೆ ಮಧ್ಯೆ ಆ ಜ್ಞಾಪಕಗಳು ಬಾರದಿರುವುದೇ? ಸಾಲದ್ದಕ್ಕೆ ಆತ ಮಾಂಸಾಹಾರಿ!

ಬ್ರಹ್ಮಾವರದ ಪ್ರಜೆಗಳೆಲ್ಲರೂ ತಮಗೆ ದೇವರ ದಯದಿಂದ ದೊರೆತ ಕಲೆಕ್ಟರರನ್ನು ಹೆಚ್ಚಾಗಿ ಹೊಗಳುತ್ತಿದ್ದರು. ತೇಜಪಾಲನು ತನ್ನ ಕರ್ತವ್ಯವನ್ನು ಯಾವೊಂದು ಕುಂದುಕೊರತೆಗಳಿಲ್ಲದೆ, ಬಡಜೀವಿಗಳಿಗೆ ಅನ್ಯಾಯವಾಗದಂತೆ ಎಲ್ಲರಲ್ಲೂ ಸಮಾನ ದೃಷ್ಟಿಯಿಟ್ಟಿದ್ದ ಕಾರಣ ಎಲ್ಲರ ಪ್ರೀತಿಗೆ ಪಾತ್ರನಾದನು. ಎಲ್ಲರೂ ಅವನಿಗೆ ಒಳ್ಳೆಯದನ್ನೇ ಬಯಸುತ್ತಿದ್ದರು. ಯಾವ ಬಡವನೇ ಆಗಲಿ ಅಥವಾ ಸಿರಿವಂತನೇ ಆಗಲಿ ಅವನನ್ನು ದೂರುವಂತಿರಲಿಲ್ಲ. ಬಿ. ಎಮ್. ಸೋಮಪ್ಪಸೆಟ್ಟರು ಮಾತ್ರ ಕಲೆಕ್ಟರರನ್ನು ಕಂಡಾಗ ಹೊರಗಿನಿಂದ ವಂದಿಸುತ್ತಿದ್ದರೂ ಒಳಗೊಳಗೆ ನಂಜುಗಾರುತ್ತಿದ್ದರು. ಅವರ ಹೆಸರು ನಿಜವಾಗಿ ಬ್ರಹ್ಮಾವರ ಮಂಜಪ್ಪಸೆಟ್ಟರ ಮಗ ಸೋಮಪ್ಪಸೆಟ್ಟರೆಂದಿದ್ದರೂ ಜನ 'ಬ್ಲ್ಯಾಕ್ ಮಾರ್ಕೆಟ್ ಸೋಮಪ್ಪಸೆಟ್ರು' ಎಂದು ಕರೆಯುತ್ತಿತ್ತು.

ಒಮ್ಮೆ ಇವರು ರಹಸ್ಯವಾಗಿ ಇಪ್ಪತ್ತು ಮುಡಿ ಅಕ್ಕಿಯನ್ನು ಹೊರದೇಶಕ್ಕೆ ಸಾಗಿಸುತ್ತಿದ್ದಾಗ ಪೊಲೀಸರು ಹಿಡಿದು ಕಲೆಕ್ಟರರ ವಶಮಾಡಿದರು. ಕಲೆಕ್ಟರರು ಸೋಮಪ್ಪಸೆಟ್ಟರಿಗೆ ಎರಡು ತಿಂಗಳು ಜೇಲೂ ಹತ್ತು ಸಾವಿರ ರೂಪಾಯಿ ಜುಲ್ಮಾನೆಯನ್ನೂ ಮಾಡಿದರು. ಆ ದಿನದಿಂದ ಸೆಟ್ಟರಿಗೆ ಕಲೆಕ್ಟರರನ್ನು ಕಂಡರೆ ಆಗದು. ಹೆಣ್ಣಿನ ಹುಚ್ಚೊಂದನ್ನು ಬಿಟ್ಟರೆ ತೇಜಪಾಲ ಉಳಿದೆಲ್ಲ ವಿಷಯ ಗಳಲ್ಲೂ ಒಳ್ಳೆಯವನೇ ಆಗಿದ್ದ!

ಅನ್ಯರ ಸ್ತುತಿಗೆ ಪಾತ್ರನಾದ ತೇಜಪಾಲನನ್ನು ಬಾರಿ ಬಾರಿಗೂ ನೆನೆದು ಅಕ್ಕನೂ ಭಾವನೂ ಹಿರಿಹಿರಿ ಹಿಗ್ಗುತ್ತಿದ್ದರು.

೮

"ರಂಗಮ್ಮಾ! ನನ್ನನ್ನೊಮ್ಮೆ ಮುದ್ದಿಸುವುದಿಲ್ಲವೆ? ನಿನ್ನನ್ನೆಂದು ನಾನು ನೋಡಿದೆನೊ ಅಂದೇ ನಿನ್ನ ಪೂರ್ಣ ರೂಪ ನನ್ನ ಮನಸ್ಸಿನಲ್ಲಿ ಮೂಡಿದೆ—ಇನ್ನೂ ನಿನ್ನದು ಎಳೆ ಪ್ರಾಯ. ಮಾನಮರ್ಯಾದೆ ಎಂತಹದು? ಎಲ್ಲಿಯದು? ಗಂಡಿಗೊಂದು ಹೆಣ್ಣಾದರೆ ಸರಿ—ಹೆಣ್ಣಿಗೊಂದು ಗಂಡಾದರೆ ಸರಿ—ಇದ್ದಷ್ಟು ಕಾಲ ಸುಖವನ್ನನುಭವಿಸಬೇಕು. ಎಷ್ಟು ದಿನದಿಂದ ನಿನ್ನನ್ನೇ ಕಾಯ್ತೇನೆ. ಒಂದು ಮುದ್ದು—ಬಾ. ನನಗೆ ನಿನ್ನ ಸಂಗಸುಖವನ್ನಾದರೂ ಕೊಡು—ನೋಡು, ರೇಡಿಯೋದಲ್ಲಿ ಪ್ರೇಮಸಂಗೀತ ಧ್ವನಿಮಾಡುತ್ತಿದೆ."

"ತೇಜಪಾಲ್! ಬೇಡ! ನೀನು ನನ್ನ ಅಣ್ಣತಮ್ಮಂದಿರ ಹಾಗೆ. ನಾನು ನಿನಗೆ ಒಪ್ಪುವುದು, ಹೇಗೆ ನೋಡಿದರೂ ಸರಿಯಲ್ಲ. ಗಂಡ ಸತ್ತ ವಿಧವೆ—ನಾನು. ನನ್ನನ್ನವರು ಆ ಲೋಕದಲ್ಲಿ ಕುಳಿತು ನೋಡಿ ಏನನ್ನಲಿಕ್ಕಿಲ್ಲ. ಛಿ! ನೀನೇನು ಮಾತನಾಡುವಿ? ನೀನು ನಿನ್ನ ಭೋಗೇಚ್ಛೆಯನ್ನು ತೃಪ್ತಿಪಡಿಸಿ ಕೊಳ್ಳುವೆ. ಆದರೆ! ಲೋಕಾಪವಾದ ಯಾರಿಗೆ? ಅದು ನನಗೇ ವಿನಾಶ ಲಾದುದು! ಯಾವ ಲೋಕಗಳಲ್ಲಿಯೂ ಸ್ಥಾನವಿಲ್ಲ. ಇದು ನನಗೆ ಮಾತ್ರವಲ್ಲ, ನಿನಗೂ! ನೀನು ನಿನ್ನ ಉದ್ಯೋಗದಲ್ಲಿ ಹೇಗೆ ಸತ್ಯವರ್ತಿಯಾಗಿರುವೆಯೊ. ಅದೇ ರೀತಿಯಲ್ಲಿ ಎಲ್ಲ ಸಂದರ್ಭಗಳಲ್ಲಿಯೂ ವರ್ತಿಸಲಾರೆಯೇಕೆ? ಅದೆಷ್ಟೋ ಸ್ತ್ರೀಯರನ್ನು ಈ ನನ್ನ ಪ್ರಾಯದಲ್ಲಿ ನಾನು ನೋಡಿರುವೆನು. ಗುಪ್ತ ವ್ಯಭಿಚಾರ ಮಾಡುವರು. ಬಹಿರಂಗವಾಯಿತೆಂದಾಗ ಮನೆಯಲ್ಲೂ ಸ್ಥಾನ

ವಿಲ್ಲದಾಯಿತು ! ಆಗ ತನ್ನನ್ನಾಶ್ರಿಸಿದವನಲ್ಲಿಗೆ ಓಡುವರು. ಅವರೆಲ್ಲಿ ? ಎಲ್ಲೊ ! ಆಗ ಅವಳಿಗೆ ಗತಿ ಯಾವುದು? ತ್ರಿಶಂಕುಸ್ವರ್ಗ ! ಕೇಳುವವರಿಲ್ಲ ! ಹೇಳುವವರಿಲ್ಲ ! ಮಾನವೆಲ್ಲಿ, ಮರ್ಯಾದೆಯೆಲ್ಲಿ ? ಅಂತ್ಯದಲ್ಲಿ ಸಮುದ್ರವೇ ಗತಿ ! ಊರ ಕೆರೆಬಾವಿಗಳೇ ಗತಿ ! ಪುರುಷರಿಗೇನು ? ಅವರ ಇಚ್ಛೆ ಪೂರ್ತಿಯಾದರೆ ಮಾಯವಾಗಿಬಿಡುವರು. ಸ್ತ್ರೀಯರು ಅಬಲೆಯರೆಂಬುದು ಜನ್ಮಸಿದ್ಧ !...."

"ಅಹಹ ! ಧರ್ಮೋಪದೇಶವೆ ? ಇದೆಲ್ಲಾ ಬೇಕಿಲ್ಲ, ರಂಗಮ್ಮ. ನನಗೆ ಬೇಕಾದುದು ನೀನು. ಈ ತನಕ ನನ್ನ....ನೀನು ನನಗೆ ಊಟ ತಂದು ಕೊಡುವಾಗ ಅನೇಕ ಸಲ ನಾನು ಹೇಳಿದಂತೆ ಸುಮ್ಮನೆ ನಿಂತುಕೊಳ್ಳಲಿಲ್ಲವೆ ? ಹಾಗೆ ನಿಂತು ನೀನು ಆಸೆ ತೋರಿಸಿದ್ದರಿಂದ ನಾನಿಂದು ನಿನ್ನನ್ನು ಮುದ್ದಿಸ ಹೋದೆ —ಇದುವರೆಗೆ ದೊರೆಯದ್ದು ಬಯಸಿದ್ದು ದೊರೆತೀತೆಂದಿದ್ದೆ."

"ಸುಮ್ಮಸುಮ್ಮನೆ ತೇಜಪಾಲ್ !—ನಿನ್ನ ಮನೆಯಲ್ಲಿ ದುಡಿಯುವಾಗ ತೆರಳುವುದಾದರೂ ಹೇಗೆ ? "

"ಹಾಗೆ ನೀನು ದಾರಿಗೆ ಬರುವಿಯೆಂದು ನಾನರಿಯೆನೆ ? ನೀನು ದೊರೆತ ನನಗಿನ್ನು ಸ್ವರ್ಗ ಬೇರೆ ಬೇಕೆ ? ಏಕೆ ? ರಂಗಮ್ಮ—ನಿನಗೆ ಈ ಹೆಸರನ್ನು ಯಾರಿಟ್ಟರು ? ಪುತ್ಥಳಿಯ ಗೊಂಬೆಯಂತೆ ಇರುವ ನಿನ್ನ ಸ್ಫುರದ್ರೂಪ ಕಾಯಕ್ಕೆ ಈ ಹೆಸರು ಒಗ್ಗುವುದಿಲ್ಲವಲ್ಲಾ ! ನಿನ್ನನ್ನು 'ಗೋಲ್ಡ್ ಲೇಡಿ' ಎಂದು ಕರೆಯಲೆ ? ಬೇಡ ! ಹಾಗೆ ಕರೆದರೆ ನೀನು ಗಿಲೀಟಿನವಳು, ಅಂದರೆ ಮೋಸಮಾಡುವವಳು ಎಂದಾಗುವುದು ! ಜನ ಹಾಗೆ ಭಾವಿಸೀತು. 'ಸೊವ್ರಿನ್ ಬ್ಯೂಟಿ' ಎಂದು ಕರೆಯುತ್ತೇನೆ. ಹೌದು. ಅದೇ ಚೆನ್ನಾಗಿದೆ, ಅಲ್ಲವೆ. ಹಾಗೆಂದರೆ ನಿನಗೆ ಅರ್ಥವಾಯಿತೆ ? ಹೇಳ್ತೀನೆ ಕೇಳು. ಸೊವ್ರಿನ್ ಅಂದ್ರೆ ಸ್ವರ್ಣ, ಬ್ಯೂಟಿ ಅಂದ್ರೆ ಸುಂದರಿ. ಹೀಗೆ ಕನ್ನಡದಲ್ಲಿ ಹೇಳುವಾಗ 'ಸ್ವರ್ಣ ಸುಂದರಿ' ಎಂದಾಗುವುದು. ಹೇಗೆ ? ಹೆಸರು ಚೆನ್ನಾಗಿಲ್ವೆ ?"

"ಐ.ಸಿ.ಎಸ್. ಕಲಿತ ಸಂಭಾವಿತ ಪ್ರವೀಣರಿಗೆ ಒಳ್ಳೇದು ಕೆಟ್ಟದ್ದನ್ನು ಹೇಳಲು ನಾನೇತರವಳು ? "

"ಶಹಬಾಸ್ ! ನೀನು ಇಷ್ಟು ಬುದ್ಧಿವಂತಳೆಂದು ನಾನು ಸ್ವಪ್ನದಲ್ಲಿಯೂ ನೆನಸಿರಲಿಲ್ಲ. ಬಾ ! ಸ್ವರ್ಣಸುಂದರಿ, ಬಾ, ಸುಮಿಲನದ ಸುಖ ಭೋಗವನ್ನು ಅನುಭವಿಸೋಣ. ನೀನೇ ನನ್ನ ಜೀವನದ ಕಾಂತಿಮಯಿ."

ಎನ್ನುತ್ತಾ ತಡೆಯಲಾರದೆ ಅವಳನ್ನು ತಕ್ಕೈಸಿ ಮುದ್ದಿಡಲು ಹೋದ. ಆದರೆ ಅವನು ಮುಟ್ಟುವುದೇ ತಡ—ಅವಳು ಹತ್ತು ಗಜ ಹಿಂದೆ ಹಾರಿದಳು. ತೇಜಪಾಲ ಪುನಃ ಅವಳನ್ನು ಬರಸೆಳೆಯುಹೋದನು. ಅವಳಿಗೆ ಹತ್ತು ದಿಕ್ಕುಗಳು ಹತ್ತು ಸಾವಿರ ದಿಕ್ಕುಗಳಾದವು. ಪಾಪ! ಮಾಡುವುದಾದರೂ ಏನನ್ನು ? ಒಂದೆಡೆಯಿಂದ ಇನ್ನೊಂದೆಡೆ ಹಾರಾಡತೊಡಗಿದಳು. ಬಾಗಿಲಿಗೆ ಅಡ್ಡವಾಗಿ ತೇಜಪಾಲ ನಿಂತಿದ್ದ.

ರಂಗಮ್ಮನು ತೇಜಪಾಲನ ಮುಂದೆ ರೌದ್ರ ರೂಪವನ್ನು ತಾಳಿದ್ದಾಳೆ. ನೋಡಿದರೆ ಭಯಂಕರವಾಗಿ ಕಾಣುತ್ತಿದೆ! ಹೆದರಿಕೆಯಾಗುತ್ತಿದೆ! ಅಯ್ಯೊ! ಇದೆಂತಹ ರೂಪ! ಪಿಶಾಚಿಯಂತಿರುವಳಲ್ಲ. ತನ್ನ ಉಗುರುಗಳಿಂದ ಕುತ್ತಿ ನೋಯಿಸುತ್ತಿರುವಳು! ತೇಜಪಾಲನು ನೋವನ್ನು ತಡೆಯಲಾರದೆ ರೋದಿಸುತ್ತಿದ್ದಾನೆ. ಅವನು ಬೆದರಿ ಬಾಡಿ ತಪ್ಪಿಸಿಕೊಳ್ಳಲು ದಾರಿಗಾಣದೆ ತವಕ ಪಡುತ್ತಿದ್ದಾನೆ. ಅಸುರರೂಪಿ ರಂಗಮ್ಮ ತೇಜಪಾಲನನ್ನು ಸುಂಗ ಬರುತ್ತಾ, "ಮೂರ್ಖ! ಏನೆಂದು ಭಾವಿಸಿದೆ? ನಾರಿ ಮುನಿದರೆ ಮಾರಿಯೆಂದು ಸರ್ವಜ್ಞ ಹೇಳಿರುವುದನ್ನು ಜ್ಞಾಪಿಸಿಕೊ! ನಿನ್ನ ಮೋಸ, ತಂತ್ರ, ಕಾಪಟ್ಯಗಳನ್ನು ನನ್ನಲ್ಲಿ ವೆಚ್ಚ ಮಾಡುವೆಯಾ? ಹುಂ! ನಿನ್ನ ವಿಲಾಯತಿಯ ವಿದ್ಯೆಗೆ ಧಿಕ್ಕಾರ! ಹೆಂಗಳೆಯರನ್ನು ವಂಚಿಸಿ ನಿರ್ಗತಿಕರನ್ನಾಗಿ ಮಾಡುವ ನಿನ್ನ ಐ.ಸಿ.ಎಸ್. ವಿದ್ಯೆಗೆ ಬೆಂಕಿ ಬೀಳಲಿ! ಮಡೆಯಾ!...." ಎಂದು ಅವಳ ಬಾಯಿಂದ ಹೊರಟ ಮಾತುಗಳನ್ನು ಕೇಳಿ ದಿಗ್ಭ್ರಾಂತನಾಗಿ ತೇಜಪಾಲ ಎವೆಯಿಕ್ಕದೆ ರಂಗಮ್ಮನನ್ನೇ ನೆಟ್ಟ ದೃಷ್ಟಿಯಿಂದ ನೋಡುತ್ತಿದ್ದನು.

ರಂಗಮ್ಮ ಎರಡು ದೊಡ್ಡ ಬೆಂಕಿಯ ಸೂಟಿಗಳನ್ನು ಹಿಡಿದುಕೊಂಡು ತೇಜಪಾಲ ಮಲಗಿದ್ದ ಮಂಚದ ಕಡೆಗೆ ಧಾವಿಸಿಕೊಂಡು ಬರುತ್ತಿದ್ದಳು! ಮಂಚದ ಸುತ್ತು ಹಾಕಿದ್ದ ಫರದೆಗೆ ಬೆಂಕಿ ಹತ್ತಿಬಿಟ್ಟಿತು! ರಂಗಮ್ಮ ಮಾಯವಾದಳು! "ಅಯ್ಯೋ! ಹಾಯ್!" ಎಂದು ಬೊಬ್ಬಿಡುತ್ತಾ ಮಂಚದ ಮೇಲೆ ಮಲಗಿದ್ದ ತೇಜಪಾಲ ಕೆಳಗುರುಳಿ ಬಿದ್ದ ಶಬ್ದ ಕೇಳಿ ಮಥುರಾನಾಥರಾಯರು ಬಂದರು.

ತೇಜಪಾಲ ನೆಲದ ಮೇಲೆ ಬಿದ್ದಿದ್ದನು. ಮಥುರಾನಾಥರು ಬಂದಾಗಲೂ ತೇಜಪಾಲ ಅಲ್ಲಿಂದಲೆ "ಅಯ್ಯೊ! ಅಯ್ಯೊ!" ಎಂದು ತನ್ನ ಕಣ್ಣು

ಮುಚ್ಚಿಕೊಂಡು ಬೊಬ್ಬಿಡುವುದನ್ನು ನಿಲ್ಲಿಸಿರಲಿಲ್ಲ. ಅಷ್ಟರಲ್ಲಿ ಪದ್ಮಮ್ಮನೂ ಅಲ್ಲಿಗೆ ಧಾವಿಸಿಕೊಂಡು ಬಂದರು. ಮಥುರಾನಾಥರು ತೇಜಪಾಲನನ್ನು ಎತ್ತಿ ಮಂಚದ ಮೇಲೆ ಮಲಗಿಸಿದರು. ಆದರೆ ಅವನ ಬಾಯಿಂದ ಹೊರಡುತ್ತಿದ್ದ ಶರಾಬಿನ ದುರ್ವಾಸನೆಯನ್ನು ಸಹಿಸಲಾರದೆ ದೂರ ಸರಿದು ನಿಂತರು. ಪದ್ಮಮ್ಮ ತೇಜಪಾಲನನ್ನು ಬೊಬ್ಬಿಟ್ಟು ಕೆಳಗುರುಳಿ ಬಿದ್ದ ಕಾರಣವನ್ನು ಕೇಳಿದರು. ತೇಜಪಾಲ, "ಏನೇನೋ ಒಳ್ಳೊಳ್ಳೇ ಸ್ವಪ್ನಗಳು ಕಂಡವು, ಅನಂತರ ಅದೇ ಸ್ವಪ್ನಗಳು ರೌದ್ರಾಕಾರ ತಾಳಿದವು. ಕಡೆಗೆ ಬರೇ ಎಲುವಿನ ಗೊಂಬೆಗಳೇ ನನ್ನನ್ನು ಸುತ್ತಿ ಆಡುತ್ತಿರುವಂತೆಯೂ, ನನ್ನ ಕತ್ತು ಹಿಡಿದು ಕೊಲ್ಲಲು ಬರುವಂತೆಯೂ ಸ್ವಪ್ನ ಕಂಡೆ. ಕೊನೆಗೆ ಯಾರೋ....ಎರಡು ಉರಿಯುವ ಸೂಟೆಗಳನ್ನು ಹಿಡಿದುಕೊಂಡು ಬಂದು ಥರದೆಗೆ ಬೆಂಕಿ ಕೊಟ್ಟ ಹಾಗಾಯಿತು. ಆಗ ಭಯವಾಯಿತು...." ಎಂದು ಹೇಳಿ ನಿಲ್ಲಿಸಿದ.

"ಇಷ್ಟಕ್ಕೆ ಚಿಕ್ಕ ಮಕ್ಕಳ ಹಾಗೆ ಒದರಿ ಕೆಳಗುರುಳಿ ಬಿದ್ದೆಯಲ್ಲಾ! ಕನಸು ಕೂಡ ಚಿಕ್ಕ ಮಕ್ಕಳದು...." ಎಂದು ಪದ್ಮಮ್ಮ ನಗುತ್ತಾ ಅಲ್ಲಿಂದ ಹೊರಬಿದ್ದರು. ಮಥುರಾನಾಥರೂ ನಸುನಗುತ್ತಾ ಪತ್ನಿಯ ಹಿಂದೆ ಹೆಜ್ಜೆ ಹಾಕಿದರು.

೯

ಊಟವಾಯಿತು. ತಾಂಬೂಲ ಹಾಕಿಕೊಳ್ಳುತ್ತ ಮಾಧವರಾಯರು ಸುಬ್ಬರಾಯರ ಮುಂದೆ ಮಗಳ ವಿವಾಹದ ವಿಷಯದಲ್ಲಿ ಯೋಚಿಸುತ್ತಿದ್ದಾರೆ. ಕಾವೇರಮ್ಮ ಮುಖಮಂಟಪದ ಮರೆಯಲ್ಲಿ ಕುಳಿತು ಅವರಿಬ್ಬರೊಳಗೆ ಆಗುವ ಸಂಭಾಷಣೆಯನ್ನು ಆಲಿಸುತ್ತಿದ್ದರು. ಪ್ರಕಾಶನು ಆಗಲೆ ಹೋಗಿ ಬಿಟ್ಟಿದ್ದನು. ತುಳಸಿ ಕಿರುಕೋಣೆಯ ಮುಚ್ಚಿದ್ದ ಕಿಟಕಿಯ ಬಾಗಿಲಿನ ರಂಧ್ರದ ಮೂಲಕ ಒಕ್ಕಣ್ಣಿನಿಂದ ನೋಡುತ್ತ ತಂದೆಯೂ ಮಾವನೂ ಆಡುವ ಮಾತುಗಳನ್ನು ಹೆಕ್ಕಿ ಜೀರ್ಣಿಸಿಕೊಳ್ಳುತ್ತಿದ್ದಳು.

"ಇನ್ನೆಷ್ಟು ಕಾಲಾಂತ ಹುಡುಗಿಯನ್ನು ಇಟ್ಟಿರೋದು? ಬೇಗ ಯಾರ ಕೈಯಾದರೂ ಹಿಡಿದು ಒಪ್ಪಿಸ್ಬೇಕು." ಮಾಧವರಾಯರು ಹೀಗೆಂದಾಗ ಸುಬ್ಬರಾಯರು ಕಂಗಳಲ್ಲಿ ನೀರು ತಂದುಕೊಂಡರು. ಬಹುಪಕ್ಷ ಕಿರಿಯ ಮಗ ಕಿಶೋರನ ಸ್ಮರಣೆ ಬಂದಿರಬೇಕು ಅವರಿಗೆ! ಅಂತೂ ಕಣ್ಣುಗಳನ್ನೊರಸುತ್ತಾ, "ಆ ಹುಡುಗನಿರುತ್ತಿದ್ದರೆ...." ಎಂದರು.

"ಅದಕ್ಕೇನು ಮಾಡುವುದು? ಎಲ್ಲಾ ಅದೃಷ್ಟ ಬೇಡವೆ? ಬಿಡಿ, ಸುಮ್ಮನೆ ದುಃಖಿಸಿ ಆರೋಗ್ಯ ಹಾಳುಮಾಡಿಕೊಳ್ಳಬೇಡಿ. ಸಮಯ ಬಂದರೆ ಎಲ್ಲಾ...." ಎಂದರು ಮಾಧವರಾಯರು.

"ಹಾಗೆಂದು ನಾವು ಅಸಡ್ಡೆ ಮಾಡಿದರೆ ಕಾರ್ಯ ನೆರವೇರುವುದೆ? ಬೇಗನೆ ಎಲ್ಲಾದರೂ ನೋಡಿ ನಡೆಸಿ ಬಿಡುವುದೇ ಲೇಸು. ಯಾವುದಾದರೂ ನೋಡಿದ್ದಿದೆಯೆ?"

"ತೇಜಪಾಲ ಅಂತ—ಆ ಪದ್ಮಮ್ಮ, ಮಥುರಾನಾಥರಾಯರ ಹೆಂಡ್ತೀ ತಮ್ಮ—ಅಂದ್ರೆ ಅವಳ ತಾಯಿಯ ತಂಗಿಯ ಮಗಾಂತ ಕಾಣುತ್ತೆ....ಈಗ ಒಳ್ಳೆ ಸ್ಥಿತಿಯಲ್ಲಿದ್ದಾನೆ. ತಾಯ್ತಂದೆ ಯಾರೂ ಇಲ್ಲ. ಮಥುರಾನಾಥರಾಯರ ಸಹಾಯದಿಂದಲೆ ಐ.ಸಿ.ಎಸ್.ವರೆಗೆ ಕಲ್ತು ಈಗ ಬ್ರಹ್ಮಾವರದ ಕಲೆಕ್ಟರ್ ಉದ್ಯೋಗ ನೋಡ್ತಾ ಇದ್ದಾನೆ. ಅವನಿಗೇನೆ ಕೊಡೋಣಾಂತ ಯೋಚನೆ ಮಾಡಿದ್ದೇನೆ. ಆದ್ರೆ...."

"ಆದರೇನು?"

"ಅಂದ್ರೆ ಈಗಿನ ಕಾಲದ ಹುಡುಗರೆ ವಿಶೇಷ! ಅದರಲ್ಲೂ ಅವ ಐ.ಸಿ.ಎಸ್. ಆದವ. ಹುಡುಗಿ ಕಪ್ಪು-ಗಿಪ್ಪು ಅಂತ ಒಪ್ತಾನೋ ಇಲ್ಲೋ ಎಂಬ...."

"ಹುಂ! ನೋಡೋದು. ಆದ್ರೆ ಆಗ್ಲಿ, ಇಲ್ದಿದ್ರೆ ನಾನೊಂದು ಯೋಚಿಸಿದ್ದೇನೆ. ಮಾತ್ರ, ಸ್ವಲ್ಪ ದೂರ."

"ದೂರವಿದ್ದರೇನೆ ಒಳಿತು, ಈ ಕಾಲದಲ್ಲಿ! ಅದೆಲ್ಲಿ?"

"ಮದ್ರಾಸಿನಲ್ಲಿ ನಮ್ಮ ವಸಂತಿಯ ಗಂಡನ ತಮ್ಮ ಒಬ್ಬ ಹುಡುಗ ಇದ್ದಾನೆ. ಅವನನ್ನು ನೋಡಿ ಬಹಳ ಸಮಯವಾಗಿ ಹೋಗಿದೆ. ಹೆಚ್ಚಿನ ವಿದ್ಯೆ ಇಲ್ಲದಿದ್ದರೂ ತಿಂಗಳಿಗೆ ನೂರು ರೂಪಾಯಿ ಸಂಪಾದಿಸುತ್ತಾನಂತೆ. ಹೆಸರು ಮಧುಕರ. ವಿಚಾರಿಸಿದರೆ ಆಗ್ಬೋದು ಅಂತ ಕಾಣ್ತೆ, ಮನಸ್ಸಿಗೆ."

ಸುಬ್ಬರಾಯರ ಯೋಚನೆ ಸರಿಯೆಂದು ಕಂಡುಬರಲು ಮಾಧವರಾಯರು ಮದರಾಸಿಗೆ ಪತ್ರ ಬರೆದರು. ಮಾವನ ಆಜ್ಞೆಯನ್ನು ಉಲ್ಲಂಘಿಸಲಾರದ-ವರನ ಸಹೋದರನು ಹೆಂಡತಿಯೊಂದಿಗೆ ಮಂಗಳೂರಿಗೆ ತಲಪಿದನು. ಆಗಲೆ ವಿವಾಹ ನಿಶ್ಚಯವಾಗಿ, ಎರಡನೆ ತಿಂಗಳಲ್ಲಿ ಮದುವೆಯನ್ನು ನಡೆಸುವು

ದೆಂದು ಮುಹೂರ್ತ ನಿಶ್ಚಯ ಮಾಡಿ ಸುಬ್ಬರಾಯರ ಅಳಿಯದೇವನು ಮಾವನ ಆಜ್ಞೆ ಪಡೆದು ಮದರಾಸಿಗೆ ಹೊರಟುಹೋದನು.

ಕೇಷನಿನ ಕಾಲವಾದುದರಿಂದ ಮಾಧವರಾಯರು ಮದುವೆಗೆ ಬೇಕಾದ ಸಾಮಗ್ರಿಗಳ ಸಂಗ್ರಹಕ್ಕೆ ತೊಡಗಿದರು. ಹಿಡಿಯದವರ ಕೈಕಾಲು ಹಿಡಿದು ಪೋಲೀಸರಿಗೆ ಸಿ.ಐ.ಡಿ.ಗಳಿಗೆಂದು ಹಣ ತಾಗಿಸಿ, ಸಿಕ್ಕಿಸಿಕ್ಕಿದ ಸಾಮಾನು ಗಳನ್ನು ಮನೆಗೆ ಸಾಗಿಸಿದರು. ಅವರು ಈ ತನಕ ಹತ್ತಾರು ಮುಡಿ ಅಕ್ಕಿ ಸಂಗ್ರಹ ಮಾಡಿದ್ದರಾದರೂ ಒಂದೇ ಒಂದು ಸೇರು ಅಕ್ಕಿ ಮನೆಯಲ್ಲಿರಲಿಲ್ಲ. ವಧುವಿಗೆ ತಮ್ಮಿಂದಾದ ಒಡವೆ ವಸ್ತುಗಳನ್ನು ಮಾಡಿಸಿದರು. ಕಾವೇರಮ್ಮ ಮಗಳಿಗೊಂದು ಒಡ್ಯಾಣವನ್ನೂ ತನಗೊಂದು ಅಡ್ಡಿಗೆಯನ್ನೂ ಮಾಡಿಸ ಬೇಕೆಂದು ಹಟತೊಟ್ಟಿದ್ದರಾದರೂ ಗಂಡ ಹಣದ ಅಡಚಣೆಯಿಂದಾಗಿ ಕಷ್ಟ ಪಡುವುದನ್ನು ಕಂಡು ಹೆಚ್ಚು ಒತ್ತಾಯಪಡಿಸದೆ ಸುಮ್ಮನಿದ್ದರು.

೧೦

ವಸಂತ ಋತುವಿನ ಸಂಧ್ಯಾಕಾಲ. ಪಡುವಣ ಗಡಲನ್ನು ಸಮೀಪಿಸಿದ ಪ್ರಭಾಕರನ ದಿವ್ಯಮಂಡಲ ಹೊಂಬಣ್ಣವನ್ನು ತಾಳಿ ಜಗದಖಿಲ ಮಾನವರ ಹೃದಯವನ್ನು ವಿಕಾಸಗೊಳಿಸಿ ಆನಂದವೀವ ತೆರದಲ್ಲಿ ಅತಿ ರಮ್ಯವಾಗಿ ಶೋಭಿಸುತ್ತಿತ್ತು. ಆ ವೃಂದಾವನವು ನೂರಾರು ತರದ ಹೂಗಿಡಬಳ್ಳಿಗಳಿಂದ ತುಂಬಿದ್ದುದರಿಂದ ಸುಗಂಧ ಪರಿಮಳವು ವ್ಯಾಪಿಸಿಕೊಂಡಿದೆ. ತಳಿರೆಲೆಗಳಿಂದ ಹೊರಡುತ್ತಿದ್ದ ತೆಳುಗಾಳಿ ರೋಗಿಯನ್ನೂ ನಿರೋಗಿಯನ್ನಾಗಿ ಮಾಡುವಷ್ಟು ಸುಖಕರವಾಗಿ ಬೀಸುತ್ತಿತ್ತು. ಬೀಸಿ, ಕಾವಿನ ಮಳೆಯನ್ನು ಕರೆಯುತ್ತಿತ್ತು. ಅಲ್ಲಲ್ಲಿ, ಒಳ್ಳೇ ಸಾರದ ಪನಕರುಗಳು ಮೇಯುತ್ತಿದ್ದವು. ವಿಜಯ ಹೂ ಮುಡಿದುಕೊಂಡು ಸಿಂಗಾರಾಗಿದ್ದಳು. ತಲೆಗೂದಲನ್ನು ನೀಳವಾಗಿ ಬಾಚಿ ಹೆರಳು ಹಾಕಿಕೊಂಡಿದ್ದಳು. ಹಣೆಯ ಮೇಲೆ ಕುಂಕುಮ—ಚಂದ್ರನಲ್ಲಿದ್ದ ಚಿಕ್ಕದೊಂದು ಕಲೆಯೆನ್ನುವಂತೆ—ಕಾಣುತ್ತಿತ್ತು. ಹುಲ್ಲಿನ ಮೇಲೆ ಕುಳಿತು ಹೂಮಾಲೆಯನ್ನು ಪೋಣಿಸುತ್ತಿದ್ದಳು. ಅವಳ ಆ ಚೆಲುವಿನ ನಗುಮೊಗದಲ್ಲಿ ಕುತೂಹಲ ಚಿಹ್ನೆ ಮೂಡಿದ್ದಿತು. ನಿಮಿಷಕ್ಕೊಮ್ಮೆ ಬಗ್ಗಿಸಿದ ತಲೆಯನ್ನು ಎತ್ತಿ ನೋಡಿ, ನಿರಾಶೆಯ ಸುಯ್ಯೊಲರನ್ನು ಬಿಡುತ್ತಿದ್ದಳು.

ಸಂಧ್ಯಾವಂದನೆಯನ್ನು ಪೂರೈಸಿ ರುದ್ರಾಕ್ಷಮಣಿಮಾಲೆಯನ್ನು ಹಿಡಿದು ಜಪಿಸುತ್ತ ತಮ್ಮ ಎಡಗೈಯಲ್ಲಿ ಕಮಂಡಲವನ್ನು ಹಿಡಿದುಕೊಂಡು ಬಿಳಿ ವಸ್ತ್ರ ಧಾರಿಯಾದ ರಮಾನಂದರು ಅದೇ ದಾರಿಯಾಗಿ ಬರುತ್ತಿದ್ದವರು ಅವಳನ್ನು ನೋಡಿ, ನಮಸ್ಕರಿಸಿದವಳನ್ನು ಆಶೀರ್ವದಿಸಿ, "ಅಮ್ಮಣ್ಣಿ, ವಿಜಯಾ, ಇದೇಕೆ ಇಲ್ಲಿ?" ಎಂದರು. ಅವಳು, "ಸಂಜೆಯ ಭಜನೆಗೆ ಪುಷ್ಪಗಳ ಅಣಿಮಾಡುವೆ! ಆದಮೇಲೆ ಬರುವೆ" ಎಂದಳು. ರಮಾನಂದರು ಆಗಲೆಂದು ಮುನ್ನಡೆದರು.

ಮುಸ್ಸಂಜೆಯ ಮುಗಿಲುಗಳು ಆಕಾಶದಲ್ಲಿ ತೇಲಿಕೊಂಡಿದ್ದವು. ಹೊಂಬಣ್ಣದ ಕಿರಣಜಲವು ಅಲ್ಲಲ್ಲಿ ಅವುಗಳಿಂದ ಹಾಯ್ದು ನಾನಾ ಆಕಾರಗಳ ಕಲ್ಪನೆಯನ್ನು ತಂದುಕೊಡುತ್ತಿತ್ತು. ಪಡುಗಡಲ ಪೆರೆಯೆಡೆಗೆ ನಡೆಯುತ್ತಿದ್ದ ಸೂರ್ಯನ ಸುತ್ತಲಿನ ಹೊಂಬಣ್ಣದ ಚೆಲುವು ವಿಜಯಳ ಮುಖವನ್ನು ಪ್ರತಿ ಬಿಂಬಿಸುತ್ತಿತ್ತು.

ಕತ್ತಲು ಮೆಲ್ಲಮೆಲ್ಲನೆ ಬರುತ್ತಿತ್ತು. ಸಂಜೆಯಾಯಿತೆಂದು ಮನೆಗೆ ಹಿಂತೆರಳುವ ದನಕರುಗಳ ಸಂತೋಷದ ಅಂಬಾಕರವು ಯಾವುದೋ ಒಂದು ಭಾವನೆಯನ್ನು ಸಂತೋಷಗೊಳಿಸುತ್ತಿತ್ತು. ಗೂಡುಗಳನ್ನು ಸೇರುತ್ತಿದ್ದ ಹಕ್ಕಿಗಳ ಧ್ವನಿಯು ಎಲ್ಲೆಲ್ಲಿಯೂ ತುಂಬುತ್ತಿತ್ತು. ವಿಜಯಳಿಗೂ ಸೃಷ್ಟಿಯ ಚೆಲುವಿ ನೊಡನೆ ಒಂದಾಗುವ ಬಯಕೆ ಬಂದಿರಬೇಕು. ಕೋಗಿಲೆಯನ್ನು ನಾಚಿಸುವ ಧ್ವನಿಯಲ್ಲದಿದ್ದರೂ ಮಂಜುಳವಾದುದು; ತಾನತಾನವಾಗಿ ಗಾನರಸ ಹೊರ ಹೊಮ್ಮಿತು. ಅದೊಂದು ಮನೋಹರ ಸನ್ನಿವೇಶ; ದೃಶ್ಯ. ನಿಸರ್ಗದ ಚೆಲುವಿನೊಡನೆ ನೈಸರ್ಗಿಕ ಚೆಲುವಿನ ಜೀವವೊಂದು ಅನಂತಪ್ರೇಮದೆಡೆಗೆ ಪರಿಧಾವಿಸುತ್ತಿತ್ತು.

ಹೂವಿನ ಹಾರವಾಯಿತು, ಮೊಗ್ಗೆಗಳ ಸಂಗ್ರಹವಾಯಿತು. ಪತ್ರಗಳು ಬುಟ್ಟಿಯನ್ನು ತುಂಬಿದ್ದವು. ಮುಂದೇನು? ಕತ್ತಲು ಎತ್ತಲಿಂದಲೋ ಮುತ್ತಿತು. ಸುತ್ತಲಿನ ಸೃಷ್ಟಿ ಪ್ರಶಾಂತವಾಗಿ ಗಂಭೀರವಾಗಿ ಗಾಢ ಆಲೋಚನೆಗೆ ಒಳಗಾದಂತೆ ಕಾಣುತ್ತಿತ್ತು. ದಿಗಂತವು ಮಸಕು ಮಸಕಾಗಿ ಕಂಗೊಳಿಸುತ್ತಿತ್ತು. ವಿಜಯಳ ದೃಷ್ಟಿ ಅದೆಲ್ಲಿಯೋ ಮುಂದುವರಿಯುತ್ತಿತ್ತು. ಆದರೆ ಅವಳ ಮನಸ್ಸು ಅದಕ್ಕಿಂತಲೂ ಮುಂದುವರಿಯುತ್ತಿತ್ತು. ಮೆಲ್ಲನೆ

ಮನೆಗೆ, ಅಂದರೆ ಆಶ್ರಮದ ಕಡೆಗೆ ಹೊರಡಲು ಎದ್ದು ನಿಂತಳು. ಆದರೆ ಕಾಲುಗಳು ಮುಂದೆ ಹೋಗಲೊಲ್ಲವು. ಆದರೆ ಸಂಶಯಗಳನ್ನರಸುವ ಜಗತ್ತಿನೊಡನೆ ತಾನೇಕೆ ಕತ್ತಲ ಹೊತ್ತಿನಲ್ಲಿ ನಿಂತು ತಪ್ಪುಗಳನ್ನು ತಂದುಕೊಳ್ಳುವ ಕೆಲಸ ಮಾಡಬೇಕು ?—

ಎರಡು ಹೆಜ್ಜೆ ತೆಗೆಯುವಾಗಲೆ ಹಿಂದಿನಿಂದ ಯಾರೋ ಬಂದು ಕಣ್ಣುಗಳನ್ನು ಮುಚ್ಚಿದಂತಾಯಿತು. ವಿಜಯ "ಅನಂತ" ಎಂದು ನಕ್ಕಳು. ಅವಳು ನಕ್ಕಾಗ ಅನಂತ ವಿಶ್ವವೇ ನಕ್ಕಂತಿತ್ತು. ಅನಂತನಿಗೂ ನಗು ಬಂದಿರಬೇಕು. ಕಣ್ಣುಗಳನ್ನು ಮುಚ್ಚಿದ ಕೈಗಳನ್ನು ಬಿಟ್ಟು ಅವಳ ಮುಂದೆ ನಿಂತನು. ಅವಳ ಗಲ್ಲವನ್ನು ಹಿಡಿದೆತ್ತಿ ನೈಸರ್ಗಿಕವಾದ ನಿಸರ್ಗಸೌಂದರ್ಯ ಲೀನವಾಗಿದ್ದು ಶೋಭಿಸುತ್ತಿದ್ದ ಅವಳ ಕಣ್ಣಿಗೆ ಕಣ್ಣಿಟ್ಟು ನೋಡುತ್ತ, "ವಿಜಯಾ, ಇಷ್ಟು ಬೇಗನೆ ಹೊರಟ ಕಾರಣ ?" ಎಂದನು.

"ನೀನೇಕೆ ಇಷ್ಟು ತಡ ಮಾಡಿದೆ ? ಅಡ್ಡಿಯಾದರೂ ಯಾವುದೊ ?"

"ವಿಜಯಾ ! ದಿನಾಲು ಆಶ್ರಮದ ಕಡೆ ಬಂದು ಹೋಗುವ ನನಗೆ ಅಡ್ಡಿಯೆಂತಹದು ? ಅಥವಾ ಅಡ್ಡಿ ಮಾಡತಕ್ಕವರು ಯಾರು ?"

"ಹಾಗಲ್ಲ ಅನಂತ ! ಸಿರಿವಂತರ ಮಕ್ಕಳಿಗೆ ಯಾವಾಗಲೂ ಸಮಯಾನುಕೂಲತೆಗಳು ಬಹಳ ಕಡಿಮೆ ನೋಡು, ಅದೇ ಕೇಳಿದೆ ?"

"ನನ್ನನ್ನೂ ಅಂತಹವರ ಪಾಲಿಗೆ ಸೇರಿಸುವೆಯಾ ?"

"ಮತ್ತೆ, ನಿಜವಾಗಿಯೂ" ಎಂದು ನಕ್ಕಳು ವಿಜಯ.

"ಅದಿರಲಿ. ನಿನ್ನೆ ನಿನಗೆ ರಮಾನಂದರು ಹೇಳಿದುದನ್ನು ಮರೆತು ಬಿಟ್ಟೆಯಾ ?"

"ಯಾವುದು ? ನನ್ನ ಸ್ಮರಣೆಗೆ ಬರಲೊಲ್ಲದಲ್ಲ."

"ಚಿಕ್ಕವಳಾಗಿದ್ದು ಆಡುತ್ತಿದ್ದಾಗ ವರ್ತಿಸುತ್ತಿದ್ದ ವರ್ತನಗಳನ್ನು ಮರೆತು ಮುಂದೆ...."

"ಹಾಂ ! ಹಾಂ ! ಸ್ಮರಿಸಿಕೊಂಡೆ ! ಮುಂದೆ....ಬಹುವಚನ....ಅಷ್ಟೆ ತಾನೆ ? ತಪ್ಪಾಯಿತು ಅನಂತರಾಯರೆ. ದಯಮಾಡಿ ಕ್ಷಮಿಸಿಬಿಡುವಿರೆಂದು ನನ್ನ ಭಾವನೆ."

"ಉಹುಂ !....ಇಲ್ಲ. ಸಾಧ್ಯವಿಲ್ಲ. ಈ ತಪ್ಪಿಗೆ ಶಿಕ್ಷೆಯನ್ನು ವಿಧಿಸಿಯೇ

ತೀರಬೇಕು. ನಿನ್ನೆಯ ಮಾತಿಗೆ ಈ ದಿನವೆ ಮರವೆ ಎಂದರೇನು? ಅರ್ಥವಿಲ್ಲವೆ?"

"ಯಾವ ಶಿಕ್ಷೆ?"

"ಮರಣದಂಡನೆ! ಇಂಥಾ ತಪ್ಪಿಗೆ ಇದೇ ಶಿಕ್ಷೆಯೆಂದು ರಾಜತಂತ್ರದಲ್ಲಿ ಬರೆದಿದೆ."

"ದಯಮಾಡಿ ಇದೊಂದು ಸಲ ಕ್ಷಮಿಸಬೇಕು. ಮುಂದೆ ಜಾಗ್ರತೆಯಿಂದ...."

"ಇಲ್ಲ. ಸಾಧ್ಯವಿಲ್ಲ. ಹೇಳಿದ್ದು ಆಗಲೇಬೇಕು **Law is law**! ನಾಲಿಗೆಯೆಂಬುದು ಒಂದು."

"ಪ್ರಾಣದಾನ ಮಾಡಲೇಬೇಕು...."

"**No! Impossible!**"

"ಅಯ್ಯೋ, ಸ್ತ್ರೀಯರನ್ನು ಮೃತ್ಯುವಿನ ಬಾಯಿಂದ ಕಾಪಾಡುವ ಪುಣ್ಯಾತ್ಮರು ಯಾರೂ ಇಲ್ಲವೆ?...."

"ಚೂಃ! ಬೊಬ್ಬೆ ಹಾಕ್ಬೇಡ! ಆಶ್ರಮದಿಂದ ಯಾರಾದರೂ ಓಡಿ ಬಂದಾರು."

ವಿಜಯ ನಗು ತಡೆಯಲಾರದೆ ಗಟ್ಟಿಯಾಗಿ ಗಹಗಹಿಸಿ ನಕ್ಕುಬಿಟ್ಟಳು. ಅನಂತನೂ ಅವಳೊಂದಿಗೆ ನಕ್ಕ. ಹೀಗೆ ನಗುಮಾತುಗಳಿಂದ ಅನಂತ-ವಿಜಯರು ಸ್ವಲ್ಪ ಹೊತ್ತು ಸಂತೋಷದಿಂದ ಕಳೆದರು.

"ಅನಂತರಾಯರೆ, ಹೊತ್ತು ಮೀರಿತು, ಹೋಗಲೆ?" ಎಂದು ಅನಂತನ ಹೃದಯಪ್ರದೇಶದಲ್ಲಿ ತನ್ನ ಶಿರವನ್ನಿರಿಸಿದ್ದ ವಿಜಯ ಅನಂತನನ್ನು ಕೇಳಿದಳು.

"ಹೋಗುವಿಯಾ? ಸರಿ. ಇನ್ನೊಮ್ಮೆ 'ಪ್ರಿಯಾ' ಅನ್ನು."

"ನನ್ನ ಹೃದಯದಲ್ಲಿ ನಿಮ್ಮನ್ನು 'ಪ್ರಿಯಾ' ಎಂದು ಭಾವಿಸಿ ಪೂಜಿಸಿದರೆ ಸಾಲದೆ? ಆಗಲಿ, ನಿಮಗಾಗಿ ಅನ್ನುವೆ, 'ಪ್ರಿಯಾ!'"

"ನಾಳೆ?"

"ಬರುವೆ. ಆದರೆ ನೀವು ಈವತ್ತಿನಂತೆ ತಡಮಾಡಬಾರದು."

ಪ್ರಣಯದಲ್ಲಿ ವೈಮರೆತ ಹಕ್ಕಿಗಳೆರಡು ತಮ್ಮ ತಮ್ಮ ಗೂಡುಗಳಿಗೆ

ಹಿಂತಿರುಗಿದವು. ಆದರೆ ಒಂದನ್ನೊಂದು ನೋಟಕ್ಕೆ ಮರೆಯಾಗುವತನಕ ತಿರುತಿರುಗಿ ನೋಡುತ್ತಾ ನಡೆದವು.

* * * *

ದೇವರ ಪೂಜೆಗೆ ತಯಾರಾಗಿ ವಿಜಯಳ ಹೂವಿಗಾಗಿ ಕಾಯುತ್ತಿದ್ದ ರಮಾನಂದರು ವಿಜಯ ತಂದ ತುರಾಯಿಯನ್ನು ಶ್ರೀಕೃಷ್ಣನ ಹಾಲುಗಲ್ಲಿನ ಮೂರ್ತಿಯ ಕೊರಳಿಗೆ ತೊಡಿಸಿದರು. ದೇವರ ಪೂಜೆಯ ತರುವಾಯ ಆಶ್ರಮದ ಮಕ್ಕಳ ಹಿಂದು ಭಜನೆಗೆ ಆರಂಭಿಸಿತು. ಎಲ್ಲರೂ ಭಕ್ತಿಯಲ್ಲಿ ನಿರತರಾದರು.

ಅನಂತರ ಸಂಗೀತ ಸಾಮುಗ್ರಿಗಳನ್ನು ಭದ್ರಪಡಿಸಿ ಎಲ್ಲರೂ ದೇವರಿಗೆ ಉದ್ದಂಡ ನಮಸ್ಕಾರ ಮಾಡಿ ಊಟಕ್ಕೆ ತೆರಳಿದರು. ಆದರೆ ವಿಜಯ ಮಾತ್ರ ಅಲ್ಲೇ ಇದ್ದಳು.

ಪರಮಾತ್ಮನಿಗೆ ಅಭಿಷೇಕವಾದ, ದೇವರ ಮೂರ್ತಿಯ ಪಾದದೆಡೆಯಲ್ಲಿ ಬಿದ್ದಿದ್ದ ಒಂದು ಗುಲಾಬಿಯನ್ನು ತೆಗೆದು ತನ್ನ ಜಡೆಗೆ ಮುಡಿದುಕೊಂಡು ದೀನಭಾವದಿಂದ ಮೂರ್ತಿಯ ಮುಖವನ್ನು ನಿರೀಕ್ಷಿಸಿ ಕೈಜೋಡಿಸಿ, ಬಾಡಿದ ಮುಖದಿಂದ ಕಣ್ಣು ಮುಚ್ಚಿ ಭಕ್ತಿಯಿಂದ ದೇವರನ್ನು ಮನೋರಾಜ್ಯದಲ್ಲಿ ನೆನೆದಳು ವಿಜಯ.

ಅನಂತನು ಮನೆ ತಲಪಿದನು. ಇತ್ತೀಚೆಗೆ ಅನಂತ ಮನೆ ಮುಟ್ಟಲು ತಡವೇಕೆ ಆಗುತ್ತಿದೆ? ಎಂಬೊಂದು ಸಮಸ್ಯೆ ಪದ್ಮಮ್ಮನನ್ನು ಬಾಧಿಸುತ್ತಿತ್ತು. ಈಗವನು ತರುಣ ಪ್ರಾಯಕ್ಕೆ ಬಂದಿದ್ದಾನೆ. ಶಾಲೆ ಬಿಟ್ಟೊಡನೆ ಇಲ್ಲಿ ಬಂದು ಕುಳಿತು ಮಾಡುವುದಾದರೂ ಏನನ್ನು ? ಸಂಜೆ ಸಮಯ ವಾಯುಸೇವನೆಗೆಂದು ಓಡಾಡಿಕೊಂಡು ಅಥವಾ ತಿರುಗಾಡಿಕೊಂಡು ಬರುತ್ತಿರಬಹುದು, ಎಂಬ ವಿಷಯಗಳು ಪದ್ಮಮ್ಮನ ಸಮಸ್ಯೆಗೆ ಉತ್ತರವೀಯುತ್ತಿದ್ದವು.

ಅನಂತ–ವಿಜಯರಲ್ಲಿ ನಿಸರ್ಗಾನುಸಾರವಾಗಿ ಪ್ರೇಮಮಿಲನವೇನೊ ರಹಸ್ಯವಾಗಿ ನಡೆದು ಹೋಯಿತು. ಆದರೆ ಬಹಿರಂಗವಾಗಿ ವಿಜಯವಾದೀತೆ? ಅದನ್ನು ಹಾಗೆ ನಿಶ್ಚಯ ಮಾಡಲು ಪ್ರಪಂಚದಲ್ಲಿ ಯಾರಿಂದಲೂ ಸಾಧ್ಯವಿಲ್ಲ!

## ೧೧

ಕಲೆಕ್ಟರ್ ತೇಜಪಾಲರಾಯನಿಗೆ ರಂಗಮ್ಮನ ಮೇಲೆ ಓರೆನೋಟ ಬಲಗೊಳ್ಳುತ್ತಿದೆ. ಪಾಪ! ತೇಜಪಾಲ ರಂಗಮ್ಮನನ್ನು ವಿಲಾಯತಿಯ ಸ್ತ್ರೀಯರಲ್ಲೊಬ್ಬಳೆಂದು ಭಾವಿಸಿದ್ದ. ಆದರೂ ತೇಜಪಾಲನ ಉದಾರ ಗುಣ ವನ್ನು ಮೆಚ್ಚುವುದವಶ್ಯವಲ್ಲವೆ? ಬಡತನದ ಮೂಲಭೂತಕ್ಕೆರವಾಗಿರುವ ರಂಗಮ್ಮನನ್ನು ಎತ್ತಿ ಉದ್ಧರಿಸುವ ಯೋಚನೆ ಮಾಡುತ್ತಿರುವಾಗ ಅವಳು ಅದನ್ನು ಗಣಿಸದೆ ಮನದೊಳಗೆ ಧಿಕ್ಕರಿಸುತ್ತಾಳೆ, ಅಲ್ಲದೆ ಕೊರಗುತ್ತಾಳೆ!

'ಶುಭಸ್ಯ ಶೀಘ್ರಂ' ಎಂಬಂತೆ ತೇಜಪಾಲ ಬೇಗನೆ ಒಂದು ಮದುವೆ ಯನ್ನು ಮಾಡಿಕೊಂಡು ಅಕ್ಕನ ಮನೆಯಿಂದ ಹೊರಬೀಳಬೇಕು. ಬೇರೆ ಸಂಸಾರ ಹೂಡಿ ಸ್ವತಂತ್ರ ಜೀವನವನ್ನಾರಂಭಿಸಿದ ತರುವಾಯ ತನ್ನ ಹೆಂಡತಿಗೆ ಕೆಲಸ ಜಾಸ್ತಿಯಾಗುವುದರಿಂದ ಮನೆಯ ಹೊರಗೆಲಸಕ್ಕೆಂದು ಭಾವನನ್ನೂ ಅಕ್ಕನನ್ನೂ ಪುಸಲಾಯಿಸಿ ರಂಗಮ್ಮನನ್ನು ಬರಮಾಡಿಸಿಕೊಂಡರೆ........ಹಣ್ಣು ಜಾರಿ ಹಾಲಲ್ಲಿ ಬಿದ್ದಂತೆಯೆ! ಎಂಬ ಆಲೋಚನೆಯಿಂದ ತೇಜಪಾಲ ಉಪಾಯ ಮಾಡಿ ತನ್ನ ಮದುವೆಯ ವಿಷಯದಲ್ಲಿ ಪದ್ಮಮ್ಮನನ್ನು ಕಾಡಲಾ ರಂಭಿಸಿದನು.

ಒಡಹುಟ್ಟಿದವನಂತೆ ಸಾಕಿದ್ದ ತೇಜಪಾಲನ ಇಚ್ಛೆಯನ್ನು ಅಕ್ಕನಾದ ಪದ್ಮಮ್ಮ ಸಾಧಿಸುವ ಪ್ರಯತ್ನವನ್ನು ಮಾಡದಿರಲಿಲ್ಲ. ತನ್ನ ಗಂಡನ ಕಿವಿಗೆ ಈ ವಿಷಯವನ್ನು ಹಾಕಿದ್ದೂ ಆಯಿತು. ಮಥುರಾನಾಥರಿಗೆ ಯಾರೂ ಇಲ್ಲದ್ದರಿಂದ ತಾನು ಸಾಕಿ ಸಲಹಿದ ತೇಜಪಾಲನಿಗೆ ವಿವಾಹ ಮಾಡಲೇಬೇಕು ಎಂದು ಆಲೋಚಿಸಿದರು.

ಮಥುರಾನಾಥರು ಆಗಲೆ ತೇಜಪಾಲನಿಗೆ ತಕ್ಕ ಹೆಣ್ಣೆಲ್ಲಿದೆ ಎಂದು ಕುಳಿತಲ್ಲಿಂದಲೆ ಲೋಕಸಂಚಾರ ಮಾಡಿದರು. ಮಥುರಾನಾಥರು ಹೆಂಡತಿ ಯನ್ನು ಕರೆದು ಈ ವಿಷಯದಲ್ಲಿ ವಿಚಾರ ಮಾಡುತ್ತಾ, "ಮಂಗಳೂರಿನಲ್ಲಿ ಮಾಧವರಾಯರಿಗೆ ಒಂದು ಹುಡುಗಿಯಿರಬೇಕಲ್ವೆ? ಅದನ್ನು ಕೇಳೋಣ ಎಂಬ ಯೋಚನೆ? ಕೊಟ್ಟಾರೆ?" ಎಂದರು.

"ಕೊಡದೆ ಏನು ಸಂಕಟ?....ಆದರೆ...."

"ಏನು ಅದ್ರೆ?"

" ಹುಡುಗ ಒಪ್ತಾನೊ ಇಲ್ವೊ; ಹುಡುಗಿ ಸ್ವಲ್ಪ ಕಪ್ಪು ! "

" ನೀನೇನು ಅಪ್ಸರೆಯೆ ? ನಾನೊಪ್ಪಲಿಲ್ವೆ ನಿನ್ನ ? "

" ನಿಮ್ಮಂತೆಯೆ ಎಲ್ಲರೂ ಇರ್ತಾರೆಯೆ ?....ಆಗ ಈ ಅಪ್ಸರೆಯನ್ನು ಬಿಟ್ಟರೆ ' ಊಂಹುಂ ! ' ಅಲ್ವೆ ಬೇರೆ ! "

" ಅದಿರಲಿ. ನಿನ್ನ ಮದುವೆ ವಿಚಾರ ಅಲ್ಲ, ಈಗ ಮಾಡೋದು. ಮುಂದೆ ಆಗೋ ಮದುವೆ ವಿಚಾರ ! "

" ಅವನನ್ನು ವಿಚಾರಿಸಿ ! ಆಯ್ತು ಅಂದ್ರೆ ಕೇಳೋಣ ! "

ಸಮ್ಮತಿಯೆಂದಾಗಲು ಅಂದು ಮಥುರಾನಾಥರು ಊಟವಾದ ಕೂಡಲೆ ಲೇಖನಸಾಮಗ್ರಿಗಳನ್ನು ಮುಂದಿರಿಸಿ ವೀಳ್ಯೆ ಹಾಕಿಕೊಂಡು, ತಮ್ಮ ಹೇಳಿಕೆಯನ್ನು ಮಂಗಳೂರಿನ ಮಾಧವರಾಯರಿಗೆ ಹೇಳಲು ಸಿದ್ಧರಾದರು. ಪದ್ಮಮ್ಮ ಅಲ್ಲೇ ಸಮೀಪದಲ್ಲಿ ಕುಳಿತು ಕಾಗದ ಬರೆಯುತ್ತಿದ್ದ ಗಂಡನ ಮುಖವನ್ನು ಹಿಂದೆಂದೂ ಸರಿಯಾಗಿ ನೋಡಲಿಕ್ಕಾಗದೆಯೊ ಏನೊ—ನೋಡುತ್ತಾ ನಿಂತಿದ್ದರು. ಬಹುಶಃ ಪತಿಯ ನಿಜವಾದ ಸೌಂದರ್ಯವನ್ನು ಸಾವಕಾಶವಾಗಿ ನೋಡಿ ಸವಿಯುವ ಸುಸಂಧಿ ದೊರೆತದ್ದು ಅದೇ ಮೊದಲ ಸಲವಾಗಿರಬೇಕು !

ಮಥುರಾನಾಥರು ಪತ್ರವನ್ನು ಬರೆದ ತರುವಾಯ ಲಕೋಟೆಯ ಮೇಲೆ ವಿಳಾಸ ಬರೆದು, ಕಾಗದವನ್ನು ಒಳಗಿಟ್ಟು ಮುಚ್ಚುತ್ತೇನೆನ್ನುವಷ್ಟರಲ್ಲಿ ಪದ್ಮಮ್ಮ, " ಎಲ್ಲಿ, ಓದಿ ತೋರಿಸಿ ಅಂದ್ರೆ ! " ಎಂದು ತಮ್ಮ ಕುತೂಹಲ ವ್ಯಕ್ತಪಡಿಸಿದರು.

" ಹೂಂ ! ಕೇಳು " ಎಂದು ಮಡಿಸಿದ ಪತ್ರವನ್ನು ಬಿಡಿಸಿ ಓದಲು ಮೊದಲುಮಾಡಿದರು.

> " ಅಂದು ಹುಣಸೂರಿಗೆ ಬಂದಿದ್ದಾಗ ಆದ ಪರಿಚಯ ನಮ್ಮದು. ತಾವು ಅವರ ಬೀಗರೆಂದು ಮನೆಯಲ್ಲಿ ತಿಳಿದೆವು. ಮೊದಲ ಸಂಬಂಧದಲ್ಲಿ ತಮಗೊದಗಿದ ಗಂಡಾಂತರಗಳು ನಮಗೆ ಭಯಂಕರವಾಗಿ ಕಾಣುವುವು. ತಾವೂ ಆ ಸಮಯದಲ್ಲಿ ಸ್ವಲ್ಪ ನಿಷ್ಕರುಣೆಗಳಾದಿರಿ ! ಅದನ್ನೆಲ್ಲ ಹೇಳಿ ಫಲವೇನು ? ಎಲ್ಲಾ ಅವರವರ ಕರ್ಮಾನುಸಾರ ! ಹಣೆಬರಹ ಬರೆದವನಿಗೂ ಅಳಿಸಿಹೋಗದೆಂದಮೇಲೆ ನಾವೇನು ತಾನೆ ಮಾಡಲಾದೀತು ? ಪ್ರಪಂಚ ನಡೆಯಬೇಕಷ್ಟೆ !

" ತಮ್ಮ ಕಿರಿಯ ಮಗಳೊಬ್ಬಳು ವಿವಾಹಕ್ಕೆ ಸಿದ್ಧಳಾಗಿರುವಳೆಂದು ನಾವು ಈಗಷ್ಟೆ ಅರಿತೆವು.

" ತಮ್ಮ ಮಗನ ಸಹಪಾಠಿಯಾದ ತೇಜಪಾಲನನ್ನು ಬಲ್ಲಿರಾದ ಕಾರಣ ನಾವೇನೂ ಹೆಚ್ಚಾಗಿ ಹೇಳಬೇಕಾಗಿಲ್ಲ. ವಿಲಾಯತಿಯಿಂದ ಬರುವಾಗ ಮಿತ್ರರ ಸಂಗಡ ಒತ್ತಾಯಿಸುವುದನ್ನು ಬಿಡದ್ದರಿಂದ ತಿರಸ್ಕರಿಸಲಾರದೆ ತಮ್ಮ ಮನೆಯಲ್ಲೆ ಆಶ್ರಯ ಹೊಂದಿದ್ದನೆಂದು ತಿಳಿಯ ಬಂತು. ಅದಕ್ಕೆ ನಾವು ತಮಗೆ ಆಭಾರಿಯಾಗಿರುವೆವು! ಈತನು ಸಧ್ಯ ಇಲ್ಲೇ ಅಂದರೆ ಬ್ರಹ್ಮಾವರದಲ್ಲಿ ಕಲೆಕ್ಟರ್ ಉದ್ಯೋಗ ದಲ್ಲಿದ್ದಾನೆ. ಮುಂದೆ ವರ್ಗವಾಗುವ ಸಂದರ್ಭವಿದೆ; ಅದರೊಳಗೆ ಲಗ್ನ ಮಾಡಿ ಬಿಡುವುದು ಉಚಿತವೆಂದು ನಮ್ಮ ಇಚ್ಛೆ.

" ತಮ್ಮ ಕುವರಿಯನ್ನೂ ನಮ್ಮ ಭಾವ ತೇಜಪಾಲನನ್ನೂ ವಧೂ-ವರರನ್ನಾಗಿ ಮಾಡಬೇಕೆಂಬುದೆ ನಮ್ಮ ಇಚ್ಛೆ. ತಮಗೆ ಸಮ್ಮತಿ ಇರುವುದಾದರೆ ದಯಮಾಡಿ ಪತ್ರಮೂಲಕ ವ್ಯಕ್ತಪಡಿಸತಕ್ಕದ್ದು. ಒಪ್ಪಿಗೆಯೆಂದಾದರೆ ನಾವು ತಕ್ಕ ಸಲಕರಣೆಯೊಡಗೂಡಿ ಅಲ್ಲಿಗೆ ಆಗಮಿಸುವೆವು. ಮನಸ್ಸೊಪ್ಪಿದರೆ ಜಾತಕ-ಗೀತಕವೆಲ್ಲಾ ಕೂಡಿ ದಂತೆಯೆ ಸರಿ! ದಯಮಾಡಿ ಕೂಡಲೆ ಉತ್ತರಿಸುವುದು.

—ಮಥುರಾನಾಥ "

ಎಂದು ಮಥುರಾನಾಥರು ತಾವು ಬರೆದ ಪತ್ರದ ಮಧ್ಯಭಾಗವನ್ನು ಓದಿ ತೋರಿಸಿದರು. ಪದ್ಮಮ್ಮ ಒಳಹೊಕ್ಕು, " ಅವನಿಗೆ ನೀನಿನ್ನೂ ಊಟ ತೊಗೊಂಡು ಹೋಗ್ಲಿಲ್ವೆ, ರಂಗಮ್ಮಾ? ಚೆನ್ನಾಯ್ತು, ಕಾರ್ಯ! ದಿನಾಲು ಮಾಡೋ ಕೆಲ್ಸ ಹೀಂಗ ಮರ್ತ್ರೋದ್ರೆ ಹ್ಯಾಗೆ, ರಂಗಮ್ಮಾ? ಹೋಗು, ಬೇಗ ಹೋಗು " ಎಂದು ರಂಗಮ್ಮನಿಗೆ ಆಜ್ಞಾಪಿಸಿದರು.

ಅಬಲೆಯರ ಕಷ್ಟ ಸಬಲೆಯರಿಗೇನು ಗೊತ್ತು! ವಿಜಯಳ ದರ್ಶನ ವಂತೂ ಇಂದು ತಪ್ಪಿತು! ಆದರೆ ಪಾಪಕೂಪದಿಂದ ಬಿಡುಗಡೆ? ಅದಾಗ ದಿದ್ದರೂ ಚಿಂತೆಯಿಲ್ಲ, ವಿಜಯಳ ಮುದ್ದು ಮೊಗದ ದರ್ಶನದಿಂದಾಗುವ ಆನಂದ ವನ್ನು ತಾನಿಂದು ಕಳೆದುಕೊಂಡೆನಲ್ಲಾ! ಎಂದು ರಂಗಮ್ಮ ತನಗೊದಗ ಬಹುದಾದ ಕಷ್ಟಗಳನ್ನು ಲೆಕ್ಕಿಸದೆ ತಾನು ಮಾಡಿದ, ತಪ್ಪಲ್ಲದಿದ್ದರೂ ಅದನ್ನು

ತಪ್ಪೆಂದು ಪರಿಗಣಿಸಿ ಮನಸ್ಸಿನೊಳಗೆ ಬೆಂದು ಬೆಂಡಾಗುತ್ತಿದ್ದಳು. ಆದರೆ ಅವಳ ಮನೋವೇದನೆಯನ್ನರಿತು ಏನೆಂದು ಕೇಳುವವರಾರು, ವಿಚಾರಿಸುವವರಾರು? ಬಾಯಿಬಿಟ್ಟು ಹೇಳಲಾರದ ಎಡರುತೊಡರುಗಳು ರಂಗಮ್ಮನ ಕುತ್ತಿಗೆಗೆ ಬರುತ್ತಿವೆ! ಆದರೂ ಅವಳು ಕೆಲಸದವಳು, ಕೆಲಸ ಮಾಡಲೇಬೇಕು!

ಗತ್ಯಂತರವಿಲ್ಲದೆ ರಂಗಮ್ಮನೆ ಅಂದು ತೇಜಪಾಲನಿಗೆ ಊಟ ಒಯ್ದಳು. ದೈವಾನುಗ್ರಹದಿಂದ ಆಫೀಸರ ಪೇದೆ, ಒಳಗೆ ಯಾರನ್ನೂ ಬಿಡಬೇಡವೆಂದು ಕಲೆಕ್ಟರರ ಅಪ್ಪಣೆಯನ್ನು ಪರಿಪಾಲಿಸಲು ಬಾಗಿಲಲ್ಲಿ ನಿಂತಿದ್ದನು. ರಂಗಮ್ಮನನ್ನು ಕಂಡೊಡನೆ ಅವನು, "ರಂಗಮ್ಮನವರೆ, ಏನಿದು, ಇಂದು ಬಹಳ ವೇಳೆ ಮೀರಿತಲ್ಲ; ರಾಯರು ಈಗಾಗಲೆ ಹೋಟಲಿಗೆ ಹೋಗಿಬಿಟ್ಟು ಬಂದಿದ್ದಾರೆ. ಬಹಳ ಕೆಲಸದಲ್ಲಿದ್ದಾರೆ" ಎಂದ. ರಂಗಮ್ಮ, "ಹಾಗಾದರೆ ಇದನ್ನು ಒಳಗೆ ಕೊಟ್ಟುಬಿಡುವಿರಾ? ನಾನು ಇಲ್ಲೇ ನಿಂತಿರುವೆನು" ಎಂದಳು. "ಆಗಲಿ, ತಾಯಿ; ಅದಕ್ಕೇನು?" ಎಂದ, ನಗು ಮೊಗದ ಮುದಿ ಚಂದಪ್ಪ. ರಂಗಮ್ಮನಿಂದ ಟಫಿನ್‌ಕ್ಯಾರಿಯರ್ ತೆಗೆದುಕೊಂಡು ಒಳಗೊಯ್ದನು.

ಹೊರಬರುತ್ತ ಚಂದಪ್ಪ, "ರಂಗಮ್ಮನೋರೆ, ನೀವೇ ಒಳಗೆ ಹೋಗಿ 'ಪ್ಲೇಟ್'ನಲ್ಲಿ ಬಡಿಸ್ಬೇಕಂತೆ. ಅವರಿಗೀಗ ಅದನ್ನೆಲ್ಲಾ ಮಾಡಿಕೊಂಡು ಕೂಡ್ಲಿಕ್ಕೆ ಸಮಯವಿಲ್ಲಾಂತೆ." ಇದನ್ನು ಕೇಳಿದ ರಂಗಮ್ಮನಿಗೆ ಕಟುಕರಾರೊ ತನ್ನ ಕುತ್ತಿಗೆ ಕುಯ್ಯುತ್ತಿರುವಂತೆ ಭಾಸವಾಯಿತು. ಅದರೊಂದಿಗೆ, 'ದೇವಾ! ನನಗೇಕೆ ಈ ರೂಪವನ್ನಿತ್ತೆ? ನನ್ನದೊಂದು ಇಚ್ಛೆ ನೆರವೇರುವ ತನಕ ಈ ಜೀವ ಉಳಿಸಿದರೆ ಸಾಕು; ನನಗೆ ಈ ರೂಪ ಅಗತ್ಯವಿಲ್ಲ—ಬೇಕಿಲ್ಲ!' ಎಂದು ಮನದೊಳಗೆ ಅಂದುಕೊಂಡು ಒಳಗೆ ಪ್ರವೇಶಿಸಿದಳು.

"ಏಕೆ, ಇಷ್ಟು ಹೊತ್ತು? ನನಗಿಂತ ಕೆಳಗಿನ ಉದ್ಯೋಗಸ್ಥರು ಊಟ ಮಾಡಿ ಕರಗಿಸಿದ್ದಾರೆ. ಹೊತ್ತೇಕೆ?"

ರಂಗಮ್ಮ ಹೇಳುವುದೇನೆಂದರಿಯದೆ ಸ್ತಬ್ಧಳಾದಳು; ಆದರೆ ಕೇಳಿದ ಪ್ರಶ್ನೆಗೆ ಉತ್ತರ ಕೊಡಲೇಬೇಕಷ್ಟೆ. ದೊಡ್ಡ ಮನುಷ್ಯರು, ಅಲ್ಲದೆ ಆಫೀಸರರು, ಅವರಲ್ಲೂ ಕಲೆಕ್ಟರರು. 'ಏನೆಂದು ಉತ್ತರ?' ಎಂಬ ಪ್ರಶ್ನೆ ರಂಗಮ್ಮನನ್ನು ಬಹುವಾಗಿ ಕಾಡಿತು. ಒಂದು ನಿರ್ಧಾರಕ್ಕೆ ಬಂದು ಅಂದಳು:

"ತಪ್ಪಾಯ್ತು! ಸ್ವಲ್ಪ ಬರಲಿಕ್ಕೆ ತಡವಾಯ್ತು. ಬೇರೆ ಸ್ವಲ್ಪ ಕೆ....ಲಸ ಇ....ತ್ತು."

" ಇದಕ್ಕಿಂತಲೂ ದೊಡ್ಡ ಕೆಲಸವೆ ? ಹೂಂ ! ಬಡಿಸು."

ರಂಗಮ್ಮ ಬಡಿಸಿದಳು. ದಿನಾಲು ತಂದುದರ ಅರ್ಧವನ್ನು ಉಂಡು ಶೇಷ ವನ್ನು ಹಿಂದೆ ಕಳಿಸುವವನಿಂದು ಹಸಿವಿಲ್ಲದೆ ಇದ್ದರೂ, ಬಹಳ ಕೆಲಸವಿದ್ದರೂ ಹಸಿವಿನ ಬಾಧೆ ತಡೆಯಲಾರದವನಂತೆ ತಂದುದೆಲ್ಲವನ್ನೂ ತಿಂದು ತೇಗಿದನು.

ತೇಜಪಾಲ ಉಣಲು ದೀರ್ಘಕಾಲ ತೆಗೆದುಕೊಂಡರೂ ರಂಗಮ್ಮನ ದುಂಡು ರೂಪದ ಸೌಂದರ್ಯವನ್ನು ಓರೆನೋಟದಿಂದ ನೋಡಿ, ದೊರೆತ ಆನಂದದಿಂದ ಅಂದಿನ ಮನಸ್ಸನ್ನು ಸಂತುಷ್ಟಪಡಿಸಿಕೊಂಡನು. ಆ ವರೆಗಿನ ಸಮಯವನ್ನು ಕಳೆಯಬೇಕಾದರೆ ರಂಗಮ್ಮನಿಗೆ ಜೀವಕ್ಕೆ ಬಂತಾದರೂ ಅಲ್ಲಿಂದ ಬಿಡುಗಡೆಯಾದಾಕ್ಷಣ ಅಂದಿನ ಕಂಟಕದಿಂದ ಪಾರಾಗಿಸಿದ ದೇವರನ್ನು ಒಮ್ಮೆ ಸ್ಮರಿಸಿಕೊಂಡಳು.

ಕೆಲವು ಮನುಷ್ಯರಿಗೆ ಆಸೆಯಾಯಿತೆಂದರೆ ಅದು ಆಗಲೇ ಬೇಕು. ಅದ ಕ್ಕಾಗಿ ಏನು ಮಾಡಲೂ ಅವರು ಸಿದ್ಧರು. ತಮ್ಮ ಒಂದು ಆಸೆಯನ್ನು ಪೂರೈಸುವುದಕ್ಕಾಗಿ ಏನು ಬೇಕಾದರೂ ಮಾಡುವರು. ಅದರಿಂದ ಯಾರು ಎಷ್ಟು ನೊಂದುಕೊಂಡರೂ ಅವರಿಗೆ ಅದರ ಪರವೆಯಿಲ್ಲ.

*　　*　　*　　*

ಜಮೀನ್ದಾರ್ ಮಧುನಾಥರಾಯರು ಬೆಳಗಿನ ಉಪಾಹಾರವನ್ನು ತೀರಿಸಿ ಕೊಂಡು ಕುರ್ಚಿಯಲ್ಲಿ ಕುಳಿತು ಕಾಲುಗಳನ್ನು ಮೇಜಿನ ಮೇಲಿರಿಸಿ ಧೂಮ್ರ ಪಾನ ಮಾಡುತ್ತಿದ್ದರು. ಟಪ್ಪಾಲು ಪೇದೆ " ಸ್ವಾಮಿ, ಕಾಗದ " ಎಂದಾಗ ಎದ್ದು ಪತ್ರವನ್ನು ತೆಗೆದುಕೊಂಡು ಒಂದನ್ನು ಬಿಡಿಸಿ ನೋಡಿದರು. ಮಾಧವ ರಾಯರಿಂದ ಬಂದಿತ್ತು. ಅದರಲ್ಲಿ,

" ಮಧುನಾಥರಾಯರಿಗೆ ಅನೇಕ ನಮಸ್ಕಾರಗಳು—ಎಲ್ಲ ಭಾಗ್ಯ ಬೇಕು ಅನ್ನುವುದು ಸುಳ್ಳಲ್ಲ. ತಮ್ಮ ಪತ್ರ ಬರುವುದಕ್ಕೆ ಒಂದು ತಿಂಗಳು ಮುನ್ನ ನಮ್ಮ ಪುತ್ರಿ ತುಳಸಿಯನ್ನು ಮದ್ರಾಸಿನ ಸುಬ್ಬರಾಯರ ಅಳಿ ಯನ ಸಹೋದರ ಮಧುಕರರಾಯನಿಗೆ ವಿವಾಹ ಮಾಡಿ ಕೊಡುವುದಾಗಿ ನಿಶ್ಚಯಿಸಿ ಆಗಿದೆ. ತಮ್ಮಂತಹವರ ಸಂಬಂಧ ಬೆಳೆಸುವ ಅದೃಷ್ಟ ನಮ ಗೆಲ್ಲಿಯದು ?...."

ಎಂದು ಸಂಕ್ಷಿಪ್ತವಾಗಿ ಬರೆದಿದ್ದಿತು. ಇದನ್ನು ಓದುವಾಗ ಉಳಿದಿನ್ನೊಂದು

ಪತ್ರವನ್ನು ಬಿಡಿಸಿ ಓದಲು ಆಗಲಿಲ್ಲ. ಅವರಿಗೆ ಅದನ್ನು ನೋಡುವುದೇ ಬೇಡ ವಾಯಿತು.

ಮೇಲೋಗರಕ್ಕೆ ಕಾಯಿ ಒಡೆದಾಗಲು ಪದ್ಮಮ್ಮ ಹೆರುಮಣೆ ಮಡಿ ಸಿಟ್ಟು, "ಏನಂತೆ? ಶುಭವೊ ಅಶುಭವೊ?" ಎಂದು ಬೇಕೊ ಬೇಡವೊ ಎಂಬಂತೆ ಸ್ವಲ್ಪ ಮುಗುಳು ನಗುತ್ತಾ ಗಂಡನೆಡೆಗೆ ಬಂದರು. ಪದ್ಮಮ್ಮನಿಗೆ ಅಕ್ಷರಜ್ಞಾನವಿಲ್ಲದ್ದರಿಂದ ರಾಯರು ಪತ್ರವನ್ನು ಮತ್ತೊಮ್ಮೆ ಓದಲೇಬೇಕಾ ಯಿತು. ಅರ್ಧಾಂಗಿಯ ಆಗ್ರಹದ ಮೇರೆಗೆ ಇನ್ನೊಂದನ್ನೂ ಒಡೆದು ಓದಿದ್ದಾ ಯಿತು. ಅದು ಮದುವೆಯ ಆಮಂತ್ರಣ ಪತ್ರ.

ಸ್ವಾಗತ ಪತ್ರವನ್ನು ಕಂಡಾಕ್ಷಣ ಪದ್ಮಮ್ಮ ಎಲ್ಲವನ್ನೂ ಮರೆತು, "ಏನು? ಯಾರಾದ್ರೂ ಹೋಗೋದು ಬೇಡ್ವೆ?" ಎಂದುದನ್ನು ಕೇಳಿದಾಗ, "ಹೋಗು!" ಎಂದರು ಮಥುರಾನಾಥರು. ಅದರಲ್ಲಿ ಸಿಟ್ಟಿನ ಗುರುತು ಕಂಡ ಪದ್ಮಮ್ಮ ಮೌನದಿಂದ ಒಳಸೇರಿದರು.

ಇದೂ ಒಂದು ವಿಪರೀತ! ತಾವು ಕೈಹಾಕಿದ ಕಾರ್ಯಕ್ಕೆ ಯಾವುದಾ ದರೂ ತೊಡಕುಂಟಾದರೆ ಅದರ ಮೇಲಿನ ಸಿಟ್ಟನ್ನು ತಮ್ಮ ಹೆಂಡಿರ ಮೇಲೆ ತೆಗೆದು ಸಂತುಷ್ಟರಾಗುವುದು ಕೆಲವು ಗಂಡಸರ ವಾಡಿಕೆ. ಲೌಕಿಕವರಿತ ಸತಿ ಯಾದರೆ ಸಮಯ ಸಂದರ್ಭವರಿತು ಪದ್ಮಮ್ಮನಂತೆ ನಿಂತಲ್ಲಿ ನಿಲ್ಲದೆ ಹೋಗಿ ಬಿಡುವಳು. ಅರಿಯದವಳಾದರೆ! ಅಲ್ಲಿ ದೀಪ ಬೇರೆ ಅನಗತ್ಯ! ಆದರೆ ಅಂಥ ಹೆಂಡಂದಿರ ಗಂಡಂದಿರು ಹೆಚ್ಚಾಗಿ ಪತ್ನೀದಾಸರಾಗಿಯೆ ಇರುವರು.

* * * *

ರಂಗಮ್ಮ ಪಾರಮ್ಮನಿಗೆ ಬಡಿಸಿ ತಾನೂ ಊಟ ಮಾಡಿದಳು. ಪಾರಮ್ಮ ನಿಗೆ ಜೊಂಪು ಹತ್ತಿತು. ರಂಗಮ್ಮ ಮಲಗಿದ್ದವಳು ಎದ್ದು ಮೊಣಕಾಲಿಗೆ ಕೈಕಟ್ಟಿ ಗೋಡೆಗೆ ಬೆನ್ನು ಕೊಟ್ಟು ಒರಗಿ ಕುಳಿತಿದ್ದಳು. ಮನಸ್ಸಿನಲ್ಲಿ ದೇವರ ಧ್ಯಾನ ಮಾಡುತ್ತಿರುವಳೆಂದು ಅವಳ ಮುಖಭಾವ ಹೇಳುತ್ತಿದ್ದಿತು. ಕಣ್ಣು ಗಳಲ್ಲಿ ನೀರು ತುಂಬಿತ್ತು. ಯಾವುದೋ ಮನೋರಥವನ್ನು ಈಡೇರಿಸುವಂತೆ ಭಗವಂತನಲ್ಲಿ ಮನದೊಳಗೇ ಪ್ರಾರ್ಥಿಸಿಕೊಳ್ಳುತ್ತಿದ್ದಳೆಂಬಂತಿತ್ತು. ಎಂಥ ಕಟುಕನಾದರೂ ಒಮ್ಮೆಗೆ ಮನ ಕರಗುವಂತಿತ್ತು ಆಗಿನ ಅವಳ ಜೀವನದ ಸ್ಥಿತಿ; ಆದರೆ ಅವಳಿಗೆ ಅದರಲ್ಲಿ ಒಂದಿಷ್ಟೂ ಶೋಕವಿಲ್ಲ. ಯಾವದೋ ವೇದನೆ

ಅವಳಲ್ಲಿ ಹುದುಗಿಕೊಂಡಿದ್ದು ಅವಳ ಹೃದಯವನ್ನು ಕೊರೆಯುತ್ತಿತ್ತೋ ಯಾರು ಬಲ್ಲರು? ಅವಳ ಅಂತರ್ಯ ದೇವತೆಯೂ ಅವಳೂ ಮಾತ್ರವೆ ಅದನ್ನು ತಿಳಿಯಲು ಸಮರ್ಥರು. ಮಧ್ಯಾಹ್ನವಾಗುತ್ತಿದೆ, ಅದು ಕಳೆದು ಸಂಜೆಯಾಗುತ್ತಿದೆ, ರಾತ್ರಿ ಬರುತ್ತಿದೆ, ಮತ್ತೆ ಬೆಳಗಾಗುತ್ತಿದೆ. ಹೀಗೆ ಪ್ರಪಂಚ ಎಡೆಬಿಡದೆ ಮುನ್ನಡೆಯುತ್ತಿದೆ. ಅದರೊಂದಿಗೆ ರಂಗಮ್ಮನ ಜೀವನವೂ ಸಾಗುತ್ತಿದೆ. ನೆಲೆಯಿಲ್ಲ—ಗುರಿಯಿಲ್ಲ!

* * * *

ಪದ್ಮಮ್ಮ, "ನೀನು ನೋಡ್ಲಿಲ್ವೆ ಪತ್ರಾನ?" ಎಂದು ತೇಜಪಾಲನಿಗೆ ಪ್ರಶ್ನೆ ಹಾಕಿದಳು. ಅವನು ರೇಡಿಯೋದಿಂದ ಹೊರಡುತ್ತಿದ್ದ ಆಂಗ್ಲ ಗಾನವನ್ನು ಆಲಿಸಿ ಆನಂದಿಸುತ್ತಿದ್ದಾಗ, "ಇಲ್ಲ" ಎಂಬ ಉತ್ತರ ತಮ್ಮನ ಬಾಯಿಂದ ಅಕ್ಕನ ಕಿವಿಗೆ ತಲಪಿತು. "ಆ ಹುಡ್ಗೀಗೆ ಬೇರೆ ನಿಶ್ಚಯ ಮಾಡಿ ಆಗಬಿಟ್ಟಿ ತಂತೆ. ಮುಂದಿನ ವಾರ ಮದ್ವೇಂತೆ" ಎಂದು ಪದ್ಮಮ್ಮ ಹೇಳಿದ್ದನ್ನು ಕೇಳಿ ತೇಜಪಾಲನು, "**Never mind**" ಎಂದು ರೇಡಿಯೋದ ಕಡೆಗೆ ಗಮನ ಕೊಟ್ಟ.

ಪದ್ಮಮ್ಮ, "ಏನಪ್ಪ, ನಾನು ನಿನ್ನ ಸ್ನೇಹಿತೆ ಮಿಸ್ಟರ್ ಲಿಂಡ್ ಅಂತ ಭಾವಿಸಿದಿಯೇನು? ನಮ್ಗೆಲ್ಲ ಇಂಗ್ಲಿಷ್ ಬರೋಲ್ಲಾಪ್ಪ; ನಮ್ಮುಂದೇಕಪ್ಪ ನಿನ್ನ ಇಂಗ್ಲಿಷಿನ ಪ್ರಭಾವ ತೋರಿಸ್ತಿ?" ಎಂದು ತಮ್ಮನ ಆಂಗ್ಲ ಶಬ್ದದ ಅರ್ಥವರಿಯದೆ ಅಂದಳು.

ಅಕ್ಕನು ಸ್ತ್ರೀಲಿಂಗವನ್ನು ಪುಲ್ಲಿಂಗ ಮಾಡಿದ್ದಕ್ಕಾಗಿ ತೇಜಪಾಲನಿಗೆ ಹಿಡಿಸಲಾರದಷ್ಟು ನಗು ಬಂದು "ಮಿಸ್ಟರ್ ಲಿಂಡ್ ಅಲ್ಲ ಅಕ್ಕಾ, ಮಿಸ್ ಲಿಂಡ್, ಮಿಸ್!" ಎಂದನು.

## ೧೨

ಅನಂತ ರಮಾನಂದ ಆರೋಗ್ಯಾಶ್ರಮದ ತೋಟದ ದಾರಿಯಾಗಿ ಸಾವಧಾನವಾಗಿ ಹೋಗುತ್ತಿದ್ದನು. ತೆಳ್ಳಗೆ ತಿಳಿಯಾದ ಧೋತರವುಟ್ಟು, ಕಾಲಿಗೆ ಚಪ್ಪಲಿ, ತೊಟ್ಟಿದ್ದುದು ಬಿಳಿಯ ಶುಭ್ರವಾದ ಅಂಗಿ. ಅಂಗಿಯ ಕೈಯನ್ನು ಕೈಗುಬ್ಬಿಯಿಂದ ಜೋಡಿಸದೆ ಮೊಣಕೈಗೆ ಸಮನಾಗಿ ಮಡಿಸಿಟ್ಟಿದ್ದನು.

ತಲೆಗೂದಲನ್ನು ಎಂಗಡಿಸಿ ಬಾಚದೆ ಸಾಧಾರಣ ರೀತಿಯಲ್ಲಿ ಬರಿ ಹಿಂದಕ್ಕೆ ಬಾಚಿದ್ದನು. ಕೈಯ ಮಣಿಕಟ್ಟಿನಲ್ಲಿ ಚಿಕ್ಕ ಬಂಗಾರದ ಕೈಗಡಿಯಾರ ಶೋಭಿಸುತ್ತಿದ್ದಿತು. ಮೈಬಣ್ಣ ಸುಣ್ಣ ಹಚ್ಚಿ ಸುಲಿದಂತಿರದೆ ಸಂಧ್ಯಾದೇವಿಯ ವರ್ಣಕ್ಕೆ ಸರಿಹೋಲುತ್ತಿದ್ದಿತು. ಬೆರಳುಗಳಿಗೆ ಒಂದೆರಡು ಉಂಗುರಗಳು. ತೆಳ್ಳಗಿನ ಮೈಕಟ್ಟು. ಇತರ ತರುಣರಂತೆ ಮಾರ್ಗದಲ್ಲಿ ನಡೆಯುವಾಗ ನೂರು ಕಡೆ ದಿಟ್ಟಿ ಚೆದರಿಸದೆ ಏಕೈಕ ಚಿತ್ತನಾಗಿ ಮುಂದಕ್ಕೆ ಒಂದೇ ದೃಷ್ಟಿಯಿಟ್ಟು ನಡೆಯುತ್ತಿದ್ದನು. ಅದೆಷ್ಟು ದೊಡ್ಡ ಪತಿವ್ರತೆಯರೆ ಆಗಲಿ ಅಥವಾ ಮರ್ಯಾದಸ್ಥ ಯುವತಿಯರೆ ಆಗಲಿ ಒಮ್ಮೆಯಾದರೂ ತಮ್ಮ ದೃಷ್ಟಿಯನ್ನು ಅವನೆಡೆ ಹೊರಳಿಸದೆ ಹೋಗುತ್ತಿರಲಿಲ್ಲ.

ಸಂಜೆಯ ಸಮಯ, ನಸುಗತ್ತಲು ಸುತ್ತಲೂ ಕವಿದಿತ್ತು. ಮನೆಮನೆಯಲ್ಲೂ ದೀಪ ಹಚ್ಚುತ್ತಿದ್ದರು. ಮುತ್ತೈದೆಯರು ತುಳಸಿಗೂ ದೇವರಿಗೂ ದೀಪವಿಡುತ್ತಿದ್ದರು. ಚಿಕ್ಕ ಮಕ್ಕಳ ಆಟ ಕೊನೆಗಂಡು ಪಾಠಕ್ಕೆ ಮೊದಲಾಗಿತ್ತು; ರಾಗಕ್ಕೇನೂ ಕಡಿಮೆಯಿರಲಿಲ್ಲ.

ಅನಂತ ವೃಂದಾವನಕ್ಕೆ ತಲಪಿದ್ದನು. ಆದರೆ ದೂರದಲ್ಲಿ ನಿಂತುಕೊಂಡು ವಿಜಯೆಗೆ ಕಲ್ಲು ಬೀಸಿ ಹೆದರಿಸಬೇಕೆಂದು ಬಯಸಿದ.

ವಿಜಯ ಹೂಗಳನ್ನು ಅವಸರವಸರವಾಗಿ ಕೊಯ್ಯುತ್ತಿದ್ದಳು. ಚಿನ್ನದ ಬಳೆಗಳು ಕಿಣಿಕಿಣಿ ಸದ್ದು ಮಾಡುತ್ತಿದ್ದವು. ಅರಳೀ ಮರದ ಮರೆಯಿಂದ ಅವಳು ದೂರದಲ್ಲಿದ್ದ ಅನಂತನಿಗೆ ಸ್ವಲ್ಪ ಸ್ವಲ್ಪ ಕಾಣುತ್ತಿದ್ದಳು. ಅನಂತ ಒಂದು ಚಿಕ್ಕ ಕಲ್ಲನ್ನು ಬೀಸಿದ. ವಿಜಯಳಿಗೆ ತುಸು ನೋವೂ ಆಯಿತು. ಅನಂತನೇ ಇರಬಹುದೆಂದು ತಿಳಿದು "ಹಾಯ್!" ಎಂದು ಚೀರಿ ಅಲ್ಲೇ ಮರೆಯಾದಳು. ಮತ್ತೆ ಚಿಕ್ಕ ಚಿಕ್ಕ ಕಲ್ಲುಗಳು ಬರುತ್ತಿದ್ದವು. ವಿಜಯೆಗೆ ಸ್ವಲ್ಪ ನೋವಾದಂತೆ, ಸಿಟ್ಟು ಬಂದು, ತಡೆಯಲಾಗಲಿಲ್ಲ. ಅನಂತನಿರಬಹುದೆಂಬ ಊಹೆಯೂ ಹೋಯ್ತು. ಯಾರೇ ಇರಲಿ, ಎಂದು ಭಾವಿಸಿ, ಅವಳು ಮಣ್ಣು ಸಮೇತವಾಗಿ ಒಂದೊಂದು ಹಿಡಿಗಲ್ಲುಗಳನ್ನೆ ಬೀಸಿದಳು. ಅನಂತ ಅವಳ ಹಿಂದಿನಿಂದ ಬಂದು ಕೈ ಹಿಡಿಯುವುದೇ ತಡ, ವಿಜಯ ಹಿಂತಿರುಗಿ ನೋಡಿ, "ಅಯ್ಯೊ! ನೀವೇ? ಇಷ್ಟು ಹೊತ್ತು ಈ ಪೋಕ್ರಿತನ ಮಾಡುತ್ತಿದ್ದುದು? ಚೆನ್ನಾಯ್ತು!" ಎಂದಳು.

" ಅದಿರಲಿ........"

" ಏನದಿರಲಿ! ಈ ರೀತಿ ಹೆಂಗಸರ ಮೇಲೆ ಕಲ್ಲೆಸೆದು ಅತ್ಯಾಚಾರ ಮಾಡುವ ಗಂಡಸರಿಗೆ ತಕ್ಕ ದಂಡನೆಯಾಗಲೇ ಬೇಕು!"

" ಆಗಲಿ. ಯಾವ ಶಿಕ್ಷೆ?"

" ಇನ್ನು ಮುಂದೆ ಈ ರಮಾನಂದ ಆರೋಗ್ಯಾಶ್ರಮದ ತೋಟಕ್ಕೆ ಬರ ಬಾರದು!"

" ಗಂಡಸರಾರೂ ಬರಬಾರದೆ? ನಾನು ಮಾತ್ರ....?"

" ಅದು ಗೊತ್ತಿಲ್ಲ!"

" ಸರಿ, ಸರಿ. ವ್ಯಂಗ್ಯ ಸಾಕು. ಹೊತ್ತು ಮೀರಿಲ್ಲ. ಕಡಲ ಕಡೆಗೆ ಹೋಗೋಣವೆ?"

" ಏಕೆ? ಇಲ್ಲೇನಾಗಿದೆ?"

" ಇಲ್ಲ ವಿಜಯು, ಅಲ್ಲಿಗೇ ಹೋಗೋಣ."

" ಊಹುಂ! ನಾ ಬರಲಾರೆ."

" ಬರೆಲಾರೆಯಾ?"

" ಬರಲಾರೆನೆಂದು ಒಮ್ಮೆ ಅಂದೆನಲ್ಲವೆ? ಕಾಡುವಿರೇಕೆ?"

" ಸರಿ. ಹಾಗಾದರೆ ನಾನು ಬರ್ತೇನೆ, ನಮುಸ್ಕಾರ!"

" ಅಂಹಾಂ! ನಿಲ್ಲಿ...."

" ಏಕೆ ನಿಲ್ಬೇಕು? ಒಮ್ಮೆ ಅಂದೆನಲ್ಲವೆ ನಾನು ಬರ್ತೇನೆಂದು. ಕಾಡುವಿ ಯೇಕೆ?"

ವಿಜಯ ಈ ಮಾತಿಗೆ ತಲೆ ತಗ್ಗಿಸಿದಳು. ಹನಿಯೊಂದು ಉದುರಿದುದನ್ನು ನೋಡಿದ ಅನಂತನಿಗೆ ತಡೆಯಲಾಗಲಿಲ್ಲ, ಹಿಂದಿನಿಂದ ಬಂದು ಅವಳೆರಡು ತೋಳುಗಳನ್ನೂ ತನ್ನ ಮೃದು ಹಸ್ತಗಳಿಂದ ಹಿಡಿದು, " ವಿಜಯಾ! ಇಷ್ಟು ಬೇಗನೆ ಕೋಪಿಸಿಕೊಂಡೆಯಾ? ಅದೇಕೆ ಕಣ್ಣಲ್ಲಿ...." ಎಂದಾಗ, " ನಾನು ಕೋಪಿಸಿಕೊಂಡೆನೆ? ನೀವೇ...." ಎಂದು ವಿಜಯ ಕಣ್ಣುಗಳಲ್ಲಿ ನೀರು ತುಂಬಿದ್ದರೂ ಮುಖವೆತ್ತಿ ಅನಂತನನ್ನು ನೋಡಿ ನಕ್ಕಳು. " ಹಾಗಾದರೆ ಇದು ಪ್ರೇಮ ಪ್ರವಾಹವೆ?" ಎನ್ನುತ್ತ ತನ್ನ ಜೇಬಿನಿಂದ ಕರವಸ್ತ್ರವನ್ನು ತೆಗೆದು ಅವಳ ವಿಲೋಚನಗಳನ್ನು ಕೋಮಲವಾಗಿ ಒರಸಿದನು.

ಅನಂತ–ವಿಜಯ ಇಬ್ಬರೂ ಕಡಲಕರೆಯಲ್ಲಿ ಕುಳಿತಿದ್ದಾರೆ. ತೋಳ್ಸೆರೆಯಲ್ಲಿ ಅದಾವುದೋ ಒಂದು ಸುಖವನ್ನು ಅನುಭವಿಸುತ್ತಿದ್ದಾರೆ. ಸುಳಿಗಾಳಿ ತೀಡಿ ತೀಡಿ ಬೀಸುತ್ತಿದೆ. ಬೀಸಿ ಅವರ ಮನೋಲ್ಲಾಸವನ್ನು ಇಮ್ಮಡಿಸುತ್ತಿದೆ. ಅನಂತನು ಅಕಾಸ್ಮಾತ್ತಾಗಿ ವಿಜಯಳ ನಡು ಬೆರಳಲ್ಲಿನ ಉಂಗುರವನ್ನು ನೋಡಿ,

" ವಿಜಯಾ ? " ಎಂದ.

" ಆಂ ! "

" ಆ.... ಉಂಗುರವೆಲ್ಲಿಂದ ? "

" ಏಕೆ ? ನಾನು ಉಂಗುರ ಇಟ್ಟುಕೊಳ್ಳಬಾರದೆ ? "

" ಅದೇಕೆ, ನೀನಿಂದು ನಾನು ಆಡಿದ್ದಕ್ಕೆಲ್ಲಾ ಗೋಡೆ ಕಟ್ಟುವೆ ? "

" ಇಲ್ಲ, ಇಲ್ಲ! ಕ್ಷಮಿಸಿ. ಇಂದು ಬೆಳಿಗ್ಗೆ ನಿಮ್ಮ ತಂದೆಯವರು ಆಶ್ರಮಕ್ಕೆ ಬಂದಿದ್ದರು. ನನ್ನನ್ನೊಮ್ಮೆ ಚೆನ್ನಾಗಿ ನೋಡಿದರು; ಆಮೇಲೆ ಸಮೀಪಕ್ಕೆ ಕರೆದು ಅಲ್ಲೇ ಬೆಂಚಿನ ಮೇಲೆ ಕೂಡಲು ಹೇಳಿದರು. ತರುವಾಯ ತಮ್ಮ ಕಿಸೆಯೊಳಗಿಂದ ಚೀಲವನ್ನು ತೆಗೆದು ಅದರಲ್ಲಿದ್ದ ಈ ಉಂಗುರವನ್ನು ತೆಗೆದು ನನ್ನ ಕೈಗೆ ಕೊಡದೆ ರಮಾನಂದರನ್ನು ಕರೆದು ಅವರ ಕೈಗಿತ್ತರು. ರಮಾನಂದರು ನನ್ನ ಕೈಗೆ ತೊಡಿಸಿದರು."

" ಮತ್ತೇನೂ ಹೇಳಲಿಲ್ಲವೆ ? "

" ಇಲ್ಲ—ಮರೆತೆ—' ಇದು ನಿನ್ನ ಗುರುತು ! ' ಅಂದರು."

" ಏಕೆಂದು ಕೇಳಲಿಲ್ಲವೆ, ನೀನು ? "

" ಏಕೆ ಕೇಳಬೇಕು ? ಇದರಲ್ಲಿ ' ವಿ ' ಇದೆ. ' ವಿ ' ಅಂದರೆ ವಿಜಯ ! —ಎಂದಾಗುವುದಿಲ್ಲವೆ ? ಮತ್ತೆ, ಅದರಲ್ಲಿ ಕೇಳುವುದೇನು ? "

" ಆ ಉಂಗುರವನ್ನು ನನಗೆ ಕೊಡುತ್ತೀಯಾ ? "

" ತೆಗೆದುಕೊಳ್ಳಬಾರದೆ ? ನಾನೊಬ್ಬಳು ಆಶ್ರಮದ ಹುಡುಗಿ, ಅನಾಥೆ. ಪ್ರಪಂಚವೆ ನನ್ನ ಬಂಧು-ಬಳಗ—ಎಲ್ಲಾ ! ಅಂದಮೇಲೆ ನನಗೇಕೆ ಈ ಒಡವೆ ?—ಆದರೆ.... ಕೊಟ್ಟವರು ಕೇಳಿದರೆ ?...."

" ಸರಿ. ಹಾಗಾದರೆ ನಿನಗೆ ಬುದ್ಧಿ ಇದೆ ಎಂದಾಯಿತು. ಜೋಕೆಯಾಗಿಟ್ಟುಕೊ ! "

" ನೋಡಿದಿರಾ ? ನಿಮ್ಮ ತಂದೆಯ ಸೊತ್ತಾದ ಕಾರಣ ಜೋಕೆಯಾಗಿಟ್ಟುಕೊ ಎಂದಿರಿ. ನನ್ನದಾಗಿರುತ್ತಿದ್ದರೆ........? ಅವರವರದ್ದಕ್ಕೆ ಅಷ್ಟು ಎಚ್ಚರಿಕೆ !...."

" ಅದು ಬಿಡು. ಇಂದು ನಾನೊಂದು ಹೊಸ ವಿಷಯವನ್ನು ನಿನ್ನೊಡನೆ ಯೋಚಿಸಬೇಕೆಂದಿದ್ದೇನೆ. ಕೇಳಲೆ ? "

" ಧಾರಾಳವಾಗಿ ! "

" ನೀನು ಯಾತಕ್ಕಾಗಿ—ಅಲ್ಲ—ಯಾರಿಗಾಗಿ ಜೀವಿಸುತ್ತಿರುವೆ ? "

" ಪರಮಾತ್ಮನು ' ಆತ್ಮ 'ನೆಂಬ ಪರೋಕ್ಷ ವಸ್ತುವೊಂದನ್ನು ಅಂದರೆ, ಪ್ರಪಂಚದ ಪ್ರಾಣಿಗಳ ದೃಷ್ಟಿಗಗೋಚರವಾದ ಅಮೂಲ್ಯವಾದ ಪ್ರಾಣವಾಯುವನ್ನು, ಎಲುವು ಮರಮುಟ್ಟುಗಳಿಂದೊಂದು ಗೂಡನ್ನು ನಿರ್ಮಿಸಿ, ಅದಕ್ಕೆ ಅಪಾಯ ತಟ್ಟದಂತೆ ಮಾಂಸದ ಗೋಡೆಯನ್ನು ಕಟ್ಟಿ, ನರಗಳಿಂದೊಡಗೂಡಿದ ಚರ್ಮದ ಹೊದಿಕೆಯಿಂದ ಬಿಗಿದು ಅದರೊಳಗೆ ನಿಲ್ಲಿಸಿದ್ದಾನೆ. ನಿಶ್ಚಿತ ಸಮಯದಲ್ಲಿ ಆತನು ಅದನ್ನು ತನ್ನ ವಶಕ್ಕೆ ತೆಗೆದುಕೊಳ್ಳುವನು. ಅಲ್ಲಿಯವರೆಗೆ ಪ್ರತಿಯೊಬ್ಬ ಮಾನವ ಪ್ರಾಣಿಯೂ ತನ್ನ ದೇಹವನ್ನು ಕಾಪಾಡಿಕೊಳ್ಳುವುದು ಅವನ ಕರ್ಮ ಅಥವಾ ಅವನ ಕರ್ತವ್ಯವಾಗಿದೆ. ವೃಥಾ ಶೋಕವನ್ನು ತಂದುಕೊಂಡು, ಸದಾ ಕೊರಗುತ್ತಿದ್ದು, ಆರೋಗ್ಯವನ್ನು ಕೆಡಿಸಿಕೊಂಡು, ಅನಿಶ್ಚಿತ ಸಮಯದಲ್ಲಿ ಜೀವವನ್ನು ಕಳೆದುಕೊಂಡು, ನರಕಯಾತನೆಯನ್ನು ಅನುಭವಿಸುವುದು ಮಾನವನ ತಿಳಿಗೇಡಿತನ. ಆದುದರಿಂದ ಪರಮಾತ್ಮನಿಂದ ನಿರೂಪಿತವಾದ ನನ್ನ ಕರ್ಮಾನುಸಾರವಾಗಿ ನಾನು ಜೀವಿಸಬೇಕಾಗಿದೆ. ಪ್ರಾಣಪಕ್ಷಿಯನ್ನು ಆತನು ಎಂದು ತನ್ನೆಡೆಗೆ ಬರಮಾಡಿಕೊಳ್ಳುವನೋ ಅಂದಿನ ತನಕ ನಾನು ಈ ದೇಹವನ್ನು ಕಾಪಾಡಬೇಕಾಗಿದೆ. ಈಗ ತಮಗೆ ನಾನು ಯಾತಕ್ಕಾಗಿ ಜೀವಿಸಿರುವೆನೆಂದು ತಿಳಿಯಿತಷ್ಟೆ. ಮತ್ತು ' ಯಾರಿಗಾಗಿ' ಎಂದು ಕೇಳಿದಿರಲ್ಲವೆ ? ಜಗತ್ತಿನಲ್ಲಿ ಮನುಷ್ಯ ಅಥವಾ ಯಾವ ಜೀವಿಯೆ ಆಗಲಿ, ಒಂದು ಜೀವಿಗಾಗಿ ಇನ್ನೊಂದು ಜೀವಿ ಬದುಕುವುದು ಅಸಾಧ್ಯ ! ಮತ್ತು ಬದುಕುವುದು—ಅದು ಜಗನ್ನಾಯಕನ ಮಹೇಚ್ಛೆ !

" ಸಾಯುವುದು ಸಾಧ್ಯವಿದೆಯೆ ? "

" ಇದೆ ; ಆದರೆ ನರಕಯಾತನೆ ತಪ್ಪಿದ್ದಲ್ಲವೆಂಬುದನ್ನು ಮಾತ್ರ ಮರೆಯಲಾಗದು."

" ಹಾಗಾದರೆ, ನೀನು ನನಗಾಗಿ ಜೀವಿಸುವುದಿಲ್ಲವೆಂತಾಯಿತು ? "

" ಸಂದೇಹವೇನು ?—ಆದರೆ ಒಂದು ಮಾತು. ನೀವು ನನಗಾಗಿ ಜೀವಿಸುವಿರೆ ? "

" ಶಂಕಿಸುವೆಯಾ ? "

" ಅದು ಬರಿಯ ಬಾಯಿಮಾತು ! "

" ಅಲ್ಲ, ವಿಜಯಾ ! ಇದು ನನ್ನ ಹೃದಯದಿಂದ ಬಂದ ಮಾತು ! "

" ಆ....ಹಾಗೆಂದರೆ ? "

" ವಿಜಯಾ ! ನನ್ನ ಮನಸ್ಸು ಸದಾ ನಿನ್ನ ಸಂಗಕ್ಕಾಗಿ ಹಾತೊರೆಯುತ್ತಿದೆ. ನಿನ್ನ ವಿಜಯ ನನಗೆ ದೊರೆಯಬಹುದೆ ? "

" ಇದೇ ತಾನೆ, ನೀವು ನನ್ನೊಂದಿಗೆ ಯೋಚಿಸಬೇಕೆಂದುದು—ಸರಿ ! ಹೊತ್ತು ಮೀರಿತು, ಹೋಗೋಣವೆ ? "

" ನಾಳೆ...."

" ಹೂಂ ! ಇಂದಿನಂತೆ ಕಲ್ಲೆಸೆಯುವುದಾದರೆ ನಾನು ಬರಲಾರೆ."

" ಹಹಹ ! ಇಂದಿನ ಪ್ರಶ್ನೆಗೆ ನಾಳೆ ಸರಿಯಾದ ಉತ್ತರ ದೊರೆಯದಿದ್ದರೆ...."

" ದೊರೆಯದಿದ್ದರೆ ? "

" ನಿನ್ನ ನಾಲಗೆ ಕುಯ್ಯುವೆ ! "

" ಹಾಗಾದರೆ ಈಗಲೇ ಆಗಲಿ, ಆ ಕೆಲಸ—ಕುಯ್ದುಬಿಡಿ ! ನಾಳೆ ಸರಿಯಾದ ಜವಾಬು ತರಲು ಸಾಧ್ಯವಾಗದಿದ್ದರೆ—ಹೇಗೂ ನಾಲಗೆ ಹೋಗುವುದೆಂದಾರೆ ತಡವೇಕೆ ? "

" ಸರಿ, ಸರಿ. ನೀನೀಗ ಹೋಗು—ಪ್ರಕೃತ ನನ್ನಲ್ಲಿ ಕತ್ತಿಯಿಲ್ಲ—ಒಂದು ವೇಳೆ ಇದ್ದರೂ ಅದು ಸರಿಯಾಗದು—ನಾಳೆ ಬರುವಾಗ ನನ್ನ 'ಶೇವಿಂಗ್ ರೇಜರ'ನ್ನೆ ತರುತ್ತೇನೆ."

ಮಾತು ಮುಗಿಸಿ ಅನಂತ–ವಿಜಯರು ಮನೆಯ ದಾರಿ ತುಳಿದರು. ಅನಂತ ಮನೆಯನ್ನು ತಲಪಿ ಕಾಲು ತೊಳೆದುಕೊಂಡು ಒಳಗೆ ಹೋದವನು, ಹಿಂತಿರುಗಿ ಬಾಗಿಲ ಮರೆಗೆ ನಿಂತು ಏನನ್ನೋ ಆಲಿಸುತ್ತಿದ್ದನು. ಒಳಗೆ ತಂದೆ ತಾಯಿ—ಇಬ್ಬರೂ ಏನನ್ನೋ ಮಾತನಾಡುತ್ತಿದ್ದರು. ಅದನ್ನು ಕೇಳುತ್ತಾ ಅವಡು ಕಚ್ಚುತ್ತಿದ್ದ.

" ಅದೇ ಒಳ್ಳೆಯದೆಂದು ತೋರುತ್ತದೆ " ಎನ್ನುತ್ತಾ ಪದ್ಮಮ್ಮ ಬಾಗಿಲು ಸರಿಸಿ ಹೊರಗೆ ಕಾಲಿಡುವಷ್ಟರಲ್ಲಿ ಅನಂತ ಮಾಯವಾಗಿಬಿಟ್ಟಿದ್ದ. " ಹೊತ್ತು ಗಂಟೆ ಎಂಟಾಯ್ತು, ಇನ್ನೂ ಹುಡುಗನನ್ನು ಕಾಣೋದಿಲ್ಲಲ್ಲಾ " ಎಂದು, ಅನಂತನ ಮಲಗುವ ಕೋಣೆ ಹೊಕ್ಕ ಪದ್ಮಮ್ಮ ಮಗ ಮಂಚದ ಮೇಲೆ ಹಾಸಿಗೆ ಬಿಡಿಸದೆ ಹುಲ್ಲಿನ ಹಸೆ ಬಿಡಿಸಿ ಮಲಗಿದ್ದುದನ್ನು ಕಂಡು,

" ಮಗೂ, ಅನಂತೂ ! " ಎಂದರು.

" ಊಂ ! "

" ಏನಣ್ಣಯ್ಯ, ತಲೆ ಸಿಡಿಯುತ್ತೆಯೆ ? "

" ಇಲ್ಲ ! "

" ಮತ್ತೇಕೆ ಮಲಗಿಕೊಂಡೆ ? ಏಳು, ಊಟ ಮುಗಿಸಿಕೊಂಡು ಮಲಗು ! ಹಾಸಿಗೆ ಬಿಡಿಸಿಕೊಡ್ತೇನೆ."

" ಬೇಡ."

" ಎಂಥದ್ದು ಬೇಡ ? "

" ಏನೂ ಬೇಡ—ಎಂಥದ್ದೂ ಬೇಡ ! "

" ಏಕೆ ? "

ಅನಂತನ ಉತ್ತರವಿಲ್ಲ. ಪದ್ಮಮ್ಮನ ಯತ್ನವೆಲ್ಲವೂ ನೀರಿನಲ್ಲಿ ಹೋಮ ಮಾಡಿದಂತಾಯಿತು. ಮಗನ ದುಃಖಕ್ಕೆ ಕಾರಣವೇನು ? ಸಿಟ್ಟಾದರೂ ಏಕೆ ? ...ಎಂಬ ಸಮಸ್ಯೆ ತಾಯಿಯ ಕರುಳನ್ನು ಕೊರೆಯಿತು. ಇದ್ದೊಬ್ಬ ಮಗ ಸುಖವಾಗಿಲ್ಲದಿದ್ದರೆ ಹೆತ್ತ ಕರುಳು ಕರಗದಿರುವುದೆ ? ಸಂಕಟಪಡದಿರುತ್ತದೆಯೆ ? ಬಳಬಳನೆ ಎಲ್ಲರೊಡನೆಯೂ ಮಾತಾಡುತ್ತ ಕೆಲೆಯುತ್ತ ಇದ್ದವನು ಮೌನಮೂರ್ತಿಯಾಗಿರುವನೇಕೆ ? ದುಃಖವೆಂಬುದನ್ನು ಮರೆತು ಸುಖಸಾಗರದಲ್ಲಿ ಮೆರೆಯತೊಡಗಿದಾಗ ಈ ಚಿಂತೆ ಪುನಃ ಬಂದು ಅಡರಿದೆ. ಆದರೆ ಅಂದಿನ ಚಿಂತೆಗೂ ಇಂದಿನ ಚಿಂತೆಗೂ ಅಜಗಜಾಂತರ. ಅದು ಆವರವರೊಳಗಿನ ಮನೋವೇದನೆ—ಇಂದು ಪುತ್ರ ಚಿಂತೆ !—ಸುಖದ ಶೋಧನೆಯಲ್ಲಿ ಸಿಕ್ಕಿ ದಿಕ್ಕುಗೆಟ್ಟಿದ್ದ ಎರಡು ಹೃದಯಗಳು ಒಂದಾಗಿ ಸುಖವನ್ನು ಪಡೆದು ಅದರಿಂದ ಹುಟ್ಟಿದ ಏಕ ಮಾತ್ರ ಎಳೆ ಹೃದಯಕ್ಕಾಗಿ, ಅದರ ಮನೋವೇದನೆಯ ಕಾರಣವೇನೆಂಬುದನ್ನು ತಿಳಿಯಲಾರದೆ ಅದನ್ನು ತಿಳಿದುಕೊಳ್ಳುವುದಕ್ಕಾಗಿ ಪಡುತ್ತಿರುವ ಚಿಂತೆ !—ಇದರ ನಿವಾರಣೆ....?

ಇದು ನಡೆದು ಒಂದು ವಾರ ಸಂದರೂ ಮಥುರಾನಾಥರಿಗೆ ತಿಳಿದಿರಲಿಲ್ಲ. ಇಂದೇ ಅರಿತುದು. ಅನಂತ ದಿನಾಲು ಬೆಳಗಿನ ಉಪಾಹಾರಕ್ಕೆ ನಿಲ್ಲದೆ ಶಾಲೆಗೆ ಹೊರಟುಹೋಗುತ್ತಿದ್ದುದೂ, ಒಮ್ಮೊಮ್ಮೆ ರಾತ್ರಿ ಊಟ ಮಾಡದೆ ಇರುವುದೂ ತಂದೆಗೆ ತಿಳಿದುದು ಈಗ ಮಾತ್ರ. ಏನು ಉಪಾಯ? ಏನೆಂದು ಪ್ರಶ್ನಿಸುವುದು? ಯಾವ ಯೋಚನೆಯೂ ಹೊಳೆಯದೆ ರಾಯರ ಮನಸ್ಸನ್ನು ದುಃಖ ಬಹುವಾಗಿ ಆವರಿಸಿ ಬಾಧಿಸುತ್ತಿತ್ತು.

ಯಾವ ವಿಧದಲ್ಲಿಯೂ ಮಗನ ಮನಃಕ್ಲೇಶ ಮಾಗುವ ಚಿಹ್ನೆ ಕಾಣ ದಾಯಿತು. ತಂದೆತಾಯಿಗಳ ಸುಖಜೀವನವನ್ನು—ಹಣವಿದ್ದೇನು ಫಲ!—ದಿನದಿನಕ್ಕೆ ದುಃಖಾಗ್ನಿ ಉರಿಸಿ ಕರಗಿಸುತ್ತಿತ್ತು.

೧೩

ಅನಂತನನ್ನು ಹತ್ತು ತಿಂಗಳು ಹೊತ್ತು ಹೆತ್ತ ತಾಯಿ ಪದ್ಮಮ್ಮನಾಗಿದ್ದರೂ ಅನಂತರದ ಭಾರವನ್ನು ಹೊತ್ತು ಸಲಹಿದ ತಾಯಿ ರಂಗಮ್ಮನೆ! ತನ್ನ ತನುಮನಧನವೆಲ್ಲವನ್ನು ಅನಂತನಿಗಾಗಿ ಮೀಸಲಾಗಿಟ್ಟಿದ್ದಳು. ಹೊಟ್ಟೆಯ ಮಗುವನ್ನು ಹೊಡೆದರೂ ಅನ್ಯರ ಮಕ್ಕಳನ್ನು ಆದರಿಸಿ ಪ್ರೀತಿಸುವ ಕೆಲವು ತಾಯಂದಿರೂ ಇದ್ದಾರೆ!

ತಂದೆತಾಯಿಗಳೊಂದಿಗೆ ಮಧುರವಾಗಿ ಸಲಿಗೆಯಿಂದ ಮಾತಾಡುತ್ತಿದ್ದ ಅನಂತನ ಗುಣ ಈಗೆಲ್ಲೋ ಮಾಯವಾಗಿದೆ. ರಂಗಮ್ಮನನ್ನು ಬಿಟ್ಟು ಎಲ್ಲರೊಂದಿಗೂ ಮೌನ!

ದಿನಗಳೆದಂತೆ ತಾಯಿತಂದೆಗಳ ದೇಹಾರೋಗ್ಯ ಕೆಡುತ್ತಿದೆ. ಮನೆಯ ಮಾಣಿಕ್ಯ ಸದಾ ಶೋಭಿಸುತ್ತಿದ್ದು ಒಮ್ಮೆಲೆ ಮಸಿಯಾಗಿ ಪರಿಣಮಿಸಿದರೆ ಮನೆಗಿನ್ನಾವ ಬೆಳಕಿದ್ದೇನು ಫಲ! ಅಂತೂ ಹೊಟ್ಟೆಯ ಮಗನ ಹೃದಯವನ್ನರಿಯಲು ಅಸಮರ್ಥರಾದರು—ಪದ್ಮಮ್ಮ. ಮಗನೆಂಬ ನಿಧಿಯಿದೆಯೆಂದು ಆಶಿಸುತ್ತಿರುವಾಗ ಮಗನ ವರ್ತನ ಈ ರೀತಿ ವಿಚಿತ್ರವಾಗಿ, ನಿರಾಶೆ ಕಾಲಿಕ್ಕುವಂತಾದರೆ?

ರಾಯರು ಕುಳಿತು ಗುಡುಗುಡಿ ಸೇದುತ್ತಿದ್ದಾರೆ. ಪದ್ಮಮ್ಮ ಗಂಡನ ಹತ್ತಿರ ಕುಳಿತು ನಿಟ್ಟುಸಿರು ಬಿಟ್ಟರು.

" ಏನೆ ? "

" ಹುಡುಗನೇಕೆ ಹೀಗಾಗಿದ್ದಾನೆ ? ಸರಿಯಾಗಿ ಉಣ್ಣುವುದಿಲ್ಲ, ತಿನ್ನುವುದಿಲ್ಲ. ಒಂದಿಷ್ಟು ಬೇಕೊ ಬೇಡವೊ ಎಂದು ಉಣ್ತಾನೆ. ಚೆನ್ನಾಗಿ ಎಲ್ಲರೊಡನೆಯೂ ಗಟ್ಟಿಯಾಗಿ ಮಾತಾಡುತ್ತಿದ್ದವ ಈಗ ಬಾಯಿ ತೆರೆಯುವುದೆ ಅಪರೂಪವಾಗಿದೆ. ' ನಿನಗೇನಾಗಿದೆ ಮಗು, ಹೇಳು ' ಅಂದರೆ ' ನನಗೇನಾಗಿದೆ ? ' ಎಂದು ನನ್ನನ್ನೇ ಹಿಂತಿರುಗಿ ಕೇಳುತ್ತಾನೆ. ಏನಾದ್ರೂ ಬೇಕಾದರೆ ರಂಗಮ್ಮನನ್ನೇ ಕೇಳಿ ಇಸ್ಕೊಳ್ತಾನೆ."

" ಹುಂ ! ನಾವು ಮಾಡಿದ ಪೂಜಾಫಲ !........ಮತ್ತೇನು ಹೇಳ್ಲಿ ?.... ನೀನೊಂದು ಕೆಲಸ ಮಾಡು !....ರಂಗಮ್ಮನನ್ನೆ ರಹಸ್ಯವಾಗಿ ಅನಂತನನ್ನು ವಿಚಾರಿಸುವಂತೆ ಮಾಡು. ಒಂದು ವೇಳೆ ಅವಳೊಡನೆ ಹೇಳಲೂ ಬಹುದು. ನಮ್ಮೊಡನೆ ಹೇಳಲಾರದುದೇನಾದರೂ ಇದ್ದರೆ ತಿಳಿಯಬಹುದು " ಎಂದು ಒಂದು ವಿಧವಾದ ಆಸೆ–ನಿರಾಶೆ ಮಿಶ್ರಿತವಾದ ನಗು ನಕ್ಕು ಉಪಯುಕ್ತ ಯೋಜನೆ ಮುಂಡಿಸಿದರು.

" ಸರಿ ! ಅದನ್ನೂ ಮಾಡಿ ನೋಡೋಣ."

ಮರುದಿನ ರಂಗಮ್ಮ ಬಂದಾಗ " ರಂಗಮ್ಮಾ " ಎಂದು ಪದ್ಮಮ್ಮ ಕರೆದರು.

" ಏನು, ತಾಯಿ ? "

" ನಿನ್ನಿಂದ ಒಂದು ಕೆಲಸವಾಗಬೇಕಾಗಿದೆ........ ? " ಎಂದು ಪ್ರಶ್ನಾತುರ ದೃಷ್ಟಿಯಿಂದ ' ನೀನು ಮಾಡಿಕೊಡ್ತೀಯ ' ಎಂಬ ಭಾವವನ್ನು ಮುಖದಲ್ಲಿ ತಂದುಕೊಂಡು ನೋಡಿದರು.

" ಅಪ್ಪಣೆ ಕೊಡದೆ—ನನ್ನ ವಿಚಾರಿಸಲೇಕೆ ? "

" ಅದು ಸ್ವಲ್ಪ ಕಷ್ಟದ ಕೆಲಸವಾಗಿದೆ, ರಂಗಮ್ಮ."

" ನಮ್ಮಂತಹವರಿಗೆ ಕಷ್ಟಸುಖಗಳೆಂಬುದರ ವ್ಯತ್ಯಾಸವೆಲ್ಲಿ, ತಾಯಿ ? ಇದ್ದುದನ್ನು ಹೇಳಿ. ಆಗುವಂತಿದ್ದರೆ....ನನಗೇನು—ಮಾಡುವೆ."

" ಅದು—ಅನಂತನ ವಿಷಯ."

" ಅನಂತನ ವಿಷಯವಾಗಿಯೆ ?........"

" ಹೌದು ! ಏಕೆ ? ಆಗದೆ ? "

" ಅನಂತ ನಿಮ್ಮ ಹೊಟ್ಟೆ ಮಗನಾದರೂ ಅದಕ್ಕಿಂತಲೂ ನನಗೆ ಹೆಚ್ಚಿನವನು. ಅವನೆಂದರೆ ನನಗೆ ಪ್ರಾಣ........"

" ಹಾಗಾದರೆ ಒಂದು ಕೆಲಸ ಮಾಡು !—ನಾಳೆ–ಅಲ್ಲ–ಈ ದಿನ ಸಂಜೆ ನಾವಿಬ್ಬರೂ ಆಶ್ರಮಕ್ಕೆ ಹೋಗ್ತೇವೆ. ಆಗ ಒಂದು ಕೆಲಸವಾಗ್ಬೇಕಾಗಿದೆ. ಅದನ್ನು ರಮಾನಂದರ ಹತ್ತಿರ ಮಾತ್ನಾಡ್ಬೇಕು........"

" ನಾನು ಒಂದು ಮಾತು ಕೇಳಲಾ, ತಾಯಿ ? "

" ಕೇಳು, ಅಡ್ಡಿಯಿಲ್ಲ."

" ರಮಾನಂದರ ಹತ್ತಿರ ಏನು ಅಷ್ಟು ಅವಸರದಲ್ಲಿ ಹೊರಟದ್ದು ? "

" ಆಶ್ರಮದಲ್ಲಿ ವಿಜಯಕುಮಾರಿ ಎಂಬ ಹುಡುಗಿ........ಒಂದು ದಿನ ರಮಾನಂದರು, ಸ್ನಾನಮಾಡಿ, ಸಂಧ್ಯಾವಂದನೆ ಮುಗಿಸಿ, ಆಶ್ರಮಕ್ಕೆ ಬರಬೇಕಾದರೆ ದಾರಿಯಲ್ಲಿ ಸಿಕ್ಕಿದ ಮಗು—ಈಗ ಅದಕ್ಕೆ ಹರಯದುಂಬಿದೆ, ಅದರ ವಿಷಯ ಸ್ವಲ್ಪ........ರಮಾನಂದರನ್ನು ಕಾಣ್ಬೇಕು."

" ಅದರ ಮದುವೆ ವಿಷಯವೇನು, ತಾಯಿ ? "

" ಹೌದು ! "

" ಯಾರ ಕೂಡ ? "

" ಅದೆಲ್ಲ ಮುಂದೆ........"

ರಂಗಮ್ಮನಿಗೆ ಯಾವುದೋ ಒಂದು ಆನಂದ ಎಲ್ಲಿಂದಲೊ ಬಂದು ತನ್ನ ಹೃದಯವನ್ನು ಹೊಕ್ಕಂತಾಯಿತು ! ಇದು ಅವಳ ಶಿಥಿಲಗೊಂಡ ಆಸೆಯನ್ನು ರೂಪುಗೊಳಿಸಿತು. ' ನನ್ನ ಆಸೆ ನೆರವೇರುವುದೆ ? ನನ್ನ ಭಾಗ್ಯದೇವತೆ ಕಣ್ದೆರೆದಳೆ ? ನಾನಿನ್ನು ಭಾಗ್ಯಶಾಲಿನಿ ! ಅದೃಷ್ಟವಂತೆ ! ನಾನಿನ್ನು ಮಡಿದರೂ ಮಡಕೆಯೊಡೆದಂತೆ ! ನನ್ನನ್ನರಿಯದೆ ಲೋಕ ನಿಂದಿಸಿದರೂ, ಸ್ವರ್ಗ ನನ್ನನ್ನು ನಿಂದಿಸದು ! ಜಗತ್ತೇನಾದರೂ ಆಡಲಿ ! ನನ್ನನ್ನು ದೇವರು ತಿಳಿಯುವನು ! ' ಎಂದು ತನ್ನಲ್ಲಿ ಅಂದುಕೊಂಡಳು, ರಂಗಮ್ಮ.

" ನಾನೇನು ಮಾಡಬೇಕು ? "

" ಅದೇ ಹೊತ್ತಿಗೆ–ಅಂದ್ರೆ ನಾವಿಲ್ಲದಾಗ, ಅನಂತನನ್ನು ಹೀಗಾಗಲು ಕಾರಣ ಏನೆಂತ ನೀ ಕೇಳ್ಬೇಕು. ತಿಳಿದುಕೊಂಡು, ನಾವು ಬಂದ ಕೂಡಲೆ ನಮಗೆ ಹೇಳ್ಬೇಕು."

" ಇದು ನನ್ನಿಂದ ಸಾಧ್ಯವಾದೀತೂಂತ...."

" ಪ್ರಯತ್ನಕ್ಕೂಂಚೇನೆ ಸಾಧ್ಯವೇಂತ ಅಪಶಕುನ ಯಾಕೆ?...."

" ಆಗಲಿ....ದೇವರ ದಯೆಯಿದ್ದರೆ........ಆಗಲಿ ತಾಯಿ! ಹಾಗೇ ಮಾಡ್ತೀನಿ."

" ಮರ್ತೀ ನೋಡು."

" ಇಲ್ಲವಮ್ಮಾ! "

' ಯಜಮಾನಿಗೆ ಮಾತು ಕೊಟ್ಟೆ! ಅದನ್ನು ಪಾಲಿಸಬೇಕಾಗಿದೆ! ಹೇಗೆ? ಏನೆಂದು, ಹೇಗೆಂದು ಅನಂತನನ್ನು ಪ್ರಶ್ನಿಸಲಿ? ಇದ್ದುದನ್ನು ಮರೆ ಮಾಚದೆ ಅನಂತ ನನಗೆ ಹೇಳಿಯಾನೆ? ಹೆತ್ತಮ್ಮನಿಗೆ ಆಗದ ಕೆಲಸ ನನ್ನಿಂದ? ಇದಂತೂ ಆಗದ ಕೆಲಸ; ಹಾಗೆಂದು ಯತ್ನಿಸದಿರಲೆ? ಇತ್ತ ಮಾತಿಗೆದುರಾಗಿ ವರ್ತಿಸುವುದೆ? ಸಾಧ್ಯವೇ ಇಲ್ಲ! ಸಾಧಿಸಲೇಬೇಕಾಗಿದೆ!' ಸಮಸ್ಯೆಗಳೆದ್ದು ರಂಗಮ್ಮನ ಮನಸ್ಸನ್ನು ಕಲಕಿದವಾದರೂ ಸ್ಥಿರಚಿತ್ತಳನ್ನಾಗಿ ಮಾಡಿದವು.

ಪತಿ-ಪತ್ನಿಯರು ಹೊರಟು ಹೋದರು. ದಿನಾಲು ಹೊತ್ತಾಗಿ ಬರುವ ಅನಂತ ಅಂದು ಬೇಗನೆ ಮನೆ ತಲಪಿದ್ದನು. ಆರಾಮಾಸನದಲ್ಲಿ ಬಿದ್ದು ಕೊಂಡಿದ್ದ ಅನಂತನ ಮುಖ ಬಹುವಾಗಿ ಬಾಡಿದ್ದಿತು. ಸಂಗರ್ಭವರಿತ ರಂಗಮ್ಮ ಬಿಸಿಯಾದ ಕಾಫಿಯನ್ನೂ ತಿಂಡಿಯನ್ನೂ ತಂದಿರಿಸಿದಳು. ಅನಂತ ಕಾಫಿಯನ್ನು ಕುಡಿದು, ತಿಂಡಿಯನ್ನು ಬೇಡವೆಂಬುದರ ಗುರುತಾಗಿ ಸ್ವಲ್ಪ ದೂರ ಸರಿಸಿಟ್ಟನು. " ಅನಂತು, ನನ್ನೊಡನೆಯೂ ನಿನಗೆ ಸಿಟ್ಟೆ? " ಎಂದಳು. ರಂಗಮ್ಮನ ಮಾತನ್ನು ಕೇಳಿ ಅನಂತ, " ರಂಗಮ್ಮ, ನಿನಗೂ ನನ್ನ ಮೇಲೆ ಈ ರೀತಿ ಸಂದೇಹವೆ? ಕೋಪವೆಂದರೇನೆಂದು ನನಗೆ ಗೊತ್ತಿಲ್ಲ. ಅಲ್ಲದೆ, ನನಗೆ ಕೋಪವಾದರೂ ಏಕೆ? ಯಾರೊಡನೆ ನಾನು ಕೋಪ ಮಾಡುವುದು? ನನಗೆ ಹಸಿವಿಲ್ಲ. ಬಾಯಾರಿಕೆಯಿತ್ತು—ಕಾಫಿ ಕುಡಿದೆ " ಎಂದನು.

" ನಿನ್ನಲ್ಲಿ ಒಂದು ವಿಷಯ ಕೇಳಬೇಕೆಂದಿದ್ದೇನೆ. ಕೇಳಲೆ? "

" ಕೇಳುವುದಕ್ಕೇನು? ನನಗೆ ಸಾಧ್ಯವಾದರೆ ಉತ್ತರಿಸ್ತೇನೆ."

" ನನ್ನನ್ನ ಏನಂತೆ ಅಥವಾ ಯಾರಂತೆ ಭಾವಿಸಿದ್ದೀ? "

" ನನ್ನ ತಾಯಿಯಂತೆ! "

" ನಿಜವೆ ? "

" ನಿಜ ! "

" ತಾಯಿಯ ಮಾತಿನಂತೆ ಮಗ ನಡಿಯೋದು ಸರಿ ತಾನೆ ? "

" ಸರಿಯೆಂದಾದರೆ ! "

" ಆಗಲಿ, ಕೇಳೋದು ಕೇಳ್ಬೇಕಲ್ಲ ? "

" ಹೂಂ ! "

" ಇತ್ತೀಚೆಗೆ ನೀನು ಈ ರೀತಿ ಆಗ್ಲಿಕ್ಕೆ ಏನು ಕಾರಣ ? "

" ಏನಾಗಿದ್ದೇನೆ ? "

" ನಗ್ತಾ ಮಾತ್ನಾಡಿಕೊಂಡು, ಯಾವಾಗ್ಲೂ ಸಂತೋಷವಾಗಿದ್ದು, ಕೇಳಿ ತಿಂದುಂಡುಕೊಂಡಿದ್ದ ನೀನೀಗ ತೆಪ್ಪಗೆ ತಣ್ಣಗೆ ಸಂನ್ಯಾಸಿ ಹಾಗೆ ಕೂರೋದೇಸು ? ನಿನ್ನ ಅಮ್ಮನಿಗೂ ಅಪ್ಪನಿಗೂ ಮನಸ್ಸಿಗೆ ಎಷ್ಟು ವ್ಯಥೆ ಆಗ್ತಿದೆ–ಅದು ನಿನಗ್ಗೊತ್ತಾ ? ನಿನ್ನ ಮನಸ್ಸಿನೊಳಗೇನದೆ ನನಗೆ ಹೇಳ್ಬಾರದೆ ? ನೀ ನನ್ನನ್ನ ತಾಯಿ ಹಾಗೆ ಕಾಣೋದಿದ್ರೆ ನನಗೆ ನೀ ಹೇಳಲೇ ಬೇಕು."

" ರಂಗಮ್ಮ ! ಇದು ನನಗಾಗದ ಕೆಲಸ. ನನ್ನ ಮನಸ್ಸಿನಲ್ಲಿ ಇದ್ದುದನ್ನು ಹೇಳಲು....ನನ್ನ ಮನಸ್ಸಿನಲ್ಲಿ ಇರೋದಾದ್ರು ಏನು ? "

" ಹೇಳೋದಿಲ್ವೆ ? ಹಾಗಾದ್ರೆ ನಿನ್ನ ರಂಗಮ್ಮ ಇವತ್ತು ಹೊರಟಳು. ಅವಳಿಗಿನ್ನು ನಿಮ್ಮ ಮನೇ ಕೆಲ್ಸಾ ಗಿಲ್ಸ ಏನೂ ಬೇಡ "

ಎಂದು ರಂಗಮ್ಮ ಎದ್ದು ಅನಂತನ ಮನಸ್ಸನ್ನು ಚಲಿಸುವಂತೆ ಮಾಡಿದಳು. ತಾನು ಈ ಮನೆಯನ್ನು ತ್ಯಜಿಸಿದರೆ ಅನಂತನ ಜೀವನ ಒಳಿತಾಗದೆಂದು ರಂಗಮ್ಮ ಅರಿತೇ ಈ ಕಲ್ಲನ್ನು ಎಸೆದಳು.

" ನಾನೂ....ಅನಂತನೂ ಇಲ್ಲಿಂದ ಹೊರಡ ತಕ್ಕವನೇ ಆಗಿದ್ದಾನೆ ! ಇನ್ನು ಸ್ವಲ್ಪೇ ದಿನ ಉಳಿದಿದೆ ! "

" ಮಗೂ, ಇದೆಂಥಾ ಮಾತ್ನಾಡ್ತೀ ? "

" ಏನಾಡಿದೆ ? "

" ನೀನಾಡಿದ್ದು ನಿನಗ್ಗೊತ್ತಿಲ್ವೆ ? "

" ಹೌದು, ಗೊತ್ತಿದ್ದೇ ಹೇಳಿದೆ. ನನಗೆ ಈ ಮನೆಯಲ್ಲೇನು ಉಳಿದಿದೆ —ಮಗನನ್ನು ತಾಯಿ ಬಿಟ್ಟುಹೋದಮೇಲೆ ! "

"ಮಗೂ. ನೀನು ಹಾಗ್ಮಾಡಬೇಡ. ಇರೋದನ್ನು ಹೇಳು—ನಾನು ಯಾರ ಕೂಡವೂ ಹೇಳೋದಿಲ್ಲ."

"ಹುಂ! ಹೆಂಗಸರು...."

"ನನ್ನನ್ನೂ ಅಂಥಾ ಹೆಂಗಸರ ಗುಂಪಿಗೆ ಸೇರಿಸುವೆಯಾ?"

"ಇಲ್ಲ! ಕ್ಷಮಿಸು. ನಾನೊಂದು ಪ್ರಶ್ನೆ ಕೇಳಬೇಕೆಂದಿದ್ದೇನೆ. ಕೇಳಲೆ?"

"ಕೇಳು. ಆದರೆ, ನಾನು ಕೇಳಿದ ಪ್ರಶ್ನೆಗೆ ಸರಿಯಾದ ಉತ್ತರ ಕೊಡ್ತೀನೆಂತ ಮಾತು ಕೊಟ್ರೆ ಮಾತ್ರ ನೀನು ಕೇಳಿದ ಪ್ರಶ್ನೆಗೆ ಉತ್ತರ ಕೊಡ್ತೀನೆ!"

"ಹೂಂ! ಸರಿ."

"ಕೇಳು."

"ನೀ ನನ್ನನ್ನ ಅಕಸ್ಮಾತ್ತಾಗಿ ಹೀಗೆ ಕೇಳಲು ಕಾರಣ?........"

"ನಾನೆ! ನಿನ್ನ ಈಗಿನ ನಡೆ–ಅಲ್ಲ–ಅಂದ್ರೆ ಕೆಟ್ಟ ರೀತಿಯಲ್ಲೀಂತ ಭಾವಿಸ್ಬೇಡ—ನಡೆನುಡಿ ಬಹಳ ವಿಚಿತ್ರವಾಗಿದೆ. ಅದನ್ನು ಕಂಡ ಎಂಥವರೂ ಕೇಳ್ತಾರೆ. ಅಂದಮೇಲೆ ನಾ ಕೇಳೋದ್ರಲ್ಲಿ ಏನು ಮಹಾ!........"

"ಲೋಕದಲ್ಲಿ ಹುಟ್ಟಿದವರು ಸಾಯೋತನಕ ಒಂದೇ ನಮೂನೆ ಇರ್ತಾರೆ?"

"ಇಲ್ಲ."

"ವ್ಯತ್ಯಾಸವಾಗೋದಿಲ್ವೆ?"

"ಆಗ್ತಾರೆ!"

"ಯಾವ ರೀತಿಗಳಲ್ಲಿ ಗೊತ್ತೆ?"

"ಹೌದು.... ಅಂಹಂ!........ ಇಲ್ಲ–ಇಲ್ಲ."

"ಇಲ್ಲವಾದ್ರೆ ನಾನೇ ಹೇಳ್ತೀನೆ. ಮೊದಲನೇದಾಗಿ ಆಕೃತಿಯಲ್ಲಿ; ಗುಣ ನಡತೆಗಳಲ್ಲಿ ಎರಡನೇದಾಗಿ; ಮೂರನೇದಾಗಿ ಹಾವಭಾವಗಳಲ್ಲಿ. ಇದು ಲೋಕದಲ್ಲೇ ಸಾಮಾನ್ಯ ನಡೆದುಬರುವಂಥಾದ್ದು. ಸರಿಯಲ್ಲವೆ?"

"ಆಮೇಲೆ........"

"ಅದೇ ರೀತಿ ನಾನೂ ವ್ಯತ್ಯಾಸ ಹೊಂದಿದ್ದೇನೆ! ಅದರಲ್ಲಿ ಆಶ್ಚರ್ಯ ಯಾಕೆ?"

"ಮಾತಿನಲ್ಲಿ ನನ್ನನ್ನು ಸೋಲಿಸಿದೆ, ಅನಂತು ?........ಸರಿ! ಹೇಳ್ತೋದಿಲ್ವೆ ?"

"ಹಾಗಾದರೆ ನಾನು ಈತನಕ ಅಂದುದು ಸುಳ್ಳಾಯ್ತೆ ?"

"ಹೌದು!"

"ಹಾಗಾದ್ರೆ ರಂಗಮ್ಮನಿಂದ ನನಗೆ ದೊರೆತ ಉತ್ತರಾನೂ ಸುಳ್ಳೇ ಆಗಿರಬೇಕು."

"ಮಗೂ, ಅನಂತೂ, ನೀನು ಬಹಳ ಜೋರಾಗಿದ್ದೀ. ನಾನು ನಿನ್ನನ್ನು ಪ್ರಶ್ನಿಸೋದ್ಕೆ ನಿನ್ನಮ್ಮ ಪದ್ಮಮ್ಮ ಕಾರಣ."

ಅನಂತ ಸ್ವಲ್ಪ ಹೊತ್ತು ಮನಸ್ಸಿನಲ್ಲಿ ಆಲೋಚಿಸಿದ, ಹೇಳಬೇಕೊ ಬೇಡವೊ ಎಂದು ಕೊನೆಗೆ ಧೈರ್ಯಮಾಡಿ ಹೇಳಬೇಕು ಎಂದು ನೆನಸಿಕೊಂಡ.

"ರಂಗಮ್ಮ, ನನಗೆ—ಯಾರೊಡನೆಯೂ ಹೇಳ್ತೋದಿಲ್ಲ—ಎಂದು ನನ್ನ ತಲೆ ಮೇಲೆ ಕೈಯಿಟ್ಟು ಹೇಳ್ತೋದಾದ್ರೆ, ನಾನು ಸತ್ಯ ಹೇಳ್ತೀನೆ. ಇಲ್ಲಾದ್ರೆ...."

"ಮಗೂ, ಇದು ಹೇಗೆ ಸಾಧ್ಯ ?"

"ನನಗೂ ಸಾಧ್ಯವಿಲ್ಲ!"

ರಂಗಮ್ಮನಿಗೂ ಸ್ವಲ್ಪ ಆಲೋಚನೆಗೊಳಗಾಗಬೇಕಾಯಿತು. ಇನ್ನೊಬ್ಬರ ಮಕ್ಕಳ ತಲೆಯ ಮೇಲೆ ತಾನು ಕೈಯಿಟ್ಟು........ಎಂದು. ಮತ್ತೆ, ಎಲ್ಲಿಯೂ ಯಾರಿಗೂ ಹೇಳದಿದ್ದರಾಯಿತು. ಕಾರಣವನ್ನಾದರೂ ತಿಳಿದಂತಾಯಿತಲ್ಲ ಎಂದುಕೊಂಡಳು. ಅನಂತನ ತಲೆಯ ಮೇಲೆ ಕೈಯಿಟ್ಟು "ನಿನ್ನಾಣೆ-ನನ್ನಾಣೆ—ಈ ಸುದ್ದಿಯನ್ನು—ಅಂದರೆ ನೀನು ನನ್ನ ಮುಂದೆ ಹೇಳ್ತೋದನ್ನ ಎಲ್ಲೂ ಹೇಳ್ತೊಲ್ಲ" ಎಂದಳು.

ರಂಗಮ್ಮ ಅನಂತನ ತಲೆಯ ಮೇಲೆ ಕೈಯಿರಿಸಿ ಅವನಿಚ್ಛೆಯಂತೆ ಆಣೆಯಿಟ್ಟಳಾದರೂ ಅವಳ ಕೈ ನಡುಗುತ್ತಿತ್ತು!

ಪ್ರಪಂಚದಲ್ಲಿ ಮನುಷ್ಯನು ಒಂದೊಂದು ವೇಳೆ ಕೆಟ್ಟದನ್ನಾದರೂ ಒಳ್ಳೆಯದೆಂದು ಭಾವಿಸಿ, ಮನಸ್ಸೆಂಬುದನ್ನು ತನ್ನ ಹತೋಟಿಯಲ್ಲಿರಿಸದೆ, ಅಂದರೆ ಪ್ರಜ್ಞೆಯಿದ್ದರೂ ಪ್ರಜ್ಞೆಯಿಲ್ಲದಂತಾಗಿ, ಏನು ಮಾಡುವುದೆಂದರಿಯದೆ, ಏನನ್ನಾದರೂ ಆಗ ಆ ಸಮಯದಲ್ಲಿ ಯಾವದು ಹಿತವೆಂದು ಕಾಣುವುದೊ

ಅದನ್ನು ಮಾಡಿ ಬಿಡುತ್ತಾನೆ. ಆಗ ಅವನಿಗೆ ಮುಂದಿನ ಯೋಚನೆಯಿರುವುದಿಲ್ಲ. ಭವಿಷ್ಯತ್ತಿನಲ್ಲಿ ಏನಾಗಬಹುದೆಂಬುದನ್ನು ಪರಿಗಣಿಸಲಾರನು. ಚಿತ್ತ ಭ್ರಮೆ ಹಿಡಿದವನಂತೆ ವರ್ತಿಸುವನು. ಆದರೆ ಹೆಚ್ಚಾಗಿ ಒಳ್ಳೆಯದೇ ಆಗುವುದು.

"ನಮ್ಮ ಆರೋಗ್ಯಾಶ್ರಮದಲ್ಲಿ 'ವಿಜಯಾ' ಎಂದೊಬ್ಬ ಹುಡುಗಿ ಇದ್ದಾಳೆ, ನಿನಗೆ ಗೊತ್ತೆ?"

"ಆಂ! ಹಂ! ಹೌದು!"

"ಅವಳೀಗ ಹೇಗಿದ್ದಾಳೆ ಗೊತ್ತೆ?"

"ಗೊತ್ತು."

"ಹೇಗಿದ್ದಾಳೆ?"

"ಬಹಳ–ಅಲ್ಲಲ್ಲ–ಚೆಂದವಾಗಿದ್ದಾಳೆ!"

"ಏಕೆ ಬಡಬಡಿಸ್ತಿ? ನಿಜವಾಗಿ ಬಹಳ ಚೆಂದ ಇದ್ದಾಳೆ. ಅವಳನ್ನೇ ನಾನು ನನ್ನ............" ಅನಂತನ ಈ ಮಾತು ಗಂಭೀರವಾಗಿತ್ತು.

"ಅನಂತೂ, ಇದು ನಿನಗೊಪ್ಪುವಂತಹದೆ?"

"ಒಪ್ಲೊ, ಒಪ್ಪೋದಿಲ್ಲೊ. ನನಗೆ ಯಾರ ಮಾತೂ ಅಗತ್ಯವಿಲ್ಲ!"

"ಅದು ಭಿಕ್ಷುಕ ಹುಡುಗಿ, ಕಾಣಪ್ಪ! ದಾರಿಯಲ್ಲಿ ರಮಾನಂದರಿಗೆ ಹೆಕ್ಕ ಸಿಕ್ಕಿದ ಕಸದ ಮಗು. ನಿನ್ನಂಥಾ ಶ್ರೀಮಂತನಿಗೆ ಅದು ಯಾಕೆ? ಅರಸನಿಗೂ ಕೆಸರೊಳಗಿನ ಹುಳಕ್ಕೂ ಇರುವ ಸಂಬಂಧ! ಈ ಹಟ ಬಿಟ್ಟು ಬಿಡು. ನಿನ್ನ ಅಪ್ಪ ಅಮ್ಮ ನಿನಗೆ ತಕ್ಕ, ನಿನಗೊಪ್ಪುವ ಹುಡುಗೀನ್ನ ಬೇಕಾದ್ರೂ ತಂದು ಮಾಡಿಸುವರಲ್ಲಾ! ಕುಪ್ಪೆಯೊಳಗಣ ಕುರಿಮರಿಗೆ ನೀನು ಈ ರೀತಿ ಹಟ ತೊಟ್ಟರೆ ನಿನ್ನ ತಾಯ್ತಂದೆ ಬೇಸರ ಪಟ್ಟರೆ?........"

"ನನ್ನ ಹಿತ ಬಯಸುವ ತಾಯ್ತಂದೆಯರು ಬೇಸರ ಪಡ್ಲಿಕ್ಕಿಲ್ಲ."

"ಇದು ನಿನಗೆ ತರವಲ್ಲ, ಮಗೂ!"

"ನನಗ್ಯಾರ ಮಾತೂ ಅಗತ್ಯವಿಲ್ಲ ಅನ್ನೋದನ್ನ ನಾನು ಮೊದಲೇ ಹೇಳಿದೆನಲ್ಲ!"

"ಹಾಗಾದ್ರೆ ಇದನ್ನ ತಾಯಿಗೆ ಹೇಳಬೇಡವೆ?"

"ಆಣೆಯಿಟ್ಟದ್ದು ಮರೆತು ಹೋಯ್ತೇ? ನನ್ನ ಮರಣ ಕೋರೋದಾದ್ರೆ ಹೇಳ್ಬಹುದು!"

" ಹಾಂ ! "

" ಹಾಂ ! ಮತ್ತೆ ಆಣೆ ಯಾಕೆ ಇಟ್ಟೆ ? "

" ಮಗೂ, ಅನಂತೂ...."

ಮಥುರಾನಾಥರು ಬರುತ್ತಿರುವುದನ್ನು ಕಂಡು ರಂಗಮ್ಮ ಮುಂದು ವರಿಸದೆ ಮಾತನ್ನಲ್ಲಿಗೇ ಬಿಟ್ಟು ಹಿಂಭಾಗಕ್ಕೆ ಹೊರಟು ಹೋದಳು. ರಂಗಮ್ಮ ಬಚ್ಚಲುಕೊಟ್ಟಿಗೆ ಹೊಕ್ಕು ಒತ್ತೊತ್ತಿ ಬರುತ್ತಿದ್ದ ದುಃಖವನ್ನು ಅತ್ತು ಮುಗಿಸಿ ಮೋರೆ ತೊಳೆದುಕೊಂಡು ಹೊರಬಂದಳು. ಅವಳನ್ನು ಎದುರ್ಗೊಂಡ ಪದ್ಮಮ್ಮ ಮರಳಿ ಬಚ್ಚಲು ಕೋಣೆಗೆ ಕರೆದೊಯ್ದು, " ಏನಾಯ್ತು ? " ಎಂದರು. ಅದಕ್ಕೆ, " ಏನೇನು ಕೇಳಿದ್ರೂ ' ಏನಿಲ್ಲ ! ' ಎಂಬುದೇ ಉತ್ತರ. ನನಗರಿತ ಪ್ರಶ್ನೆಗಳ ಮಳೆಯನ್ನೇ ಸುರಿಸಿದೇನಮ್ಮ. ಆದರೆ ನನಗೊಂದು ಹನಿಯೂ ದೊರೀಲಿಲ್ಲ. ಇನ್ನು ನೀವೇ ವಿಚಾರಿಸಿ, ತಾಯಿ " ಎಂದಳು ರಂಗಮ್ಮ.

೧೪

ರಮಾನಂದ ಆರೋಗ್ಯಾಶ್ರಮದ ಕಡೆ ವೃಂದಾವನದಲ್ಲಿ ಅನಂತ-ವಿಜಯರ ಭೇಟಿಯಾಗಿದೆ. ಆದರೆ ಅಂದಿನ ಸವಿನಯ ನಡೆನುಡಿಗಳು ಇಂದೆಲ್ಲೋ ಮಾಯವಾಗಿವೆ. ಅಂದು ಅವರ ಮುಖಗಳಲ್ಲಿ ಶೋಭಿಸುತ್ತಿದ್ದ ಸೌಂದರ್ಯ ಇಂದು ಕಾಣದಾಗಿ ಮುಖಗಳು ಬಾಡಿ ಹೋಗಿವೆ. ಆಶಾಮಯ ಜೀವನದಲ್ಲಿ ನಿರಾಶೆಯ ಬೀಜ ಬಿತ್ತಿದಂತಿದೆ. ಇಬ್ಬರೂ ಮೌನವಾಗಿ ಮೂಕರಂತೆ ಕುಳಿತಿದ್ದಾರೆ. ಆ ದಿನದ ಹುರುಪು, ಸಂತೋಷ, ವಾಕ್ಚಾತುರ್ಯ, ಚಾಪಲ್ಯ—ಎಲ್ಲವೂ ಇಂದು ಶಿಥಿಲವಾಗಿದೆ. ಇಬ್ಬರೂ ತುಟಿ ಬಿಡದೆ ತಮ್ಮನ್ನು ತಾವೇ ಮರೆತಂತಿದ್ದಾರೆ.

ಅನಂತ ಪಿಟ್ಟೆನ್ನದಿರುವುದನ್ನು ಕಂಡು ವಿಜಯ ಬಾಯಿಬಿಟ್ಟಳು.

" ಇಂದೇಕೆ ಹೀಗೆ ? "

" ಹೇಗೆ ? "

" ಬಾಯಿಗೆ ಬೀಗಮುದ್ರೆ ! "

" ಹುಂ !.... ಇಲ್ಲ. ಬೀಗ ಹಾಕಿಲ್ಲ, ವಿಜಯಾ !.... ಅಂದು.... ನೀನು ಅಂದ ನುಡಿ ಅಕ್ಷರಶಃ ನಿಜವಾಗುವುದನ್ನು ಗಮನಿಸಿದರೆ...."

" ಯಾವದು ? "

" ತಡೆ, ಸಮಾಧಾನದಿಂದ ಹೇಳುವೆ. ಆತುರ ಪಡಬೇಡ."

" ಇಲ್ಲ, ತಡೆಯಲಾರೆ. ನಿಮ್ಮ ಮಾತಿನಲ್ಲಿ ನೀವು ಬಲಗುಂದಿರುವಿರೆಂದು ಕಾಣುತ್ತದೆ. ಬೇಗ ಹೇಳಿ. ಏನದು ? ಉತ್ಸಾಹವಿಲ್ಲದವರಾಗಿರುವಿರೇಕೆ ? ಐದಾರು ದಿನಗಳಿಂದ ಈಚೆ ನಿಮ್ಮ ಸುಳಿವೇ ಇಲ್ಲ. ಏಕೆ ? ಕಾರಣವೇನು ? ಇದೇಕೆ ? ಚಿಕ್ಕ ಮಕ್ಕಳಂತೆ ಅಳುವಿರಿ ? ಹೇಳಿ ! ನನ್ನೊಡನೆ ಹೇಳಿ ! ಹೇಳೋದಿಲ್ಲವೆ ?...."

ಎಂದು ದೂರವಿದ್ದ ವಿಜಯಕುಮಾರಿ ಪಕ್ಕಕ್ಕೆ ಸರಿದು ಅನಂತನ ತೋಳು ಹಿಡಿದು ಕುಲುಕಿ ಕೇಳಿದಳು. ಆದರೆ ಮಾತು ಅವನ ಬಾಯೊಳಗಿಂದ ಹೊರಬೀಳುವಂತಿರಲಿಲ್ಲ. ಚಿಂತೆಯೆಂಬುದು ಅವನ ಹೃದಯವನ್ನು ಚಿತೆಯಂತೆ ಸುಡುತ್ತಿತ್ತು. ವಿಜಯ ದುಃಖದಿಂದ ಕಣ್ಣೀರು ಸುರಿಸಿದಳು.

" ನಮ್ಮಿರ್ವರ ಇಂದಿನ ಈ ಭೇಟಿಯೆ ಕೊನೆಯದು ! "

" ಹಾಂ ! "

" ಹೌದು ! ಇಂದಿನಿಂದ ನೀನು ನನ್ನನ್ನು ಪರಕೀಯನೆಂದು ಭಾವಿಸ ಬೇಕಾಗಿದೆ ! ಅನಂತನಿಗೆ ಅನಂತ-ವಿಜಯವಿಲ್ಲ—ಪರಾಜಯವೇ ಅವನಿಗೆ ಕಟ್ಟಿಟ್ಟ ಬುತ್ತಿ ! ನೀನು ನಿನ್ನ ಹೆಸರಿಗೆ ತಕ್ಕಂತೆ ವಿಜಯವನ್ನು ಪಡೆದೆ, ವಿಜಯ ! ನೀನು ಆ ದಿನ ಅಂದ ಮಾತು ಬಹು ಸತ್ಯವಾಗಿದೆ ! "

" ನನಗೆ ನೀವನ್ನುವುದರ ಒಂದಿಷ್ಟೂ ಅರ್ಥವಾಗುವುದಿಲ್ಲವಲ್ಲ ! "

" ನೀನು ಅನ್ನಲಿಲ್ಲವೇ ' ನಾನು ಯಾರಿಗಾಗಿಯೂ ಜೀವಿಸಿಲ್ಲ ' ವೆಂದು !...."

" ಹೌದು ! "

" ಅದು ಇಂದು ನಿಜವಾಗಿದೆ ! "

" ಹೀಗೇಕೆ ನನ್ನನ್ನು ಭಂಗಗೊಳಿಸುವಿರಿ, ಇದ್ದುದನ್ನು ಚೆನ್ನಾಗಿ ಬಿಡಿಸಿ ಹೇಳಿರಿ."

" ನಿನ್ನೆ ನನ್ನ ತಂದೆಯವರೂ-ತಾಯಿಯವರೂ ಬಂದಿದ್ದರಲ್ಲವೆ ? "

" ಹೌದು."

" ನಿನ್ನೊಡನೆ ಏನಾದರೂ ಅಂದರೆ....ಕರೆದು, ಏನಾದರೂ ಮಾತಾಡಿ ಸಿದರೆ ? "

" ಹೌದು. ಬಂದೊಡನೆ ನನ್ನನ್ನು ಕರೆಕಳುಹಿದರು; ನಿಮ್ಮ ತಾಯಿ ನನ್ನನ್ನು ಹತ್ತಿರ ಕೂರಿಸಿ ಬೆನ್ನು ಸವರಿ ಮಾತಾಡಿಸಿದರು ; ಆಮೇಲೆ ನಿಮ್ಮ ತಂದೆಯವರನ್ನು ನೋಡಿ ನಕ್ಕರು ! ಅಷ್ಟೆ. ನನ್ನನ್ನು ಕಳುಹಿಸಿ ಕೊಟ್ಟು, ರಮಾನಂದರೊಂದಿಗೆ ಅವರ ದೇವರ ಮನೆಯಲ್ಲಿ ಕುಳಿತು ಏನೇನೋ ಮಾತಾಡಿದರು. ಹೊತ್ತು ಮೀರಲು—ಹೊರಟುಹೋದರು...."

" ಅದೇ ! "

" ಅದೇ ! ಏನು ಅದೇ ? "

" ಸದ್ಯದಲ್ಲೇ ನಿನ್ನ ವಿವಾಹ ಜರುಗಲಿದೆ."

" ಅದಕ್ಕೇ ನೀವಿಷ್ಟು ವಿಷಾದದ ಕಪಟ ನಾಟಕ ನಡೆಸುತ್ತಿದ್ದೀರಾ ? ಹಾಗಾದರೆ ನಿಮಗೆ ನನ್ನನ್ನು ವಿವಾಹವಾಗುವುದರಲ್ಲಿ ಇಷ್ಟವಿಲ್ಲವೆಂಬುದು ಸ್ಪಷ್ಟವಾಗುತ್ತದೆ."

" ವಿಜಯಾ ! ಹುಚ್ಚಿಯಂತೆ ಮಾತನಾಡುವೆಯೇಕೆ ? "

" ಹೌದು, ಹುಚ್ಚಿ ! ತಿಳಿಯಿತು ! ಕಾಲಡಿಯ ಕಸವನ್ನು ಕೈಯಲ್ಲಿ ಮುಟ್ಟುವಾಗ ಹೇಸಿಕೆ ! "

" ವಿಜಯಾ, ತಾಳು ! ವಿಷಯದ ಅರ್ಥವಾಗದೆ—ಅಪದ್ಧ ದುಡುಕಿ ಮಾತಾಡಬೇಡ...."

" ಸಾಕು ! ಕಾರ್ಯವು ಕಂಠಕ್ಕೆ ಬರುವಾಗ ಹಿಂಗೈಯಿಂದ ತಟ್ಟಿ ಬಿಸಾಡುವ ನಿಮ್ಮಂಥಾ ಗಂಡಸರು ಬದ್ಧಾಬದ್ಧ ಮಾತುಗಳ ವಿಮರ್ಶೆಮಾಡುವುದು ! "

" ವಿಜಯಾ ! "

ವಿಜಯ ಸಿಟ್ಟಿನಿಂದ ಸುಟ್ಟಂತಾಗಿದ್ದಳು. ಮುಂದೆ ಮಾತಾಡಲಾರದವಳಾಗಿ ಕೊರಳ ನರಗಳುಬ್ಬಿ ನಾಲಿಗೆಯನ್ನು ಬಿಗಿ ಹಿಡಿದಿದ್ದವು. ಮುಖ ಕೆಂಪೇರಿತ್ತು.

" ವಿಜಯಾ ! ನಿನಗೆ.......ಇಲ್ಲ !........ನಾನು ಹೋಗಲೆ ? "

" ಹಾಂ ! ಎಲ್ಲಿಗೆ ? 'ನಿನಗೆ' ಎಂದಿರಲ್ಲ. ಅದನ್ನು ಪೂರ್ಣಗೊಳಿಸಿರಿ "

" ವಿಜಯಾ !........ಅದನ್ನು........ಹೇಳಿದರೆ !........"

" ಹೇಳಿದರೇನು ? ಹೇಳಲೇ ಬೇಕು, ಹೇಳಿ. ಹೇಳದಿದ್ದರೆ ನಿಮ್ಮನ್ನು ನಾನಿಲ್ಲಿಂದ ಹೋಗಗೊಡುವುದಿಲ್ಲ ! "

" ವಿಜಯಾ, ಹೇಳಲೆ ? "

" ವೃಥಾ ಸಮಯವೇಕೆ ? ಬೇಗ ಹೇಳಿ...... ."

" ಹುಂ ! ಹೇಳಿಬಿಡುವೆ, ಕೇಳು. ನಿನಗೆ ವಿಲಾಯತಿಯ ವಿದ್ಯಾಪತಿ ಕಲೆಕ್ಟರ್ ತೇಜಪಾಲರಾಯರು ಪತಿಯಾಗುವವರಿದ್ದಾರೆ ! "

" ಹಾಂ ! "

" ಆದ್ದರಿಂದಲೆ ಅಂದು ನೀನು ' ನಾನು ಯಾರಿಗಾಗಿಯೂ ಜೀವಿಸಿಲ್ಲ ' ಎಂದ ಮಾತು ನಿಜವಾಯಿತೆಂದೆ. ಮುಂದೆ....ಮುಂದೆ ವಿವಾಹವಾಗಿ ನೀನು ಸುಖವಾಗಿ ಬಾಳಬೇಕೆಂಬುದೆ ನನ್ನ ಅಂತಃಕರಣಪೂರ್ವಕವಾದ ಹಾರೈಕೆ. ಇನ್ನು ನಾನು ಹೋಗುವೆ ! "

" ನಿಲ್ಲಿ ! " ವಿಜಯಳಿಗೆ ಮುಂದೇನು ಮಾತನಾಡುವುದೆಂದು ತಿಳಿಯಲೊಲ್ಲದು.

ವಿಜಯಳ ' ನಿಲ್ಲಿ !, ' ಎಂಬ ಶಬ್ದಕ್ಕೆ ಮರದ ಗೊಂಬೆಯಂತೆ ನಿಂತ ಅನಂತ. ಆದರೆ ವಿಜಯಳಿಗೆ ಮಾತು ಮುಂದರಿಸಲಾಗಲಿಲ್ಲ. ಜಗತ್ತೇ ಅವಳಿಗೆ ಅಂಧಕಾರಮಯವಾಗಿ ಕಾಣುತ್ತಿತ್ತು. ಹತ್ತು ದಿಕ್ಕುಗಳಿಂದಲೂ ರಕ್ಕಸರು ಅವಳನ್ನು ನುಂಗ ಬರುವಂತೆ ಭಾಸವಾಯಿತವಳಿಗೆ. ಅವಳ ಇಚ್ಛೆ ಪೂರ್ತಿಯಾಗಬೇಕಾದರೆ—ಅದು ಯಾರಿಂದ ಸಾಧ್ಯ ? ಅನಂತನಿಂದಲೇ ! ದೈವಬಲವಿಲ್ಲದಿದ್ದರೆ ಅನಂತನಿಂದೇನು ಸಾಧ್ಯ ? ನಿಂತಲ್ಲಿಂದ ಕದಲದೆ ವಿಜಯಳ ತುಟಿಗಳಿಂದ ಯಾವ ಮಾತು ಹೊರಡುವುದೋ ಎಂದು ಆ ಕಡೆ ಗಮನವಿರಿಸಿ ಇದಿರು ನೋಡುತ್ತಿದ್ದನು. ಒಮ್ಮೆಲೆ ವಿಜಯ ಎದ್ದು ಬಂದು ತನ್ನ ಕೈಕಾಲುಗಳನ್ನು ಹಿಡಿದಾಗ ಅನಂತ ಭ್ರಾಂತನಾದವನಂತೆ,

" ವಿಜಯಾ ! ಇದೇನು ಮಾಡಿದೆ ? " ಎಂದನು.

" ನನ್ನನ್ನು ಕ್ಷಮಿಸಿ ! "

ಎಂದು ಕಂಬನಿದುಂಬಿದ ಕಣ್ಣುಗಳಿಂದ ಅನಂತನ ಮುಖವನ್ನವಲೋಕಿಸುತ್ತ ಹೇಳಿದ ವಿಜಯಳ ಮುಖಾವಲೋಕನ ಮಾಡುವುದು ಅನಂತನಿಗೆ ಅಸಾಧ್ಯವಾಯಿತು.

" ನಿನ್ನನ್ನು ಕ್ಷಮಿಸಲು ನೀನು ಮಾಡಿದ ಅಕೃತ್ಯವಾದರೂ ಯಾವದು ?

" ಕ್ಷಮಿಸಿದೆ ಎಂದೊಮ್ಮೆ ಹೇಳಿ. ಆಮೇಲೆ ನಾನದನ್ನು ಹೇಳುವೆ ! "

" ಆಯ್ತು, ಕ್ಷಮಿಸಿದೆ ! "

" ಅದು ನಿಮ್ಮ ಅಂತಃಕರಣದಿಂದ ಹೊರಟಿಲ್ಲ ! "

" ವಿಜಯಾ ! ನಿಜವಾಗಿಯೂ ನಾನು ನಿನ್ನನ್ನು ಅಂತಃಕರಣಪೂರ್ವಕವಾಗಿ ಕ್ಷಮಿಸಿರುವೆ ! "

" ನಾನು ಧನ್ಯಳು ! ಕ್ಷಮೆಯ ಆವಶ್ಯಕತೆ ಹೇಳಲೆ ? "

" ಹೇಳು."

" ಇಂದಿನಿಂದ ನಾನು ನಿಮಗಾಗಿ ಜೀವಿಸಿರುವೆನು ! "

" ವಿಜಯಾ ! ಇದು ಹೇಗೆ ಸಾಧ್ಯ ? "

" ಏಕೆ ಅಸಾಧ್ಯ ?—ಹೆಕ್ಕ ಸಿಕ್ಕಿದ ಕಸದ ಮರಿಯೆಂದೆ ?—ಅನಾಥೆಯೆಂದೆ ?—ಸಿರಿಸೌಭಾಗ್ಯಗಳಿಲ್ಲವೆಂದೆ ? "

" ನೀನು ನನ್ನನ್ನು ಅಂಥಾ ಹೀನನೆಂದು, ಸಿರಿಯಾಸೆ ಹಿಡಿದ ಹೆಣವೆಂದು ಭಾವಿಸಿದೆಯಾ ? ನಾನು ಅಂಥವನಿರುತ್ತಿದ್ದರೆ ನಿನ್ನನ್ನು ಕಣ್ಣೆತ್ತಿ ಕೂಡ ನೋಡುತ್ತಿರಲಿಲ್ಲ ! "

" ಮತ್ತೇಕೆ ? "

" ತಂದೆತಾಯಿಗಳ ಮನೋವೇದನೆಗೆ ಕಾರಣನಾಗಲಾ ? "

" ಹಾಗೆಂದು ನನ್ನನ್ನು ಅಗ್ನಿಗೆ ಆಹುತಿ ಕೊಡುವಿರಾ ! "

ವಿಜಯಳ ಪ್ರಶ್ನೆಗೆ ಜವಾಬು ದೊರೆಯದೆ ಅನಂತ ತಬ್ಬಿಬ್ಬಾದನು. ಉಭಯ ಸಂಕಟ ಅನಂತನನ್ನು ಬಾಧಿಸಲಾರಂಭಿಸಿತು.

" ನಾನೇನು ಮಾಡಬೇಕೆನ್ನುವೆ ? "

" ಎಲ್ಲಿಗಾದರೂ ಹೋಗೋಣ ! "

" ಎಲ್ಲಿಗೆ ? "

" ನೀವೆಲ್ಲಿಗೆನ್ನುವಿರೋ ಅಲ್ಲಿಗೆ ! ನಿಮ್ಮ ಪಾದದಡಿಗಳನ್ನೇ ವಿಜಯ ಅನುಸರಿಸುವಳು—ಇದು ಖಂಡಿತ ! "

" ದುಡುಕಬೇಡ, ವಿಜಯಾ ! ಎಲ್ಲಿಗಾದರೂ ಹೋಗಿ—ಅಲ್ಲಿ ಮಾಡುವುದೇನು ? "

" ನೀವು ಗಂಡಸರಾಗಿ ನಿಮಗೆ ಇಷ್ಟು ಧೈರ್ಯವಿಲ್ಲವೆ? ಹುಟ್ಟಿಸಿದವನು ಹುಲ್ಲನ್ನಾದರೂ ಕೊಡದಿರುವನೆ? ಕಲ್ಲಾದರೆ ಕಲ್ಲು, ಮಣ್ಣಾದರೆ ಮಣ್ಣು ಹೊರಬೇಕು! ಜಗನ್ಮಾತೆ ನಮಗೆ ಒಲವು ತೋರಿಸಳೆ? ಅದರ ಮೇಲೆ ದೇವರಿಟ್ಟಂತಾಗುವುದು."

" ಬುದ್ಧಿಯಿಲ್ಲದೆ ಏನನ್ನಾದರೂ ಆಡಬೇಡ, ವಿಜಯಾ! "

" ಮತ್ತೆ, ನಾನೇನು ಮಾಡಬೇಕೆನ್ನುವಿರಿ? "

ಎಂದು ಕಣ್ಣುಗಳಲ್ಲಿ ನೀರು ತಂದುಕೊಂಡು, ಯಾವ ಉಪಾಯವೂ ಕಾಣದಾಗಲು ವಿಜಯ ಅನಂತನನ್ನು ಪ್ರಶ್ನಿಸಿದಳು.

" ನೀವು ನನ್ನನ್ನು ಕೈಬಿಡುವಿರಾದರೆ ಅದಕ್ಕೆ ತಕ್ಕ ಉಪಾಯವನ್ನು ಮಾಡಿಯೇ ಇರುವೆನು! "

" ವಿಜಯಾ! "

" ಏಕೆ? ಸಾಯುವೆನೆಂದು ಭಾವಿಸಿದಿರೇನು?—ವಿಜಯ ಆತ್ಮಹತ್ಯೆ ಮಾಡಿಕೊಳ್ಳುವ ಪ್ರಾಣಿಯೆಂದು ಕನಸಿನಲ್ಲೂ ಎಣಿಸಬೇಡಿ! "

" ನನ್ನಿಂದ ಬಿಚ್ಚಿಡುವೆಯಾ? "

" ಇಲ್ಲ. ಹೇಳುವೆ!—ಹಿಂದೂ ದೇಶದ ಆರ್ಯ ರಮಣಿಯರು ಪ್ರೀತಿಸುವುದಾದರೂ ಮದುವೆಯಾಗುವುದಾದರೂ ಒಬ್ಬನನ್ನೇ! ಮದುವೆಗೆ ಮೊದಲು ಒಬ್ಬನನ್ನು ಪ್ರೀತಿಸಿದಲ್ಲಿ ಅವನನ್ನೇ ಮದುವೆಯಾಗುವುದು; ಇಲ್ಲದಿದ್ದಲ್ಲಿ ಮದುವೆಯಾದವನನ್ನೇ ಪ್ರೀತಿಸುವುದು! ಮದುವೆಯಾಗುವುದೊಬ್ಬನನ್ನು, ಪ್ರೀತಿಸುವುದು ಮತ್ತೊಬ್ಬನನ್ನು ಅಥವಾ ಪ್ರೀತಿಸುವುದು ಒಬ್ಬನನ್ನು, ಮದುವೆಯಾಗುವುದು ಇನ್ನೊಬ್ಬನನ್ನು—ಸಾಧ್ಯವೇ ಇಲ್ಲ! ಪ್ರೀತಿಯೆಂಬುದು ಮಾರಾಟದ ವಸ್ತುವಲ್ಲ; ಜೀವಿತ ಸಮಸ್ಯೆ!........"

" ಹೌದು! ಪ್ರಣಯ-ಪ್ರೀತಿಗಳ ಕುರಿತು ಕತೆ ಕಾದಂಬರಿಗಳಲ್ಲಿ ಓದುತ್ತಾರೆ—ನಾಟಕ ಸಿನೆಮಾಗಳಲ್ಲಿ ನೋಡಿ ಆನಂದಿಸುತ್ತಾರೆ; ರಸಿಕತೆಯನ್ನು ಅನುಭವಿಸುತ್ತಾರೆ! ಆದರೆ ಅದೇ ತಮ್ಮ ಜೀವಿತದಲ್ಲಿ ಸಂಭವಿಸುವ ಸಂದರ್ಭವೊದಗಿತೆಂದರೆ ನಡುಗುತ್ತಾರೆ—ಹೆದರಿ ಹಿಂಜರಿಯುತ್ತಾರೆ!........"

" ನಾನು ಮನಸಾರ ಪ್ರೀತಿಸಿದುದೂ ನಿಮ್ಮನ್ನೇ! ಇನ್ನು ಮದುವೆಯಾಗುವುದಾದರೂ ನಿಮ್ಮನ್ನೇ! ಇದು ನನಗೆ ಲಭಿಸದೆ ಹೋದಲ್ಲಿ ನನಗೆ

ಸಂಸಾರಜೀವನವೆ ಬೇಕಿಲ್ಲ. ಬಾಳುವೆಯ ಮಡಿಲಲ್ಲಿ ಬರಿ ಬರಡಾಗಿಯೆ ಇರಲಿಚ್ಛಿಸುತ್ತೇನೆ! ಆಜನ್ಮಬ್ರಹ್ಮಚಾರಿಣಿ, ಸನ್ಯಾಸಿನಿಯಾಗಿಯೆ ಉಳಿಯುವೆನು! ಈ ಸಮಾಜದಲ್ಲಿ ಕೆಲವು ತಂದೆತಾಯಿಗಳು ತಮ್ಮ ಹೆಣ್ಣುಮಕ್ಕಳ ಹೃದಯವನ್ನರಿಯದೆ, ಹೆಣಗಳಂತೆ ಹಣಕ್ಕೆ ಬಾಯ್ಬಿಟ್ಟು, ಅವರ ಇಚ್ಛೆಗೆ ವಿರೋಧವಾಗಿ ಒಬ್ಬನ ಕೈಗೆ ಹಾಕಿಬಿಡುವರು. ಅನಂತರ ತಮ್ಮ ತಲೆಯ ಮೇಲಿದ್ದ ಮಹಾ ಭಾರವೊಂದು ಇಳಿಯಿತಲ್ಲಾ, ಎಂದು ನೆಮ್ಮದಿ ಹೊಂದುವರು. ಹುಂ! ಎಂಥ ಸಮಾಜ! ಹೆಣ್ಣುಮಕ್ಕಳೆಂದರೆ ತಂದೆತಾಯಿಗಳಿಗೆ ಒಂದು ಭಾರ! ಅವರ ಹೃದಯೇಚ್ಛೆಯರಿತು ವರ್ತಿಸುವ ತಂದೆತಾಯಿಗಳು ಹೆಕ್ಕಿ ತೆಗೆಯಲು ಒಬ್ಬರೂ ಇಲ್ಲದಷ್ಟು ಹೀನಸ್ಥಿತಿ! ಅಂದಮೇಲೆ....ನನ್ನಂತಹ ಅನಾಥಳ ಗತಿಯೇನು? ಇನ್ನು ನಾನು ನಿಮ್ಮೊಡನೆ ಏನೂ ಹೇಳ ಬಯಸುವುದಿಲ್ಲ. ನಿಮ್ಮ ಇಚ್ಛೆ ಏನಿದೆಯೊ ಹಾಗೆ ಮಾಡಬಹುದು!"

"ವಿಜಯಾ, ಹಾಗೆ ನಿರಾಶಳಾಗಬೇಡ! ನಾನು ನಿನ್ನ ಕೈಬಿಡುವುದಿಲ್ಲ! ನನ್ನ ಆತ್ಮಸಾಕ್ಷಿಯಾಗಿ ಹೇಳುವೆ. ಇನ್ನು ನಾನು ಹೋಗಲೆ? ನಾನು ನಿನ್ನನ್ನು ಯಾವ ಸಂದರ್ಭದಲ್ಲಿ ಇನ್ನು ಸಂಧಿಸುವೆನೆಂಬುದು ನಿಶ್ಚಯವಿಲ್ಲ. ನಾನು ಸಿದ್ಧನಾಗಿ ಬಂದಾಗ ನೀನೂ ಸಿದ್ಧಳಷ್ಟೆ?"

"ಸಂದೇಹವೆ?"

ಅನಂತ ವಿಜಯಳನ್ನು ಬಿಟ್ಟು ಹೊರಡಲನುವಾದನು. ವಿಜಯಳ ವಿಶಾಲ ನೇತ್ರಗಳು ಅನಂತನದನ್ನು ಕೂಡಿದವು. ವಿಜಯಳ ಕೋಮಲ ಕರಗಳನ್ನು ತನ್ನ ಕೈಯಲ್ಲಿ ತೆಗೆದುಕೊಂಡಿದ್ದ ಅನಂತ ಬಿಡಲು ಮನಸ್ಸಿಲ್ಲದಿದ್ದರೂ ಬಿಟ್ಟು ಹೊರಟನು. ವಿಜಯಳು ಅಲ್ಲಿಂದ ಹೊರಡದೆ ತನ್ನ ಹೃದಯೇಶ್ವರನು ಕಣ್ಣುಮರೆಯಾಗುವ ತನಕ ನೋಡುತ್ತಿದ್ದು, ಆಶಾಪೂರಿತಳಾಗಿ ಆಶ್ರಮಾಭಿಮುಖವಾಗಿ ಆನಂದದಿಂದ ತೆರಳಿದಳು. ಆದರೂ ತನ್ನ ಈ ಇಚ್ಛೆ ನೆರವೇರುವುದೊ ಇಲ್ಲವೊ ಎಂಬ ಸಂಶಯ ಅವಳನ್ನು ಎಡಬಿಡದೆ ಕಾಡುತ್ತಿತ್ತು.

## ೧೫

ಕೇಳಿದ್ದನ್ನು ಸಂಪೂರ್ಣ ಕೇಳಿ, ತಮ್ಮ ಸಮಸ್ಯೆಯನ್ನು ಆದ್ಯಂತ ಬಿಡಿಸಿ ಅರಿತುಕೊಳ್ಳುವುದರಲ್ಲಿ ಸ್ತ್ರೀ ಜಾತಿಯು ಸ್ವಲ್ಪ ಹಿಂದೆ ಅನ್ನಬಹುದು.

ಸ್ತ್ರೀಯರು ಯಾವುದರಲ್ಲೂ ಆತುರರೆಂದರೆ ತಪ್ಪಾಗಲಾರದು. ಕಾಗೆ ಹಾರಿ ತೆಂದರೆ ಅದನ್ನು ಒಮ್ಮೆಗೆ ನಂಬಿಯೆ ಬಿಡುವರು. ಅಂತೆಯೆ ರಂಗಮ್ಮ, ಈಗ ತನ್ನೊಂದು ಆಸೆ ನೆರವೇರಿತೆಂದೇ ಭಾವಿಸಿ, ದುಃಖದಲ್ಲೊಂದು ಆನಂದವನ್ನು ತಂದುಕೊಂಡು, ಒಳಗೊಳಗೆ ಸಂತೋಷಪಡುತ್ತಿದ್ದಾಳೆ.

ಅಂದು ರಂಗಮ್ಮ ಯಾವುದೋ ಒಂದು ಕಾರಣವನ್ನು ಮಾಡಿಕೊಂಡು, ಬೇಗನೆ ಕೆಲಸ ಮುಗಿಸಿಬಿಟ್ಟು, ಯಜಮಾನಿಯ ಅಪ್ಪಣೆ ಪಡೆದು ಅಲ್ಲಿಂದ ಹೊರಬಿದ್ದಳು. ರಂಗಮ್ಮನಂದು ಯಾವ ಕಾರ್ಯದಿಂದಲೊ ಗುಡಿಸಲ ಕಡೆಗೆ ಹೋಗದೆ ರಮಾನಂದ ಆರೋಗ್ಯಾಶ್ರಮದ ಕಡೆಗೆ ಮುಖ ಮಾಡಿ ನಡೆಯು ತ್ತಿದ್ದಳು.

ದೂರದಲ್ಲಿ ವಿಜಯಕುಮಾರಿ ಬರುತ್ತಿರುವುದನ್ನು ಕಂಡು ಅತ್ಯಾನಂದ ದಿಂದ ಶೀಘ್ರವಾಗಿ ಹೋಗಿ ರಂಗಮ್ಮ ಅವಳನ್ನು ತಬ್ಬಿಕೊಂಡು ಸಂತೋಷದ ಕಣ್ಣೀರು ಸುರಿಸಿದಳು. ಈ ಜನ್ಮದಲ್ಲಿ ಅವಳು ನಡೆಯದೆಂದು ಭಾವಿಸಿದ ಯಾವದೋ ಕಾರ್ಯ ನೆರವೇರುವುದೆಂಬ ಆಲೋಚನೆಯಲ್ಲಿ ತನ್ನೆಲ್ಲ ದುಃಖ ಗಳನ್ನು ಮರೆತಿದ್ದಳೊ ಏನೊ! ಆಸೆ ನಿರಾಶೆಗಳಿಂದ ಮಿಶ್ರಿತವಾದ ವಿಜಯಳ ಮನಸ್ಸು ರಂಗಮ್ಮನ ಈ ರೀತಿಯ ನಡೆಯನ್ನು ನೋಡಿ ತಲ್ಲಣಿಸಿತು.

" ಅಮ್ಮಾ, ಇದೇಕೆ ಈ ರೀತಿ ?........"

" ವಿಜಯಾ, ನೀನಿಂದು....ನ....ನ್ನ....ನ್ನು ' ಅಮ್ಮಾ ! ' ಎಂದು ಕರೆದೆಯೇಕೆ ? "

" ಏಕೆ ? ತಪ್ಪಾಯಿತೆ ? ನನ್ನನ್ನು ಹೆರುವಷ್ಟು ಪ್ರಾಯವಾಗಲಿಲ್ಲವೆಂದೆ ನಿನಗೆ ? "

" ಇಲ್ಲವಮ್ಮಾ ! ಅಂತಹ ತುಚ್ಛ ಭಾವ ನನ್ನಲ್ಲಿಲ್ಲ. ನೀನು ನನ್ನನ್ನು ' ಅಜ್ಜಿ ' ಎಂದು ಕರೆದರೂ ಸಂತೋಷ! ಆದರೆ........ನೀನು ನನ್ನನ್ನು ' ಅಮ್ಮಾ ' ಎಂದು ಕರೆದಾಗ ನನಗೆಷ್ಟು ಆನಂದವಾಯಿತೆಂದು ಬಲ್ಲೆಯಾ ? ಅದನ್ನು ನನ್ನಿಂದ ಬಾಯಾರೆ ಬಣ್ಣಿಸಿ ಹೇಳಲು ಸಾಧ್ಯವಿಲ್ಲ. ಅದನ್ನು ಅನುಭವಿಸಿದವರಿಗೇ ತಿಳಿಯಲು ಸಾಧ್ಯ."

" ಹಾಗಾದರೆ ನಾನು ಇಂದಿನಿಂದ ನಿನ್ನನ್ನು ' ಅಮ್ಮಾ ' ಎಂದು ಕರೆಯಲೆ ? "

" ಆ ಭಾಗ್ಯ ನನಗೆ ಈ ಜನ್ಮದಲ್ಲಿ ಲಭಿಸೀತೆಂದು ನಾನು ಕನಸಿನಲ್ಲಿಯೂ ನೆನಸಿರಲಿಲ್ಲ, ಮಗೂ ! "

" ಹಾಗಾದರೆ ನೆನಪಿನಲ್ಲಿ ಭಾವಿಸುವೆಯಾ ? ಇಂದಿನಿಂದ ನೀನು ನನ್ನ ತಾಯಿ—ನಾನು ನಿನ್ನ ಮಗಳು."

' ನೀನು ನನ್ನ ತಾಯಿ, ನಾನು ನಿನ್ನ ಮಗಳು '—ವಾಕ್ಯವನ್ನು ವಿಜಯಳ ಬಾಯಿಂದ ಕೇಳಲು ರಂಗಮ್ಮ ಆನಂದದಿಂದ ವಿಜಯಳ ಮುಖವನ್ನವಲೋಕಿಸಿದಾಗ ಮುಗುಳುನಗೆಯೊಂದು ಅವಳ ಮುಖದ ಮೇಲೆ ನಲಿದಾಡಿತು. ಸಮೀಪ ಸರಿದು ವಿಜಯಳ ಮುಖವನ್ನು ತನ್ನೆರಡು ಕೈಗಳಿಂದಲೂ ಹಿಡಿದು, ಹಿಂದೆಂದೂ ಅವಳನ್ನು ಕಂಡಿರದವಳಂತೆ ದಿಟ್ಟಿಸಿ ಅವಳ ಮೊಗವನ್ನೇ ನೋಡಿದಳು.

" ಮಗೂ, ವಿಜಯಾ ! ನಿನಗೆ ಭಾಗ್ಯದೇವತೆ ಬಾಗಿಲು ತೆರೆದಿರುವಳಮ್ಮಾ, ಬಲ್ಲೆಯಾ ? "

" ನಿನ್ನ ಮಾತು ಅರ್ಥವಾಗಲಿಲ್ಲವಲ್ಲಾ ! "

" ಬೇಗನೆ ಅರ್ಥವಾಗುವುದು ! "

" ಹೂಂ ! ಈಗರ್ಥವಾಯ್ತು. ಅದು ಭಾಗ್ಯದೇವತೆಯಲ್ಲ, ರಕ್ಕಸನ ಮನೆ ಬಾಗಿಲು ! ಅದರೊಳಗೆ ಹೊಗುವ ಮುನ್ನ ದೇವರು ನನ್ನನ್ನು ಕೊಂಡುಹೋಗುವನಾದರೆ ನನಗೆ ಒಳಿತಾಗುತ್ತಿತ್ತು. ಹಣೆಬರಹ ಹೇಗಿದೆ ಯಾರು ಬಲ್ಲರು ! "

" ಹಾಗೇಕೆ ಅಮಂಗಳ ಹೇಳುವೆ, ಮಗು ? "

" ಈ ಜನ್ಮದಲ್ಲಿ ನನಗೆ ಮಂಗಳವಾಗುವುದು ಹಗಲುಗನಸೆಂದು ಭಾವಿಸಿದ್ದೇನೆ ! "

" ಅನಂತನಿಗಿಂತಲೂ ಮಿಗಿಲಾದ, ನಿನ್ನ ಪ್ರೇಮಕ್ಕೊಳಗಾದ ಇನ್ನೊಬ್ಬನು ಯಾವನು ? "

" ಅನಂತನನ್ನು ಜಯಿಸಲು ವಿಜಯ ಕಾತರಳಾಗಿರುವಳು. ಅವನೇ ನನ್ನ ಅಧಿದೇವರು. ಆದರೆ ?........"

" ಆದರೇನು ? "

" ವಿಜಯಳಿಗೆ ವಿಜಯ ದೊರೆವಂತಿಲ್ಲ. ಪರಾಧೀನಳಾಗಬೇಕಾದ ಸಂದರ್ಭ ಒದಗಿ ಬರುತ್ತಿದೆ."

" ಏನು ? "

" ಏನೆಂದು ಹೇಳಬೇಕೆ! ವಿಜಯ ಕಲೆಕ್ಟರ್ ತೇಜಪಾಲರಾಯರ ಕೈವಶವಾಗಬೇಕಾಗಿದೆ. ವಿಜಯಳ ಕೊರಳನ್ನು ಕತ್ತಿಯಿಲ್ಲದೆ ಕುಯ್ಯಲು ಹವಣಿಸುತ್ತಾರೆ."

" ವಿಷಯ ಹೀಗೆಯೆ ? ಅನಂತ ಈ ವಿಷಯವನ್ನು ನನ್ನ ಮುಂದೆ ಹೇಳಲಿಲ್ಲವಲ್ಲ ! "

" ಮತ್ತೇನೆಂದು ಹೇಳಿದರು ? "

" ಹೇಳುವುದೇನಿದೆ ! ನಿನ್ನಂತೆಯೆ ಅವನೂ ಅಂದನು."

' ಪಾಪಿಯ ಪಾದವನ್ನು ಪೂಜಿಸುವುದೆ ? ವಿಜಯಳು ಕಾವಿಬಟ್ಟೆ ಉಟ್ಟರೂ ಆ ಅಧಮನ ಕೈಹಿಡಿಯ ಬಿಡೆ—ಅಯ್ಯೋ ! ಇದು ನನ್ನಿಂದ ಸಾಧ್ಯವೆ ? ' ಎಂದು ಮುಂತಾಗಿ ಯೋಚಿಸಿದ ರಂಗಮ್ಮ, " ಮಗು, ನಿನಗಾರು ಹೇಳಿದರು, ಇದನ್ನು ? " ಎಂದಳು.

" ಅವರೇ ! "

" ಹಾಗಾದರೆ........ಆಗಲೇ ನನಗೆ ಹೇಳುತ್ತಿದ್ದ........ರಾಯರೂ ಪದ್ಮಮ್ಮನೂ ಬಂದರೆಂದು ನಾನು ಹೋಗಿಬಿಟ್ಟೆ........ಇರಬಹುದು ! " ಎಂದಳು. ಆದರೆ ವಿಜಯಳಿಗೆ ಆ ಅಪೂರ್ಣ ವಾಕ್ಯಗಳ ಅರ್ಥವಾಗಲಿಲ್ಲ.

' ನಾನೊಂದು ನೆನೆದರೆ, ಅವನೊಂದು ನೆನೆವ ! ಇದೇ ಸುಖವೆಂದು ತಿಳಿದು ಸಂತೋಷಪಡುವ ಹೊತ್ತಿಗೆ, ಅದೇ ಶೋಕವಾಗಿ ಪರಿಣಮಿಸುತ್ತಿದೆ ! ಹಣ್ಣೆಂದು ಸುಲಿದರೆ, ಒಳಗೆ ಹುಳ ; ಇಲ್ಲದಿದ್ದರೆ ಹುಳಿಹುಳಿ ! ಬೆಣ್ಣೆಯೆಂದು ಮುಟ್ಟಿನರೆ ಅದೇ ಸುಣ್ಣ ! ಪಾಪಿ ಹೋದೆಡೆಯೆಲ್ಲಾ ಪಾತಾಳವೆ ! ದೇವರೆ ! ನನ್ನ ಹೃದಯವನ್ನರಿತ ಕಲ್ಲಾದರೂ ಕರಗುವುದಲ್ಲಾ ! ನಿನ್ನ ಮನ ಕರಗುವುದಿಲ್ಲವೆ ? ನನ್ನ ವಿಜಯಳಿಗೆ ವಿಜಯವನ್ನು ದಯಪಾಲಿಸು ! ನನ್ನ ಈ ಅಂತರ್ಯದ ಒಂದೇ ಒಂದು ಮಹದಿಚ್ಛೆಯನ್ನು ನೆರವೇರಿಸು ! ಅದಾದರೂ ವಿಜಯಳಿಗೆ ವಿಜಯವೆ ! ' ಎಂದು ಪರಿಪರಿಯಾಗಿ ನೆನೆ ನೆನೆದು ರಂಗಮ್ಮ ತನ್ನಲ್ಲೇ ದುಃಖಿಸುತ್ತಿದ್ದಳು.

ಬಾಯಲ್ಲಿ ಬಡಬಡಿಸುವುದಲ್ಲದೆ ಕೈಯಲ್ಲಿ ಸಾಧ್ಯವಿದೆಯೆ ? ವಿಜಯ ಕಾವಿ ಬಟ್ಟೆ ಧರಿಸುವಳಂತೆ........ಸಾಮಾನ್ಯವಾಗಿ ಉಭಯ ಸಂಕಟದಲ್ಲಿ

ಬಿದ್ದಾಗ, ಬೇರೆ ದಾರಿಯಿಲ್ಲವೆಂದು ಸೋಲೇ ಖಚಿತವಾದಾಗ, ಆವೇಶಭರದಲ್ಲಿ ಏನನ್ನಾದರೂ ಹೇಳಿಬಿಡುವುದೆ ಹೆಚ್ಚು! ಮದುವೆಯಾಗುವ ಮುನ್ನ ಗಂಡನಾದವನು ಹೆಂಡತಿ ಬಂದರೆ ತಾನವಳನ್ನು 'ಹಾಗೆ ಮಾಡಿಬಿಡುವೆ, ಹೀಗೆ ಮಾಡಿಬಿಡುವೆ!' ಎಂದು, ಅವಳು ಬಂದನಂತರ ಅವಳ ದಾಸನಾದನಂತೆ! ಹಾಗೆ, ಆಡುವುದೊಂದು, ಮಾಡುವುದೊಂದು, ಆಗುವುದು ಬೇರೆ ಒಂದು! ಜಗತ್ತಿನಲ್ಲಿ ನೆನೆಸಿದ್ದೆಲ್ಲಾ ನಡೆಯುವಂತಿದ್ದರೆ ಮನುಷ್ಯನಿಗಿನ್ನೇನು ತಾನೆ ಬೇಕಾಗಿದೆ. ನಡೆಯುವುದು ನಡೆದೇ ಹೋಗುವುದು, ಇರಲಿ.

ಆಶಾಪೂರಿತವಾಗಿದ್ದ ರಂಗಮ್ಮನ ಹೃದಯದಲ್ಲಿ ಈಗ ನಿರಾಶೆ ಬಂದು ನುಸುಳಿತು. ಸಮುದ್ರದಲ್ಲಿ ಮುಳುಗುವವನಿಗೆ ಹುಲ್ಲುಕಡ್ಡಿಯೂ ದೊರೆಯದಿದ್ದರೆ ಅವನು ಆಗ ಮರಣಕ್ಕೆ ಗುರಿಯಾಗುವಂತೆ ದುಃಖದಲ್ಲಿ ಹುದುಗಿದ್ದವಳ ಹೃದಯಕಲಶದಲ್ಲಿ ಆಸೆಯೊಂದು ಒಡೆದಿತ್ತಾದರೂ ಅದರೊಳಗೆ ನಿರಾಶೆಯ ಬೀಜ ತುಂಬಿದ್ದುದನ್ನು ಕಂಡ ರಂಗಮ್ಮ ಏನು ಮಾಡುವುದೆಂದು ದಿಕ್ಕುಗಾಣದವಳಾಗಿ, ಮತಿವಿಭ್ರಾಂತಿಯಿಂದ ಶಿಲಾಮೂರ್ತಿಯಂತಾದಳು. ಅವಳ ಕಂಠದಿಂದ ಯಾವ ಮಾತೂ ಆಗ ಹೊರಡುವಂತಿರಲಿಲ್ಲ.

'ವಿಜಯಳನ್ನು ಇಲ್ಲಿಂದ ತಪ್ಪಿಸೋಣವೆ? ತಪ್ಪಿಸಿ?....ಅನಂತನನ್ನು ಈ ಕಾರ್ಯದಲ್ಲಿ ಎದುರು ನಿಲ್ಲುವಂತೆ ಮಾಡೋಣವೆ? ಛಿ! ಅದಾಗದು! ತಂದೆತಾಯಿಗಳ ಎದುರು ನಿಲ್ಲಲು ಪ್ರೇರೇಪಿಸಿದಂತಾಗಿ, ಒಳ್ಳೆಯ ಮಗನನ್ನು ಅವಿಧೇಯತೆಯ ಗುಂಡಿಗೆ ನೂಕಿ, ಅಧಮನನ್ನಾಗಿ ಮಾಡಿದ ಪಾಪ ನನ್ನನ್ನು ಬಿಡುವುದೆ? ಅದಲ್ಲದೆ ಅವರ ಏಕಮಾತ್ರ ಪುತ್ರನಾತ! ಆಧಾರಸ್ತಂಭ!.... ವಿಷಯವನ್ನು ತಿಳಿಸಿ ಪದ್ಮಮ್ಮನ ಕಾಲಿಗೆ ಬಿದ್ದು ಬೇಡಿಕೊಳ್ಳಲೆ? ಏನೆಂದು? ಅವರು 'ಅವಳಿಗೋಸ್ಕರ ನೀನೇಕೆ ಇಷ್ಟು ಅಕ್ಕರೆ ವಹಿಸುವೆ' ಎಂದು ಕೇಳಿದರೆ! ಏನೆಂದು ಉತ್ತರ ಕೊಡಲಿ? ಅರಮನೆಯ ಅರಸುಕುಮಾರಿಯನ್ನೆ ಬೇಕೆಂದರೂ ತಂದುಕೊಡಲು ಸಿದ್ಧರಾಗಿರುವ ತಂದೆತಾಯಿಗಳು, ತಮ್ಮ ಏಕಮಾತ್ರ ಪುತ್ರರತ್ನಕ್ಕೆ ಈ ಬಡ ಹುಡುಗಿಯನ್ನು ಮದುವೆ ಮಾಡಿಸಿಯಾರೆ? ಇದು ಬರಿ ಹಗಲುಗನಸಲ್ಲವೆ? ಬಿಸಿಲುಗುದುರೆಯನ್ನು ಹಿಡಿಯ ಹೊರಟಂತೆ ಸರಿ! ಅಲ್ಪನು ಅಂಬಾರಿಯಲ್ಲಿ ಕೂಡುವ ಯೋಗವನ್ನು ಬಯಸಿದಂತೆ!.... ಮಥುರಾನಾಥರಿಗೆ ನಿಜವನ್ನು ವ್ಯಕ್ತಪಡಿಸಲೆ? ಅಯ್ಯೋ! ಮರೆತೆ! ಅಂದು

ನಾನು ಅನಂತನಿಗೆ ಕೊಟ್ಟ ಭಾಷೆ! ಅವನ ಶಿರದ ಮೇಲೆ ಕೈಯಿಟ್ಟು ಮಾಡಿದ ಆಣೆ!' ....ಮುಂತಾವ ಅನೇಕ ಸಮಸ್ಯೆಗಳಲ್ಲಿ ತೇಲಾಡಿ ರಂಗಮ್ಮನ ಮನಸ್ಸು ಯಾವುದರಲ್ಲಿಯಾಗಲಿ ಸ್ಥಿರಗೊಳ್ಳುವಂತಿರಲಿಲ್ಲ. ಯಾವ ಭಾಗಕ್ಕೆ ತಿರುಗಿದರೂ ಅಲ್ಲಿ ಅಡ್ಡಗೋಡೆಗಳು ಎದ್ದು ನಿಲ್ಲುತ್ತಿದ್ದವು. ವಿಜಯಳ ಪಕ್ಕದಿಂದ ಕದಲ ಬೇಕಾದರೆ ಅವಳಿಗೆ ಯಾವ ತರದ ಸಮಾಧಾನೋಕ್ತಿಯನ್ನು ಹೇಳುವುದೆಂದು ತಿಳಿಯದೆ ರಂಗಮ್ಮ ವಿಧವಿಧವಾಗಿ ಯೋಚಿಸಿದಳು.

"ಅಮ್ಮಾ?"

"ಏನು, ಮಗೂ!"

"ನಾನೊಂದು ಕೇಳಬೇಕೆಂದಿರುವೆ....ಕೇಳಲೆ?"

"ಕೇಳಮ್ಮಾ!"

"ನನ್ನನ್ನು ನೀನು ಇಷ್ಟು ಪ್ರೀತಿಸಲು ಕಾರಣವೇನು? ಇಷ್ಟು ನನಗಾಗಿ ಖತಿಗೊಳ್ಳುವೆಯಲ್ಲ!"

"ಏನೂ ಇಲ್ಲವಮ್ಮ."

"ಇದೆ."

"ಏನಿದೆ?"

"ನಾನೇನರಿತೆ? ನಿನ್ನೊಡನೆ ಕೇಳಿದರೆ!...."

"ನಿನ್ನಂತೆಯೆ........ನನಗೂ....ಒಬ್ಬಳು ಮ....ಗಳಿರ....ಬೇಕಾಗಿತ್ತು ಈ ಹೊತ್ತಿನಲ್ಲಿ!"

"ನಿನಗೊಂದು ಮಗುವಿತ್ತೆ? ನೀನು ಬಂಜೆಯಲ್ಲವೆ ಹಾಗಾದರೆ!"

"ಅಲ್ಲ, ಮಗೂ."

"ಮಗು ತೀರಿಹೋಯಿತೆ?"

"ಅಂ! ಹಂ! ಹಾಂ!"

"ಮಗು ಚಿಕ್ಕದಿರುವಾಗಲೆ ತೀರಿಹೋಯಿತೆ, ಅಂದೆ!"

"ಈ ಪ್ರಶ್ನೆಗೆ ನನ್ನಿಂದ ಉತ್ತರವನ್ನು ಬಯಸಬೇಡ, ಮಗೂ. ನನಗೆ ಅದನ್ನು ಗಣನೆಗೆ ತರುವಾಗ ದುಃಖವಾಗುತ್ತದೆ."

"ಹೋಗಲಿ ಬಿಡು, ಇನ್ನೊಂದು ಪ್ರಶ್ನೆ...."

"ಕೇಳು."

"ನನ್ನ ವಿಷಯವಾಗಿ ನೀನೇನಾದರೂ ಬಲ್ಲೆಯಾ? ಅಂದರೆ—ನನ್ನ ತಂದೆತಾಯಿಗಳ ವಿಷಯವಾಗಿ ಅಥವಾ ನನ್ನ ಜಾತಿಮತಗಳ....ನನಗೆ ಅದರ ವಿಷಯದಲ್ಲಿ ನಂಬಿಕೆಯಿಲ್ಲದಿದ್ದರೂ....ಏನಾದರೂ ಗೊತ್ತಿದೆಯೆ? ದೇವರು ನನ್ನನ್ನು ಈ ಸ್ಥಿತಿಗೆ ತರಲು ಕಾರಣವೇನು?"

"ದೇವರ ಅಂತರ್ಯವರಿಯಲು ನನಗೆಲ್ಲಿಂದ ಸಾಧ್ಯ, ಮಗೂ! ಈ ಸ್ಥಿತಿಗೆ....ಅಂದೆಯಲ್ಲ....ಯಾವ ಸ್ಥಿತಿಗೆ....ಯಾವ ಸ್ಥಿತಿಗೂ ತಂದಿಲ್ಲ ನಿನ್ನನ್ನು ದೇವರು!....ಇನ್ನೂ ಒಳ್ಳೇ ಸ್ಥಿತಿಗೆ ತರ್‍ತಾನೆ....ನೀನೇನೂ ಹೆದರಬೇಡ!.... ಹೆಸರಿಗೆ ತಂದೆತಾಯಿಗಳೆಂದಿಬ್ಬರು ಇಲ್ಲವೆಂದಲ್ಲದೆ ಬೇರೆ ಯಾವ ಕೊರತೆ ಯಾಗಿದೆ ನಿನಗೀಗ? ನಿನ್ನ ವಿಷಯವಾಗಿ ನೀನೆಷ್ಟು ಬಲ್ಲೆಯೊ ಅಷ್ಟೇ ನಾನೂ ಬಲ್ಲೆ!"

"ಇದು ನಿಜವೆ?"

"ಹಾಂ! ಹೌದು!...."

"ಇನ್ನೊಂದು ಪ್ರಶ್ನೆ ಕೇಳಲೆ?"

"ಬೇಡ, ಮಗೂ! ಪಾಪ, ಪಾರಮ್ಮ ಮಧ್ಯಾಹ್ನ ಹೊಟ್ಟೆಗಿಲ್ಲದೆ ಬಡವಾಗಿ ನನ್ನನ್ನೇ ಇದಿರು ನೋಡುತ್ತಿರಬಹುದು. ನನಗಾದರವಿತ್ತವಳು; ಅವಳನ್ನು ನಾನು ಬಳಲಿಸದೆ ಆದರಿಸುವುದು ನನ್ನ ಕರ್ತವ್ಯ. ನಾಳೆ ಬರುವೆ. ಆಗ....ಹಾಂ! ಹೋಗಲೆ?"

ಎಂದು ರಂಗಮ್ಮ ವಿಜಯ ಕುಮಾರಿಯ ವಚನ ಹೊಂದಿದಳೊ ಇಲ್ಲವೊ ಅಲ್ಲಿಂದ ಕಾಲ್ತೆಗೆದಳು. ಆದರೆ ಮುಂದಿಡುವ ಕಾಲುಗಳು ಅವಳನ್ನು ಹಿಂದೆ ಹಿಂದೆ ಒಯ್ಯುವಂತೆ ಭಾಸವಾಯಿತು. ಅವಳನ್ನೇ ನೆಟ್ಟ ನೋಟದಿಂದ ನೋಡುತ್ತಿದ್ದ ವಿಜಯಳನ್ನು ರಂಗಮ್ಮ ತನ್ನ ದಿಟ್ಟಿಗೆ ಮರೆಯಾಗುವ ತನಕ ತಿರುತಿರುಗಿ ನೋಡುತ್ತ ಮುನ್ನಡೆದಳು. ರಂಗಮ್ಮ ಏನೇನೋ ಯೋಚಿಸುತ್ತಾ ನಡೆದಳು. 'ವಿಜಯ ನನ್ನನ್ನು ಮೂರನೆಯ ಸಲ ಪ್ರಶ್ನಿಸ ಬಯಸಿದುದು ಯಾವದಾಗಿರಬಹುದು? 'ತೇಜಪಾಲ ಕೈಹಿಡಿಯುವ, ಮದುವೆಯೆಂಬ ಕಂಟಕದಿಂದ ನನ್ನನ್ನು ಪಾರು ಮಾಡುವೆಯಾ?' ಎಂದು ಕೇಳ ಬಯಸಿರ ಬಹುದೇ? 'ಅವಳು ಹಾಗೆ ಕೇಳಿದ್ದ ಪಕ್ಷದಲ್ಲಿ ನಾನು ಉತ್ತರ ಕೊಡುವು ದಾದರೂ ಏನನ್ನು? ಅದರಿಂದ ತಪ್ಪಿಸಿಕೊಂಡು ಬಂದುದೇ ಒಳಿತಾಯಿತು!

ಆದರೆ ಅವಳ ಮನಸ್ಸು ಸದಾ ಅನಂತನಿಗಾಗಿ ತಲ್ಲಣಿಸುತ್ತಿರಬಹುದೆ! ಈ ಕಂಟಕದಿಂದ ಅವಳನ್ನು ಹೇಗೆ ತಾನೆ ಬದುಕಿಸಲಿ? ಅವಳನ್ನು ಎಲ್ಲಿಗಾದರೂ ಕರೆದೊಯ್ಯಲೆ? ಕರೆದೊಯ್ದು ಮಾಡುವುದೇನು? ಆಗ ಅವಳ ಇಚ್ಛೆ ಪೂರ್ತಿ ಯಾಗುವುದೆ? ನನ್ನಂತೆ ಅವಳನ್ನೂ ಗತಿವಿಹೀನಳನ್ನಾಗಿ ಮಾಡಲೆ? ನನ್ನ ವಿಜಯಳನ್ನು ಆ ಅಧಮನ ಕೈಹಿಡಿಯಲು ಬಿಡೆ! ಅವಳು ಆಜನ್ಮ ಅವಿವಾ ಹಿತಳಾಗಿ ಉಳಿದರೂ ಸರಿಯೆ!' ಎಂದು ಆಲೋಚನಾಮಗ್ನಳಾಗಿ ಬರು ತ್ತಿದ್ದ ರಂಗಮ್ಮನಿಗೆ ಗುಡಿಸಲು ಕಾಣಿಸಲು ಅಲ್ಲಿಗೆ ಧಾವಿಸಿದಳು. ಅಂತೂ ಕಾರ್ಯಾನುವರ್ತಿಯಾದಳು.

## ೧೬

'ಸ್ವರ್ಗವಂತೆ—ನರಕವಂತೆ! ನೋಡಿ ಬಂದು ತಿಳಿಸಿದವರು ಯಾರಾ ದರೂ ಇರುವರೆ? ಅದೊಂದು ವೇಳೆ ಇದ್ದರೂ ಜೀವ ಈ ದೇಹವನ್ನು ತೊರೆದ ನಂತರ. ಆ ಸ್ವರ್ಗ–ನರಕಗಳೆಂಬ ಬೀಡು ಜೀವಕ್ಕೆ ಸಂಬಂಧಿಸಿದುದು. ಜೀವ ಈ ದೇಹದೊಳಗೆ ಇರುವ ತನಕ ಅವನು ಮನುಷ್ಯ, ಅದು ಹಾರಿಹೋದರೆ ಇದು ಕಳೇಬರ—ಹೆಣ! ದೇಹ ಮಣ್ಣಿನೊಂದಿಗೆ ಸೇರಿ ಮಣ್ಣಾಗುವಂತಹದು. ಅಂದಮೇಲೆ ದೇಹಕ್ಕೂ ಜೀವಕ್ಕೂ ಇರುವ ಸಂಬಂಧವಾದರೂ ಏನು? ಸ್ವರ್ಗ ಕ್ಕಾಗಲಿ, ನರಕಕ್ಕಾಗಲಿ ಹೋಗುವುದು ಜೀವವಷ್ಟೆ! ಜೀವಕ್ಕಾಗಿ ದೇಹವೇಕೆ ನಿಸರ್ಗ ಸುಖವನ್ನು ತೊರೆದುಕೊಳ್ಳಬೇಕು? ಜನ್ಮವೆತ್ತಿದಮೇಲೆ ಇಹಲೋಕ ದಲ್ಲಿ ದೊರೆಯುವ ಸುಖಗಳನ್ನೆಲ್ಲ ಬಿಡಬೇಕೇಕೆ? ಹಿಂದೆ ಒಬ್ಬಳು ಅರಸನನ್ನು ನಂಬಿ ಗಂಡನನ್ನು ಬಿಟ್ಟಳಂತೆ; ಕಡೆಗೆ ಅರಸನೂ ಇಲ್ಲ, ಗಂಡನೂ ಇಲ್ಲ ಎಂದಾಯಿತಂತೆ! ಈ ಮೂಢ ಜನರು ಇರುವ ಹಕ್ಕಿಯನ್ನು ಬಿಟ್ಟು ಹಾರುವ ಹಕ್ಕಿಯನ್ನು ಹಿಡಿಯ ಬಯಸುವರು. ಜಗತ್ತಿನಲ್ಲಿ ಸಿಗಬಹುದಾದ ಸುಖಭೋಗಗಳನ್ನು ಬಿಡದೆ ದಕ್ಕಿಸಿಕೊಳ್ಳಬೇಕು! ಮನುಷ್ಯನಿಗೆ ಜನ್ಮ ಕೊಟ್ಟು ಅವನಿಗೆ ಬೇಕು ಬೇಕಾದುದೆಲ್ಲವನ್ನೂ ಭೂಲೋಕದಲ್ಲಿ ನಿರ್ಮಿಸಿರುವ ಪರಮಾತ್ಮನು 'ಇದನ್ನೆಲ್ಲ ತ್ಯಜಿಸಿಬಿಡು' ಅಂದನೆ? ಹಾಗೆ ತ್ಯಜಿಸು ವಂತಿದ್ದರೆ ಆತನು ಇದನ್ನೆಲ್ಲ ಏಕೆ ನಿರ್ಮಿಸುತ್ತಿದ್ದನು? ಮನುಷ್ಯನನ್ನು ಹುಟ್ಟಿಸುತ್ತಿದ್ದನೆ? ಸ್ತ್ರೀ–ಪುರುಷರೆಂಬ ಎರಡು ರೂಪಗಳನ್ನು ನಿರ್ಮಾಣ

ಮಾಡುತ್ತಿದ್ದನೇಕೆ? ಮಾಡಿ, ಪರಸ್ಪರ ಆಕರ್ಷಣೆಗನುವಾದ ಅಂಗಾಂಗ ರೂಪಭೇದವನ್ನು ಕಲ್ಪಿಸಿ ಸೃಷ್ಟಿಸಿದ್ದೇಕೆ? ಶ್ರೀಕೃಷ್ಣನೇ ಅದೆಷ್ಟು ಗೋಪಿಕಾ ಸ್ತ್ರೀಯರನ್ನು ಹಾಳುಮಾಡಲಿಲ್ಲ! ಮನುಷ್ಯ ಅದೇಕೆ ಲೋಕಸುಖಕ್ಕೆ ಹೆದರುವನೊ! ಮಹಿಳೆಯನ್ನು ಮೋಹಿಸುವುದು ಪಾಪ! ಛಿ! ಇದು ಮೂರ್ಖತನ! ಪ್ರೇಮವೆ ಜಗತ್ತಿನ ಉದ್ಧಾರ! ನನ್ನ ಹಾವಭಾವಗಳಿಂದ ನಾನು ಅವಳನ್ನು ಪ್ರೀತಿಸುತ್ತೇನೆಂದು ತಿಳಿದುಕೊಳ್ಳುವ ಶಕ್ತಿ ಅವಳಿಗಿರುತ್ತಿದ್ದರೆ ಈವರೆಗವಳು ಸುಮ್ಮನಿರುತ್ತಿದ್ದಳೆ? ಪಾಪ! ಅಂದು ನಾನು ನನ್ನ ಆಫೀಸನ್ನು ಬಿಟ್ಟು ಹೊರಗೆ ಹೋಗಿ ಹಿಂದಿರುಗಿ ಬರುವಾಗ ನೀರಿನ ಸೀಸೆಗಾಗಿ ಕಾದು ನಿಂತಿದ್ದವಳು ತನ್ನೆದೆಯ ಮೇಲಣ ಸೀರೆಯನ್ನು ಪೂರ್ಣ ತೋಯಿಸಿದ್ದಳು; ಇದರಿಂದ ಅವಳು ನನ್ನನ್ನು ಪ್ರೀತಿಸುತ್ತಿದ್ದಾಳೆಂದು ಒಡೆದು ಕಾಣುತ್ತದೆ. ಸ್ತ್ರೀಯರಂತೂ ತಮ್ಮ ಮನದಿಚ್ಛೆಯನ್ನು ತಾವಾಗಿಯೇ ಹೊರಗೆಡವರೆಂಬುದು ಲೋಕ ಸಿದ್ಧಾಂತ! ನಾನೂ ಅದಕ್ಕೆ ಗಮನ ಕೊಡದಿದ್ದರೆ ಅವಳು ಸುಮ್ಮನೆ ಕೊರಗಿ ಕೊರಗಿ ಬತ್ತಿಹೋದಾಳು. ನಾನೇ ಸುಮ್ಮನೆ ಬಾಯಿ ಬಿಡಬೇಕು' ಎಂಬ ಆಲೋಚನಾತರಂಗಗಳಲ್ಲಿ ಮಂಚದ ಮೇಲಿನ ಸುಖಾಸನದಲ್ಲಿ ಮಲಗಿದ್ದ ತೇಜಪಾಲ ಮುಳುಗೇಳುತ್ತಿದ್ದನು.

ಐ.ಸಿ.ಎಸ್. ಪಾಸಾದರೆ ಲೌಕಿಕ ಜ್ಞಾನವೆಲ್ಲಿಂದ ಬಂದೀತು! ಗೋಪಿಕಾ ಸ್ತ್ರೀಯರನ್ನು ಮೋಹಿಸಿದ ಶ್ರೀಕೃಷ್ಣನ ನೆನಪು, ತಾನಾಗ ಹತ್ತಿರವಿದ್ದು ನೋಡಿದ್ದನೊ ಎಂಬಂತೆ ಬಹು ಬೇಗನೆ ತೇಜಪಾಲನ ತಲೆಗೆ ಹೊಳೆಯಿತು. ಆದರೆ ಸ್ತ್ರೀವ್ಯಾಮೋಹದಿಂದ ಮತ್ತನಾದ ರಾವಣನ ಗತಿಯೇನಾಯಿತೆಂಬುದರ ನೆನಪೇಕೆ ಬರಲಿಲ್ಲವೊ? ರಾಧೆಯನ್ನು ಮೋಹಿಸಿದ ಕಂಸನ ಪಾಡೇನಾಯಿತೆಂಬುದರ ನೆನಪೇಕೆ ಬರಲಿಲ್ಲವೊ? ಪ್ರೇಮವೇ ಜಗದೋದ್ಧಾರವೆಂದು ತೇಜಪಾಲನಿಗೆ ಗೊತ್ತು; ಆದರೆ ಎಲ್ಲಿ, ಯಾರೊಂದಿಗೆ, ಯಾವ ರೀತಿಯಲ್ಲಿ, ಯಾವ ಸಂದರ್ಭದಲ್ಲಿ ಎಂಬುದು ಅವನಿಗೆ ಗೊತ್ತಿಲ್ಲ! ಪರಸ್ತ್ರೀಯನ್ನು ವಿಷಯವಾಸನೆಯಿಂದೊಡಗೂಡಿದ ಕಾಮಪ್ರವರ್ತಕ ಮೃಗಮೋಹ ದೃಷ್ಟಿಯಿಂದ ನೋಡುವುದಷ್ಟೂ ಪ್ರೇಮವೆಂದು ಹೆಸರಿತ್ತ, ತೇಜಪಾಲ! ತನ್ನ ಹಂಚಿಕೆಯ ಯೋಗ್ಯಾಯೋಗ್ಯತೆಯ ಕಡೆಗೆ ಮನಸ್ಸುಗೊಡಲಿಲ್ಲ. ತಾನು ಹಾಕಿದ ಗಾಳಕ್ಕೆ ಮೀನು ಸಿಕ್ಕಲೇಬೇಕೆಂಬುದು ಅವನ ದೃಢನಿಶ್ಚಯ. ಆದರೆ ಗಾಳಕ್ಕೆ ಸಿಕ್ಕಿದ ಮೀನು

ಜೀವಂತ ಸಿಗದೆಂಬುದನ್ನು ಅವನಿಗೇನು ಗೊತ್ತು! ಒಟ್ಟು ತನ್ನ ಪ್ರೇಮಪಿಪಾಸೆಯನ್ನು ಪರಿಹರಿಸಿಕೊಂಡರೆ ಸರಿ, ಹೇಗಾದರೇನು? ನಿಸರ್ಗ ಸುಖವನ್ನು ಅನುಭವಿಸಿ ಆನಂದಿಸುವದು ಹೀಗೇ ಆಗಬೇಕೆಂಬ ನಿಯಮವಿದೆಯೆ? ಎಲ್ಲರನ್ನೂ ಮೆಚ್ಚಿಸ ಹೊರಟರೆ ಕತ್ತೆಯನ್ನು ತಂದೆ ಮಕ್ಕಳು ಹೊತ್ತ ಗತಿಯಾಗುವದು! ಇದೇ ತೇಜಪಾಲನ ದೃಢಸಂಕಲ್ಪ.

ಅಂದೇ ತೇಜಪಾಲನು ಆಫೀಸು ಬಿಟ್ಟು ಬಂದಾಗ ಅನಂತ ಬುದ್ಧಮೂರ್ತಿಯಂತೆ ಕುಳಿತುಕೊಂಡಿರುವುದನ್ನು ನೋಡಿಯೂ ಅಕ್ಕನ ಪ್ರೇರಣೆಯಿಂದಲೂ ಬೇಸರ ಹಿಡಿದ ತೇಜಪಾಲ ಅವನನ್ನು ವಾಯುಸೇವನೆಗಾಗಿ ಕರೆದೊಯ್ದಿದ್ದನು. ಬೇಡ ಬೇಡವೆಂದರೂ ಅನಂತನನ್ನು ಉಪಾಹಾರ ಮಂದಿರವನ್ನು ಹೊಗಿಸದೆ ಬಿಡಲಿಲ್ಲ, ಮಾವ. ಹಿರಿಯರು ಕಿರಿಯರನ್ನು ಹೊಟೇಲಿಗೆ ಕರೆಯುವುದೇ ತಪ್ಪು. ಕರೆದ ಮೇಲೆ ಕಿರಿಯರು 'ಬರುವುದಿಲ್ಲ ಅಥವಾ ಬೇಡ'ವೆಂದು ಅಧಿಕ ಹಟ ಹಿಡಿಯುವುದೂ ತಪ್ಪು. ಹಿರಿಯರ ಕಾಯಿದೆ ಹೀಗಿರುವಾಗ ಅನಂತ ಒಪ್ಪಬೇಕಾಯಿತು.

ಕಾಫಿ ಕುಡಿದು ಚೀಟಿಯೊಂದಿಗೆ ಹಣವನ್ನು ಕೊಟ್ಟು ಹೊರಬರುವಾಗ ಮಾರ್ಗದ ವಿದ್ಯುದ್ದೀಪಗಳು ಹೊತ್ತಿದ್ದು, ಗಂಟೆ ಎಂಟು ಕಳೆದುಹೋಗಿತ್ತು. "ಇನ್ನೆಲ್ಲಿಗೆ? ಮನೆಯ ಕಡೆಗೇ ಹೋಗೋಣ" ಎಂದ ಅನಂತ. ಉತ್ತರವಾಗಿ, "ನಮ್ಮ ಮನೆಯಲ್ಲಿ ಮೊದಲು ಕೆಲಸ ಮಾಡುತ್ತಿದ್ದ ಪಾರಮ್ಮನಿಗೇನಾಗಿದೆ ಈಗ? ಸತ್ತುಹೋದಳೇನು?" ತೇಜಪಾಲ ಕೇಳಿದ. ಅದಕ್ಕೆ, "ಇಲ್ಲ, ಮಾವಯ್ಯ, ಪಾರಮ್ಮನಿಗೀಗ ಏನೂ ಕೂಡದು. ಮಲಗಿದ್ದಲ್ಲಿಯೇ ಎಲ್ಲಾ!" ಎಂಧ ಅನಂತ. "ಅಯ್ಯೋ ಪಾಪ! ರಂಗಮ್ಮ ಎಷ್ಟು ಸುಂದರಿಯಾಗಿದ್ದಾಳೆ? ಅಲ್ಲವೇ ಅನಂತ? ಅವಳ ಗಂಡ ತೀರಿ ಬಹಳ ಸಮಯವಾಯಿತೆ, ಅನಂತ?"

"ಅದೇಕೆ ಮಾವ, ಪಾರಮ್ಮನ ವಿಷಯ ಕೇಳಿ ಒಮ್ಮೆಗೇ ರಂಗಮ್ಮನ ವಿಷಯಕ್ಕೆ ತಿರುಗಿದಿರಿ?"

"ಇಲ್ಲ, ಇಲ್ಲ! ಅಂಪ್ರೆ....ರಂಗಮ್ಮ ಪಾರಮ್ಮನ ಗುಡಿಸಲಲ್ಲಿ ಅಲ್ಲವೆ ಇರುವುದೂಂತ!?"

"ಹೌದು."

"ಪಾರಮ್ಮನನ್ನು ನೋಡಿಕೊಳ್ಳುವ ಭಾರವೆಲ್ಲವೂ ರಂಗಮ್ಮನನ್ನು ಸೇರಿದ್ದಲ್ಲವೆ?"

" ಹೌದು. ಅದು ಮತ್ತೆ ಹಾಗೇ ಅಲ್ಲವೆ? ಮತ್ತಾರು ನೋಡುವುದು ಆಕೆಯನ್ನು ? "

" ಆ ರಂಗಮ್ಮನಿಗೆ ಎಷ್ಟು ಕಷ್ಟ ನೋಡಿದೆಯಾ ? ಇಲ್ಲಿ ದುಡಿಯುವುದು, ಅಲ್ಲಿ ದುಡಿಯುವುದು ! ಎರಡು ಕಡೆಗಳಲ್ಲಿಯೂ ದುಡಿಮೆಯಲ್ಲದೆ ನೆಮ್ಮದಿಯೆಂಬುದೆ ಅವಳಿಗಿಲ್ಲ."

" ಹೌದು. ಅವಳ ಸ್ಥಳದಲ್ಲಿ ಬೇರೆ ಯಾರಾದರೂ ಇರುತ್ತಿದ್ದರೆ ಕೆರೆ ಬಾವಿಗೆ ಹಾರಿಕೊಂಡಾಗಲಿ, ನೇಣು ಹಾಕಿಕೊಂಡಾಗಲಿ ಪ್ರಾಣ ಬಿಡುತ್ತಿದ್ದರು."

" ನಿಜ ! ಹಾಂ ! ಮತ್ತೆ ನಾನು ಕೇಳಿದ್ದಕ್ಕೆ ನೀನು ಹೇಳಲಿಲ್ಲವಲ್ಲ."

" ಯಾವದಕ್ಕೆ ? "

" ಅದೇ, ಅವಳ ಗಂಡ ತೀರಿ ಬಹಳ ಸಮಯವಾಯಿತೆ ಎಂದೆ ? "

" ನನಗೇನು ಗೊತ್ತು ? ಅವಳು ನಮ್ಮ ಮನೆಗೆಂದು ಬರುವಾಗಲೆ ವಿಧವೆಯಾಗಿದ್ದಳು."

" ಪಾಪ ! ಅವಳ ಹಣೆಯಲ್ಲಿ ದೇವರು ಹಾಗೆ ಬರೆದ. ನೀನು ಹೇಳಿದ ಹಾಗೆ ಬೇರೆ ಯಾರಾದರು ಆಗಿರುತ್ತಿದ್ದರೆ ಜೀವ ಇಟ್ಟುಕೊಳ್ಳುತ್ತಿರಲಿಲ್ಲ."

" ಸರಿ, ಮಾವಯ್ಯ, ಹೋಗೋಣವೆ ? "

" ಏನವಸರ ? ಘಂಟೆ ಎಂಟೂಕಾಲಾಯಿತಷ್ಟೆ. ಹುಂ ! ಸರಿ. ಪಾರಮ್ಮನ ಮನೆ ದಾರಿಯಿಂದ ಹೋಗೋಣವೆ ? "

" ಹುಂ ! ಹೋಗೋಣ."

ಅನಂತನೊಂದಿಗೆ ತೇಜಪಾಲನು ಪಾರಮ್ಮನ ಗುಡಿಸಲಿಗೆ ತೆರಳಿದ. ಮುದುಕಿ ಪಾರಮ್ಮ ಒಂದೆಡೆ ಮುದುಡಿಕೊಂಡು ಮಲಗಿದ್ದಳಾದರೂ ಅನಂತ ಹೊಕ್ಕುದನ್ನು ನೋಡಿ ಆನಂದದಿಂದ ಎದ್ದು ಕುಳಿತು, " ನನ್ನೀ ಗುಡಿಸಲಿಗೆ ನೀವಿಬ್ಬರೂ ಬರುವಿರೆಂದು ಕನಸಿನಲ್ಲೂ ನಾನು ನೆನಸಿರಲಿಲ್ಲ, ಮಗೂ ! " ಎಂದು ತೇಜಪಾಲನನ್ನು ನೋಡಿ ಅನಂತನಿಗೆ, " ನಿನ್ನ ಮಾವ ತೇಜಪಾಲನೆ ? " ಎಂದಳು.

" ಹೌದು ಪಾರಮ್ಮ, ತಿಳಿಯಲಿಲ್ಲವೆ ? "

" ಕಣ್ಣು ಕಾಣೋಲ್ವಪ್ಪ, ಮಂದವಾಗಿದೆ."

ಏಕೋ ತೇಜಪಾಲನಿಗೆ ಪಾರಮ್ಮನ ಆ ಗುಡಿಸಲಿನಿಂದ ಹೊರಬರಲು ಮನಸ್ಸೇ ಬರದು. ಅನಂತನ ಒತ್ತಾಯದಿಂದ ಹೊರಡಬೇಕಾಯಿತು. ಅಂದಿನಿಂದ ಅನಂತನಿಗೂ ಮಾವನ ಮೇಲೆ ಒಂದು ತರದ ಸಂಶಯ. ಆದರೆ ಅದನ್ನು ಹೊರಗೆಡಹುವ ಧೈರ್ಯ ಅವನಲ್ಲಿರಲಿಲ್ಲ.

ಅವರು ಆಚೆ ಕಾಲಿಡಲಿಕ್ಕೂ ರಂಗಮ್ಮನು ಪಲ್ಯ ಕೊಂಡುಕೊಂಡು ಗುಡಿಸಲಿನ ಪ್ರವೇಶ ಮಾಡಲಿಕ್ಕೂ ಗಂಟೆ ಬಿದ್ದಿತು. ಆದರೆ ಪರಸ್ಪರ ನೋಡದುದು ದೈವಾನುಗ್ರಹ!

"ರಂಗೂ, ನೀನು ಎಲ್ಲಿ ಹೋದೆಯಮ್ಮ. ಈಗಷ್ಟೆ ತೇಜಪಾಲ ಅನಂತ ಇಬ್ಬರೂ ಬಂದಿದ್ದರು. ಅವರನ್ನು ಆದರಿಸಿ ಕೂಡಿಸಿಕೊಳ್ಳೋಣಾಂದ್ರೆ ಕೂತಲ್ಲಿಂದ ಏಳೋಕ್ಕಾಗೋಲ್ಲ ನನಗೆ."

"ಯಾರು? ಅನಂತನೊಂದಿಗೆ ಅವನ ಮಾವನೂ ಬಂದಿದ್ದರೆ?"

"ಹೌದು, ತಾಯಿ."

ರಂಗಮ್ಮನಿಗೆ ದಿಗಿಲು ಬಡಿದಂತಾಯಿತು. ಮುಂದೆ ಅವಳ ಮುಖದಿಂದ ಮಾತು ಹೊರಡುವುದು ಅಸಾಧ್ಯವಾಯಿತು. ನಿಂತಲ್ಲಿಯೆ ಕುಳಿತಳು. ಕುಳಿತವಳು ಏಳದೆ ಅರ್ಧ ಗಂಟೆಯ ತನಕ ತನ್ನನ್ನು ತಾನು ಮರೆತು ದಿಗ್ಭ್ರಾಂತಳಂತೆ ಕುಳಿತಿದ್ದಳು. ಪಾರಮ್ಮ ಕರೆದಾಗಲೆ ಅವಳಿಗೆ ಎಚ್ಚರವಾದುದು. ಒಲೆಯಲ್ಲಿರಿಸಿ ಹೋಗಿದ್ದ ಅಕ್ಕಿ ಬೆಂದು ಹೋಗಿತ್ತು.

ಪಾರಮ್ಮನ ಗುಡಿಸಲನ್ನು ಬಿಟ್ಟ ತೇಜಪಾಲ ಮನದೊಳಗೆ ಅನಂತನನ್ನು ದೂರುತ್ತ ಮಂಚದ ಮೇಲಿನ ಹಾಸಿಗೆ ಬಿಡಿಸಿ ಮಲಗಿ, ಇಹ-ಪರಗಳ ವಿಮರ್ಶೆ ಮಾಡುತ್ತ ನಿದ್ರೆಹೋದನು.

## ೧೭

ತುಳಸಿಯ ಮದುವೆಯಂತೂ ಆಯಿತು; ವರ್ಷವೆರಡು ಕಳೆದೂ ಹೋಯಿತು. ಆದರೆ ಮಾಧವರಾಯರಿಗೆ ಚಿಂತೆ ಇನ್ನೂ ಬಿಟ್ಟಿರಲಿಲ್ಲ. ಮಗಳ ಮದುವೆಯ ಸಮಯದಲ್ಲಿ ಮಗನಿಗೂ ಮದುವೆ ಮಾಡಿಬಿಡಬೇಕೆಂಬ ಯೋಚನೆ. ಆದರೆ ಎಲ್ಲದಕ್ಕೂ ಅದೃಷ್ಟವೂ ದೇವರ ಸಹಾಯವೂ ಬೇಡವೆ? ಆ ಸಂದರ್ಭದಲ್ಲಿ ಅವನಿಗೆ ಸರಿಯಾದ ವಧು ದೊರೆಯಲಿಲ್ಲ. ಅಲ್ಲದೆ, ಕೈಯಲ್ಲಿ ಇದ್ದುದೂ

ಅಷ್ಟಕ್ಕಷ್ಟೆ. ಆದುದರಿಂದ ಬರುವ ವರ್ಷ ಮಾಡೋಣವೆಂದು ಸುಮ್ಮನಿದ್ದು ಬಿಟ್ಟರು. ಮದುವೆಯಾಗಿ ಒಂದು ವರುಷದ ತನಕ ಮಗಳಿಗೆ ಮಾಡಬೇಕಾದ ಕಾರ್ಯಕ್ರಮಗಳ ನೆನಪೇ ಇರಲಿಲ್ಲ, ರಾಯರಿಗೆ! ಮಗಳು ಮದುವೆಯಾಗಿ ಗಂಡನ ಮನೆ ಸೇರಿದ ಮೂರು ತಿಂಗಳಲ್ಲೊಮ್ಮೆ ಕರೆದುಕೊಂಡು ಬಂದು ದಾಯಿತು; ಅದರ ಮಧ್ಯೆ ಚವತಿ, ಅಷ್ಟಮಿ, ದಸರೆ, ದೀಪಾವಳಿ ಮುಂತಾದ ಹಬ್ಬಗಳ ಸರಣಿಯೇ ಪೋಣಿಸಿಕೊಂಡು ಬಂದಿತು. ಇವುಗಳಿಗೆಲ್ಲಾ ತವರು ಮನೆಗೆ ಬರಬೇಕೆಂಬ ಆಸೆ, ಇಚ್ಛೆ—ಹೆಣ್ಣಾಗಿ ಹುಟ್ಟಿದವಳಿಗೆ ಇಲ್ಲದಿರು ತ್ತದೆಯೆ?—ಮದುವೆ ಮೊದಲು ಎಷ್ಟೋ ಹಬ್ಬಹುಣ್ಣಿಮೆಗಳು ಇಂದಿನಕ್ಕಿಂತ ಬಹಳ ವಿಜೃಂಭಣೆಯಿಂದ ಕಳೆದು ಹೋಗಿರಬಹುದು. ಆದರೆ ಅದೆಲ್ಲಾ ಒಂದು ಲೆಕ್ಕವೆ!—ಅಲ್ಲದೆ ಮಗಳನ್ನು ಕರೆದುಕೊಂಡು ಬನ್ನಿ ಎಂದು ಕಣ್ಣೀರು ಸುರಿಸುವ ಪತ್ನಿಯನ್ನು ನೋಡಿದರಂತೂ ಮುಗಿಯಿತು, ತಂದೆ ಹೋಗಿ ಮಗಳನ್ನು ಕರೆದುಕೊಂಡು ಬರದಿದ್ದರೆ ತಾಯಿಯ ಕಣ್ಣೀರಿನ ನೆರೆ ಬಂದು ಮನೆ ಬಿದ್ದು ಹೋದೀತು. ಹೀಗಿತ್ತು, ಮಾಧವರಾಯರ ಮನೆಯ ಸ್ಥಿತಿ. ಹೀಗೆ, ಆ ವರ್ಷದ ಹಬ್ಬಗಳಿಗೆಲ್ಲ ಮಾಧವರಾಯರು ಮದರಾಸಿಗೆ ಹೋಗಿ ಮಗಳನ್ನೂ ಅಳಿಯನನ್ನೂ ಕರೆತರದಿರುತ್ತಿರಲಿಲ್ಲ. ಎಷ್ಟೆಂದರೂ ತವರುಮನೆ; ಬಂದ ಒಂದೆರಡು ದಿನಗಳಲ್ಲಿ ಹೊರಟುಹೋಗುವುದೆಂದರೆ ಮನಸ್ಸು ಬರು ತ್ತದೆಯೆ? ಯಾವ ಮಗಳಿಗೆ ತಾನೆ ಹಾಗೆ ಮನಸ್ಸು ಬಂದೀತು ಅಥವಾ ಯಾವ ತಾಯಿ ತಾನೆ ಹಾಗೆ ಕಳುಹಿಸಿ ಕೊಟ್ಟಾಳು? ತಂದೆಯಾದವನಿಗೆ ಎರಡೂ ಸಮ್ಮತವೇ ಆಗಿರುತ್ತದೆ. ಆದರೆ ಬಾಯಿ ತೆರೆದು, ಮಗಳನ್ನು ಕರೆದುಕೊಂಡು ಹೋಗು, ಎಂದು ಹೇಳುವರೆ? ಮಗಳು ಮನೆಯಲ್ಲಿ ಇದ್ದಷ್ಟು ಕಾಲ ತಂದೆಗೂ ತಾಯಿಗೂ ಸಂತೋಷವೆ. ಆದರೆ ಹೆಂಡತಿಗಾಗಿ ಗಂಡನು ಉದ್ಯೋಗ ಬಿಟ್ಟು ಮಾವನ ಮನೆಯಲ್ಲಿ ಕುಳಿತುಕೊಳ್ಳಲಾಗದು. ಮಧುಕರ ನಂತೂ ತುಳಸಿಯನ್ನು ಬಂದಾಗಲೆಲ್ಲ ಮಾವನ ಮನೆಯಲ್ಲಿ ಬಿಟ್ಟೇ ಹೋಗು ತ್ತಿದ್ದ! ಹೋಗಿ ಎಂಟು ದಿನವಾಗುವುದರೊಳಗೆ ಮಾವನಿಗೆ ಅಳಿಯನಿಂದ ಪತ್ರವೊ ತಂತಿಯೊ ಬರುತ್ತದೆ. ಅದರಲ್ಲಿ, ತನ್ನ ದೇಹಾರೋಗ್ಯದ ಬಗ್ಗೆ ಸ್ವಲ್ಪ ಹೆಚ್ಚು ಕಡಿಮೆ ತೋರಿಸುತ್ತಲೇ ಇದ್ದ, ಮಧುಕರ. ಒಮ್ಮೆ, 'ನನಗೆ ವಿಪರೀತ ಜುಲಾಬು ಹೋಗುತ್ತಿದೆ; ಆದ್ದರಿಂದ ತುಳಸಿಯನ್ನು ಕೂಡಲೆ

ಕಳಿಸಿಕೊಡಿ' ಎಂದು ಬರೆದಿದ್ದ! ಮಾಧವರಾಯರು ಮಗಳನ್ನು ಕರೆದು ಕೊಂಡು ಹೋಗಿ ಅಳಿಯನ ಮನೆಯಲ್ಲಿ ಬಿಟ್ಟರೆ ಗಂಡನ ಆರೋಗ್ಯಕ್ಕೆ ಯಾವ ಕುಂದುಕೊರತೆಯೂ ಇಲ್ಲದ್ದನ್ನು ನೋಡಿ ತುಳಸಿ ಆತನ ಮೇಲೆ ಕೋಪಿಸಿಕೊಂಡಳು.

ಒಂದು ದಿನ, ತುಳಸಿ ಹೊರಗೆ ಕೂತದೆ ಮೂರು ತಿಂಗಳಾಯಿತು, ಎಂಬುದನ್ನು ಮದ್ರಾಸಿನಲ್ಲಿದ್ದ ಅವರ ನೆರಮನೆಯ ಸೀತಮ್ಮ ಮಂಗಳೂರಿಗೆ ಬಂದಿದ್ದಾಗ ಕಾವೇರಮ್ಮನಿಗೆ ತಿಳಿಸಿ ಹೋಗಿದ್ದಳು.

ಮದರಾಸಿನಲ್ಲೇ ಸೀಮಂತ ಮಾಡಿಸಬೇಕೆಂಬುದು ಮಧುಕರನ ಉದ್ದೇಶ. ಖರ್ಚು ಮಾವನ ಕಡೆಯವರದ್ದೇ ಆಗಿರುತ್ತದೆ. ನಿಜಕ್ಕೂ ಆಗಬೇಕಾದದ್ದು ಹಾಗೇ ಆಗಿದ್ದರೂ ಮಾಧವರಾಯರು ಮಗಳನ್ನೂ ಅಳಿಯನನ್ನೂ ಮಂಗ ಳೂರಿಗೆ ಕರೆದುಕೊಂಡು ಬಂದು, ಸೀಮಂತವನ್ನು ಸುಲಭದಲ್ಲಿ ಹತ್ತಿಪ್ಪತ್ತು ರೂಪಾಯಿಯೊಳಗೆ ಒಂದು ಸೀರೆ ತೆಗೆದುಕೊಂಡು ನಡೆಸಿಬಿಡುವುದೆಂದು ಭಾವಿಸಿದ್ದರು. ಆದರೆ ಅದು ಸಾಧ್ಯವಾಗಲಿಲ್ಲ. ಉಪಾಯವಿಲ್ಲದೆ ಹೇಗೆ ಹೇಗೋ ನೂರಿನ್ನೂರು ರೂಪಾಯಿ ಸಾಲಮೂಲ ಮಾಡಿ ಪತ್ನೀಸಮೇತರಾಗಿ ಮದ್ರಾಸಿಗೆ ಹೋಗಿ,ಮಗಳಿಗೆ ಸೀಮಂತ ಮಾಡಿಸಿ, ಮಂಗಳೂರಿಗೆ ಕರೆತಂದರು. ಬರುವಾಗ ಪ್ರಯಾಣಕ್ಕೆ ಹಣ ಸಾಲದಾಗಿ, ಅಲ್ಲಿ ಯಾರಿಂದಲೊ ಹದಿನೈದು ರೂಪಾಯಿ ಸಾಲ ತೆಗೆದುಕೊಂಡು ಬಂದಿದ್ದರು.

ಚೊಚ್ಚಲು ಮಗುವಾದ್ದರಿಂದ ಪ್ರಸವ ಸಮಯದಲ್ಲಿ ಮಾಧವರಾಯರ ಮನೆಗೆ ಎರಡು ಮೂರು ಡಾಕ್ಟರುಗಳ ಅಗತ್ಯ ಬೀಳದಿರಲಿಲ್ಲ. ಸುಖಪ್ರಸವವು ಆಯಿತು. ಮಗು ಹೆಣ್ಣು. ಶುದ್ಧಕ್ಕೆ ಎರಡು ದಿನವಿದೆಯೆನ್ನುವಾಗ ಮಧುಕರ ಮಾವನ ಮನೆ ತಲಪಿದ. ಮಗು ಹೆಣ್ಣಾದ್ದರಿಂದ ಮಗುವನ್ನು ನೋಡಬೇಕೆಂಬ ಆಸೆ ಅವನಲ್ಲಿರಲಿಲ್ಲವಾದರೂ ನಾಮಕರಣದ ದಿನ ಮಗುವನ್ನು ನೋಡಿದ ಆತ ಬಹಳ ಸಂತೋಷಗೊಂಡನು. ಮಗು ಆತನನ್ನೇ ಹೋಲುತ್ತಿದ್ದಿತು.

"ಮಗಳನ್ನು ನೋಡಿದರೆ ತಂದೆಯನ್ನು ನೋಡುವುದೇ ಬೇಡ! ಅದೇ ಮೂಗು, ಅದೇ ಕಿವಿ, ಅದೇ ಕಣ್ಣು, ಎಲ್ಲ ಅದೇ!" ಎಂದು ಒಳಗೆ ಹೆಂಗಸ ರಾರೊ ಹೇಳಿದ್ದನ್ನು ಕೇಳಿ, ಮಗುವನ್ನು ನೋಡುವುದಕ್ಕೆ ಒಳಗೆ ಕಾಲಿಟ್ಟ ಮಧುಕರ ನಾಚಿ ಮುಗುಳುನಗೆ ನಗುತ್ತಾ ಹೊರಗೆ ಬಂದು ಬಿಟ್ಟ. ಸಮೀಪ ಕುಳಿತಿದ್ದ ತುಳಸಿ, "ಸಾಕಕ್ಕ, ನಿನ್ನ ಬಂಡಾಟ" ಎಂದಳು ಅವಳಿಗೆ.

ಸಂಜೆ ಬಂದ ಅತಿಥಿಗಳೆಲ್ಲರೂ ಹೊರಟು ಹೋದ ತರುವಾಯ ಕಾವೇರಮ್ಮ ತಾಯಿ–ಮಗಳಿಗೆ ಉಪ್ಪು–ಮೆಣಸು–ಸಾಸಿವೆ ಮೊದಲಾದವುಗಳನ್ನು ತೆಗೆದು ತಲೆ ಸುತ್ತಿ ಒಲೆಗೆ ಹಾಕಿದರು. ಹೊಗೆ ಏಳಲು ತುಳಸಿ ಕೆಮ್ಮಿದ್ದನ್ನು ಕೇಳಿ ಕಾವೇರಮ್ಮ "ನೋಡಿದೆಯಾ? ಚೆನ್ನಾಗಿದೆ ಕಣ್ಣು!" ಎಂದರು.

ಮಗುವಿಗೆ ಆರು ತಿಂಗಳು ತುಂಬಲು ತುಳಸಿಯ ಆಗಮನಕ್ಕೆ ಗಂಡನ ಪತ್ರ ಬಂತು.

ಮಗಳನ್ನು ಹೀಗೆ ಬರಿಯ ಕೈಯಲ್ಲಿ ಕರೆದುಕೊಂಡು ಹೋಗಿ ಬಿಟ್ಟು ಬರುವುದೆ? ಮಾಧವರಾಯರು ಅಂದು ಅರವತ್ತು ಅರವತ್ತೈದು ರೂಪಾಯಿಯೊಳಗೆ ತುಳಸಿಗೊಂದು ಸೀರೆ ಕುಪ್ಪಸ, ಮಗುವಿಗೊಂದು ರೇಷ್ಮೆ ಅಂಗಿ ಕೊಂಡು ತಂದರು. ಸೀರೆಯ ಬದಿ ಸ್ವಲ್ಪ ಅಗಲವಿಲ್ಲದ್ದರಿಂದ ತುಳಸಿಗೆ ಸ್ವಲ್ಪ ಅಸಮಾಧಾನ; ಆದರೂ ತಂದೆಗೆ ಹೆಚ್ಚು ಕಷ್ಟ ಕೊಡುವುದು ಬೇಡವೆಂದು ತಾಯಿಯ ಮಾತುಗಳನ್ನು ಕೇಳಿ ಅದೇ ಸೀರೆಯನ್ನು ಸಂತೋಷದಿಂದ ಸ್ವೀಕರಿಸಿದಳು. ಅದರ ಮಾರನೆ ದಿನವೆ ಮಗಳನ್ನು ಮದರಾಸಿಗೆ ಕರೆದೊಯ್ದರು. ಮಗಳ ಒತ್ತಾಯದ ಮೇರೆಗೆ ಎರಡು ದಿನವಿದ್ದು ಮೂರನೆ ದಿನ ಹಿಂತಿರುಗಿದರು.

ಮಗಳ ಮದುವೆಯಾಗಿ ಎರಡು ವರ್ಷ ಕಳೆಯುವುದರೊಳಗೆ ಮಗನ ವಿವಾಹಕ್ಕೆಂದು ಕಟ್ಟಿಟ್ಟಿದ್ದ ಒಂದು ಸಾವಿರ ರೂಪಾಯಿ ಎಲ್ಲೋ ಮಾಯವಾಗಿ ಬಿಟ್ಟಿತು. ಅದರ ಮೇಲೆ ಐದಾರು ನೂರು ರೂಪಾಯಿಯ ಸಾಲವೂ ನಿಂತಿದೆ ತಲೆಯ ಮೇಲೆ! ಮಗನಿನ್ನೂ ಅವಿವಾಹಿತನಾಗಿಯೆ ಉಳಿದಿದ್ದಾನೆ.

ಮಾಧವರಾಯರಿಗೆ ಮಗನ ಮದುವೆ ಹೇಗೆ ಆದೀತೆಂಬುದೆ ದೊಡ್ಡ ಸಮಸ್ಯೆಯಾಯಿತು. 'ಹೆಣ್ಣು ಮಕ್ಕಳೆಂದರೆ ತಂದೆಯರಿಗೆ ಗಂಡಾಂತರವೊ?.... ಸಂದೇಹವೇನು? ನಿಜವೆ!' ಎಂಬ ಕೆಟ್ಟ ಯೋಚನೆ ಅವರ ಮೆದುಳನ್ನು ಸುಮ್ಮನಿರಬಿಡುತ್ತಿರಲಿಲ್ಲ. ಆದರೆ ಮಾಡುವುದೇನು? ದೈವದೋಷವೊ ಎಂಬಂತೆ ಒಂದರ ಮೇಲೊಂದು ಹೆಣ್ಣು ಮಗು ಹುಟ್ಟಿಯಾಯಿತು; ಎರಡನ್ನೂ ಕಟ್ಟಿ ಕೊಟ್ಟಾಯಿತು! ಹಿರಿಯುವಳನ್ನು ಅವಿವೇಕದಿಂದ, ಗತಿಗೆಟ್ಟು ಬಂದ ವೇಳೆ ಅವಳಿಗೆ ಸ್ಥಳ ಕೊಡದೆ, ಹೊರಗಟ್ಟಿದುದೂ ಆಯಿತು. ಎಲ್ಲಿದೆಯೊ?

ಅವಳ ಒಳ್ಳೆಯ ಕಾಲದಲ್ಲಿ ಹೆಚ್ಚಿನ ಕಾಸೇನನ್ನೂ ವೆಚ್ಚ ಮಾಡಲಿಲ್ಲ! ಅದರ ಅಸಲು ಬಡ್ಡಿ ಎಲ್ಲಾ ಎರಡನೆಯದಕ್ಕೆ ಖರ್ಚು ಮಾಡಿಯಾಯಿತು! ಆದರೆ?....ಆದರೆ ಇರುವ ಒಬ್ಬ ಮಗನಿಗೆ ಮದುವೆ ಮಾಡಿಸಿ ಕಣ್ಣಾರೆ ಕಂಡು ಆನಂದ ಪಡೆಯೋಣವೆಂದರೆ....ಈ ಜನ್ಮದಲ್ಲಿ ಸಾಧ್ಯವಿಲ್ಲವೆಂಬಂತೆ ಕಾಣುತ್ತದೆ! ಅದಕ್ಕೆ ಈಗಿರುವ ಸಾಲವನ್ನು ಏರಿಸಬೇಕಾಗಿದೆ. ಇಂದೊ ನಾಳೆಯೊ ಎಂದಿರುವ ನಾನು ಆ ಸಾಲವನ್ನು ತೀರಿಸಬಹುದೆ? ಅದರೊಳಗೆ ಮಡಿದರೆ? ಸಾಲದ ಹೊರೆ ಮಗನ ತಲೆಯ ಮೇಲೆ! 'ತಂದೆ ಸಾಯುವ ಕಾಲದಲ್ಲಿ—ಮದುವೇನೆ ಬೇಡ ಎಂದಿದ್ದೆ—ಅದನ್ನೂ ಹೇಳದೆ ಕೇಳದೆ ಮಾಡಿಟ್ಟು—ಸಾಲದ್ದಕ್ಕೆ ಅದರ ಮೇಲೆ ಸಾಲದ ಹೊರೆಯನ್ನೂ ನನ್ನ ತಲೆಯ ಮೇಲೆ ಹಾಕಿ ಹೋದ' ಎಂಬ ಮಗನ ಅಳುಕನ್ನು ಸತ್ತ ನಾನು ಸಹಿಸ ಬೇಕಲ್ಲವೆ? ಯೋಚನೆಗಳನ್ನು ಮನಸ್ಸಿಗೆ ತಂದುಕೊಂಡು ಕಣ್ಣು ಕೆಂಪಗೆ ಮಾಡಿಕೊಂಡು ಕುಳಿತಿದ್ದ ಮಾಧವರಾಯರನ್ನು ಕಾವೇರಮ್ಮ ಊಟಕ್ಕೆಬ್ಬಿಸಿ ದರು. ಬೇಡ ಬೇಡವೆಂದರೂ ಎಲೆಯ ಮುಂದೆ ಕುಳಿತು ಎರಡು ತುತ್ತು ಊಟ ಮಾಡಿದರು.

ಮದುವೆಯನ್ನೇನೊ ವಿಜೃಂಭಣೆಯಿಂದಲ್ಲದಿದ್ದರೂ ಸಾಧಾರಣ ಮಟ್ಟ ಗಾದರೂ ಎಲ್ಲರಿಗೂ ಸಂತೋಷಪಡಿಸುವ ರೀತಿಯಲ್ಲಿ ಮಾಡಿಸಿ ಕಣ್ತುಂಬಾ ನೋಡಬೇಕೆಂಬ ಆಸೆ, ಹಂಬಲ ಎಲ್ಲ ಬಡ ಮಧ್ಯಮ ಸ್ಥಿತಿಯಲ್ಲಿರುವ ತಂದೆ ತಾಯಿಗಳಿಗೂ ಇರುವುದು ಸ್ವಾಭಾವಿಕ. ಹೇಗಾದರೂ ಸಾಲ ಮಾಡಿ ಯಾದರೂ ತಂದೆತಾಯಿಗಳು ಮಾಡಿಯೂ ಮಾಡುತ್ತಾರೆ. ಮಾಡಿದ್ದರಲ್ಲಿ ಕೆಲವರು ತೃಪ್ತರಾಗುತ್ತಾರೆ; ಕೆಲವರು ಅತೃಪ್ತರಾಗುತ್ತಾರೆ. ಪ್ರಪಂಚದ ಸಾಮಾಜಿಕ ಅಥವಾ ಸಾಂಸಾರಿಕ ವ್ಯವಹಾರವು ಅಂದರೆ ಮದುವೆ ಮೊದಲಾದವುಗಳು ಹತ್ತು ಮಂದಿಗೆ, ಬಂಧುಬಾಂಧವರಿಗೆ, ತಿಳಿಸಿ–ತಿಳಿದು, ಕೂಡಿ ಸಂತೋಷಕರವಾಗಿ ನೆರವೇರಬೇಕಾದವುಗಳಾಗಿವೆ. ಸಂದರ್ಭದಲ್ಲಿ ಹಾಗೆ ಬಂದವರನ್ನು ಮಧ್ಯಮ ಸ್ಥಿತಿಯವನಿರಲಿ, ಎಂಥ ಬಡವನೂ ತನ್ನ ಶಕ್ತ್ಯಾನುಸರಿಸಿ, ಊಟೋಪಚಾರ ಸಾಧ್ಯವಿಲ್ಲದಿದ್ದಲ್ಲಿ ಉಪಾಹಾರಾದಿಗಳನ್ನಾ ದರೂ ಕೊಟ್ಟು ಸತ್ಕರಿಸದೆ ಬಂದ ಹಾಗೇ ಹಿಂದೆ ಹೋಗಗೊಡನು. ಅದಕ್ಕೆ ಖರ್ಚಾಗುವ ಹಣವನ್ನು ನೋಡಲೂ ಬಾರದು; ನೋಡುವುದೂ ಇಲ್ಲ!

ಆದರೆ ಮದುವೆಯ ಅನಂತರದ ಕಾರ್ಯಕ್ರಮಗಳು ನಮ್ಮ ಸಮಾಜದಲ್ಲಿ ಇವೆ! ಇವು ಮಧ್ಯಮ ಸ್ಥಿತಿಯಲ್ಲಿರುವವನ, ಬಡವನ ಕುತ್ತಿಗೆ ಹಿಡಿದು ಹಿಸುಕುತ್ತವೆ! ಮದುವೆಯಾದ ಹೊಸದರಲ್ಲಿ ಮಗಳನ್ನೂ ಅಳಿಯನನ್ನೂ ಮೊದಲ ಮೂರನೆ ತಿಂಗಳಲ್ಲಿ ಮನೆಗೆ ಕರೆದುಕೊಂಡು ಬರಬೇಕು; ಒಂದು ಸೀರೆ-ಕುಪ್ಪಸ, ಧೋತರ-ಶಾಲು, ತೆಗೆದು ಕೊಡಬೇಕು....ಮತ್ತಿನ್ನೆಷ್ಟೊ ಮರ್ಯಾದೆಗಳು. ಅನಂತರ ಒಂದು ವರ್ಷದ ವರೆಗೆ ದಸರೆ ದೀಪಾವಳಿಗಳೆಂದು ಪ್ರತಿಯೊಂದು ಹಬ್ಬ ಹುಣ್ಣಿಮೆಗಳನ್ನೂ ಬಿಡದೆ ಹೀಗೇ ಕರೆದುಕೊಂಡು ಬಂದು ಇದೇ ರೀತಿ ಮರ್ಯಾದೆಗಳನ್ನು ಮಾಡಬೇಕು; ಮಾಡಿ, ಅವರನ್ನು ಹಿಂದೆ ಕಳಿಸಿಕೊಡ ಬೇಕು!.... ಈ ಎಲ್ಲಾ ಕಾರ್ಯಕ್ರಮಗಳ ಕಾಲಡಿಯಲ್ಲಿ ಸಿಕ್ಕಿ ಕಂಗೆಟ್ಟರು, ಮಾಧವರಾಯರು.

ಉಂಡು, ವೀಳ್ಯೆ ಹಾಕಿಕೊಂಡು, ಒಂದಿಷ್ಟು ಹೊತ್ತು ಕುಳಿತು ಬಾಯಿ ಮುಕ್ಕಳಿಸಿ ಕುಳಿತಿದ್ದಾಗ ಕಾವೇರಮ್ಮ ತಟ್ಟೆಯಲ್ಲಿ ಹಾಲು ತಂದಿಟ್ಟು, ಒಳಗೆ ಹಾಸಿಗೆ ಹಾಸಿ, ಅಡಿಗೆಕೋಣೆಯ ಕಡೆಗೆ ಪಾತ್ರೆ ಎತ್ತಿಡಲು ಹೋದರು. ಮಾಧವರಾಯರು ಕುಳಿತಲ್ಲಿಂದ ಇಣಿಕಿ ನೋಡಿದರು—ಹಾಸಿಗೆ ಹಾಸಿದೆ. ಹಾಲು ಕುಡಿದನಂತರ ರಾಯರು ಎದ್ದು ಹೋಗಿ ಹಾಸಿಗೆಯಲ್ಲಿ ಕುಳಿತು ಪೂರ್ವಕ್ಕೆ ಮುಖ ಮಾಡಿ, "ದೇವಾ!" ಎಂದು ಮಲಗಿದರು. ಸಂದರ್ಭ ವರಿತು ಕಾವೇರಮ್ಮ ಒಳಹೊಕ್ಕು ಗಂಡನ ಕಾಲ ಬುಡದಲ್ಲಿ ಕುಳಿತು ಕಾಲೊತ್ತುತ್ತಾ,

"ಹುಡುಗ ರಾತ್ರಿಯಾದರೆ ಮಲಗೋಲ್ಲ, ಹನ್ನೆರಡು ಒಂದು ಘಂಟೆ ತನಕ ಓದ್ತಾ ಬರೀತಾ ಇರ್‍ತಾನೆ. ಘಳಿಗೆಗೊಮ್ಮೆ ಒಂದೊಂದು ನಿಟ್ಟುಸಿರು ಬಿಡ್ತಾನೆ. ಎಲ್ಲಾದರೂ ಒಂದು ಬೇಗನೆ ನೋಡಿ ಮಾಡಿ ಬಿಡೋಣಾಂದ್ರೆ ನಿಮಗೆ ಅದರ ಯೋಚನೆ ಇಲ್ಲ!" ಎಂದರು.

"ಹೌದು! ನಿನಗೇ ಎಲ್ಲದರ ಯೋಚನೆ ಇದೆ; ನೀನೇ ನೋಡಿ ಮಾಡಿಬಿಡು!"

"ಹೇಳಿದರೆ ಅದಕ್ಕೊಂದು ಅಡ್ಡಾದಿಡ್ಡಿ ಕುತರ್ಕ ಆಡಿದರೆ!"

"ಮತ್ತೆ, ಎಲ್ಲಿ ಹೋಗಿ ನೋಡ್ಲೆ, ನಾನು. ಕೈಯಲ್ಲಿ ಒಂದು ಕಾಸೂ ಇಲ್ಲ."

" ಇಲ್ಲ, ಇಲ್ಲ ಅಂತ ಸುಮ್ಮನೆ ಕೂತರೆ ಕಾರ್ಯ ಹೇಗಾದೀತು ? "

" ನಿನ್ನ ಅಪ್ಪನ ಮನೆ ಗಂಟೇನಾದರೂ ಇಟ್ಟಿದ್ದೀಯ, ಇಲ್ಲಿ—ಹಾಗೆ ಹೆಣ್ಣು ಹುಡುಕಿಕೊಂಡು ಖರ್ಚು ಮಾಡ್ಲಿಕ್ಕೆ ? ಹಾಗೇನಾದ್ರೂ ಇದ್ರೆ ನೋಡು, ಇಲ್ಲಿ ಕೊಡು, ಹೋಗಿ ನೋಡಿಕೊಂಡು ಬರ್‍ತೀನಿ."

" ನನ್ನಪ್ಪನ ಮನೇಲಿ ಗಂಟಿಲ್ಲಾಂತ ಮೊದಲೆ ಗೊತ್ತಿರ್‍ಲಿಲ್ವೆ–ಗೊತ್ತಿದ್ದೆ ಅಲ್ವೆ ನನ್ನ ತಂದದ್ದು. ಹಾಗೆ ಒಂದು ವೇಳೆ ಇದ್ದರೂ ನಿಮಗೇಕೆ ಕೊಡ್ಬೇಕು ? ಸತ್ತುಹೋದ ಅಪ್ಪ ಅಮ್ಮನ್ನೆಲ್ಲಾ ಯಾಕೆ ಅಂದುಕೊಳ್ಳುತ್ತೀರಿ ? ಸತ್ತು ಹೋದವರಾದ್ರೂ ನೆಮ್ಮದೀಲಿ ಇರ್‍ಲಿ. ಅದಕ್ಕೆಲ್ಲಾ ಚೆನ್ನಾಗಿ ಕಲ್ತಿದ್ದೀರಿ ........ಬೇಕಾದ ಕಾರ್ಯ ಮಾಡೋಕೆ........"

" ಇಷ್ಟರವರೆಗಾದ ಬೇಕಾದ ಕಾರ್ಯ ಯಾರು ಮಾಡ್ತಿದ್ರೆ ? ನಿನ್ನ ಅಪ್ಪ ಬಂದು ಮಾಡಿದನೆ ?........ಹೆಚ್ಚು ಮಾತಾಡಿದಿ ಅಂದರೆ........"

ಎಂದು ಮಲಗಿದ್ದ ಮಾಧವರಾಯರು ಎದ್ದು ಪತ್ನಿಯ ಕೆನ್ನೆಯ ಕಡೆಗೆ ಗುರಿಯಿಟ್ಟು ಕೈಯೆತ್ತಿದರು. ಆದರೆ ಹೊಡೆಯಲಿಲ್ಲ ; ಎತ್ತಿದ ಕೈ ಹಾಗೆ ಹಿಂದೆ ಸರಿಯಿತು. ಇಬ್ಬರೂ ಸುಮ್ಮನಾದರು. ಎರಡು ಘಳಿಗೆಯ ಮೇಲೆ ಕಾವೇರಮ್ಮ ಧೈರ್ಯ ತಂದುಕೊಂಡು,

" ಬ್ರಹ್ಮಾವರದಲ್ಲಿ ಕರುಣಾಕರರಾಯರಿಗೆ ಒಂದು ಹುಡುಗಿಯಿದೆ, ನಿಮಗ್ಗೊತ್ತೆ ? "

" ಯಾರದು, ಕರುಣಾಕರರಾಯರೆಂದರೆ ? "

" ಅವರೆ, ನನ್ನ ತಾಯಿಯ ತಮ್ಮನ ಮಗಳ ಗಂಡ."

" ಯಾ-ರ-ದು ? ಹಂ ! ಹಂ ! ಹಂ ! ಹೌದು. ಕೊಡೋದಾದರೆ ಆಗ್ತಿತ್ತು ! "

" ಕೊಡ್ದೆ ಏನು ? ಹುಡುಗಿ ಚೆನ್ನಾಗಿದೆ. ಎಣ್ಣೆಗಪ್ಪು. ನೋಡ್ಲಿಕ್ಕೆ ಹೆಚ್ಚುಕಡಿಮೆ ನಮ್ಮ ತುಳಸಿ ಹಾಗೇನೆ ಇದ್ದಾಳೆ. ಚಿಕ್ಕಂದಿನಲ್ಲಿ ನೋಡಿದ್ದು."

" ಹೂಂ ! "

" ಆಗೋದಾದ್ರೆ ಬೇಗ ನೋಡಬೇಕು. ಹೋದ ತಿಂಗಳಲ್ಲೆ ಯಾರೋ ಮುಂಬಯಿಯಿಂದ ಬಂದಿದ್ದರಂತೆ. ಹುಡುಗಿ ಇನ್ನೂ ಚಿಕ್ಕದು, ಇನ್ನೊಂದು ವರ್ಷ ಕಳಿಯಲಿ, ಅಂತ ಅವರನ್ನು ಹಿಂದೆ ಕಳಿಸಿದರಂತೆ."

"ಸರಿ. ನಾಳೆ ನನ್ನ ಪೆನ್ಷನ್ನಿನ ಹಣಾನೂ ಪ್ರಕಾಶನ ಸಂಬಳಾನೂ ಬರುತ್ತೆ; ನಾಡಿದ್ದೆ ಹೊರಡ್ತೇನೆ."

ಗಂಡನು ಆಡಿದ ಮಾತಿಗೆ ಅಸಡ್ಡೆ ಮಾಡನೆಂಬುದನ್ನು ತಿಳಿದು ಕಾವೇರಮ್ಮ ಆ ರಾತ್ರಿ ನೆಮ್ಮದಿಯಿಂದ ನಿದ್ದೆ ಮಾಡಿದರು. ಮಾಧವರಾಯರೂ ಕಣ್ಣು ಮುಚ್ಚಿದರು.

ಮಾಧವರಾಯರು, "ಬಂದೆಯೇನಮ್ಮಾ? ಬಾ! ಬಾ! ನನ್ನನ್ನು ಕ್ಷಮಿಸಮ್ಮಾ—ಈ ನಿನ್ನ ಅಧಮ ತಂದೆಯನ್ನು ಕ್ಷಮಿಸು. ಸ್ವರ್ಣಾ, ನಾನು ಸ್ವರ್ಗನಿಂದೆಗೆ ಹೆದರುವುದು ಬಿಟ್ಟು ಲೋಕನಿಂದೆಗೆ ಹೆದರಿದೆ! ದೇವರಿಗೆ ಹೆದರುವುದು ಬಿಟ್ಟು ಸಮಾಜಕ್ಕೆ ಹೆದರಿದೆ! ನಿನ್ನನ್ನು ಗತಿವಿಹೀನಳನ್ನಾಗಿ ಮಾಡಿದೆ. ನೀನು ಬಸಿರಾಗಿದ್ದೆಯಲ್ಲ. ಏನಾಯಿತು? ಮಗುವೆಲ್ಲಿ?—ಸ್ವರ್ಣಾ! ಸ್ವರ್ಣಾ!" ಎಂದು ಅತ್ತುದನ್ನು ಕೇಳಿ ಕಾವೇರಮ್ಮ ಎಚ್ಚತ್ತು ಗಂಡನನ್ನು ಎಚ್ಚರಿಸಿದರು. ಕಣ್ಣೀರು ಹರಿದುದನ್ನು ನೋಡಿ "ಏಕೆ? ಏನು?" ಎಂದು ಕೇಳಿದರು. ಮಾಧವರಾಯರಿಗೆ ಬಾಯ್ದೆರೆಯುಲಾಗಲಿಲ್ಲ.

"ನನ್ನ ಸ್ವರ್ಣಮಣಿ—ಸ್ವರ್ಣ ಕನಸಿನಲ್ಲಿ ಕಾಣಿಸಿದಳು. ಆದರೆ ಏಟ್ಟಿನ್ನದೆ ಹೊರಟುಹೋದಳು."

"ಹೆದರಿದಿರೇನು?"

"ಹೆದ್ರೋದೆ? ಸ್ವರ್ಣನ್ನ ಕಂಡು ನಾನು ಹೆದರೋದೆ? ಇಲ್ಲ. ದೀನ ಭಾವದಿಂದ ನನ್ನ ಕಾಣ ಬಂದಳು. ಭಿಕ್ಷುಕಿ ಹಾಗೆ ಕೈನೀಡಿ ನಿಂತು ಕಣ್ಣೀರು ಸುರಿಸಿದಳು. ನಾನು ಕ್ಷಮೆ ಯಾಚಿಸುತ್ತಾ ಸಮೀಪಕ್ಕೆ ಹೋದೆ. ಅಷ್ಟರಲ್ಲಿ ಎಲ್ಲೋ ಮಾಯವಾಗಿಬಿಟ್ಟಳು."

ಗಂಡನ ಆಗಿನ ಸ್ಥಿತಿಯನ್ನು ನೋಡಿ ಸ್ವರ್ಣಳನ್ನು ನೆನೆದು ಕಾವೇರಮ್ಮನೂ ಅತ್ತರು. "ಎಲ್ಲಿ ಹೋಗಿ ಬಿದ್ದು ಸತ್ತಿತೊ? ಬಾಯಿಗೆ ನೀರಿಲ್ಲದೆ ಹೊಟ್ಟೆಗಿಲ್ಲದೆ ಸತ್ತಳೊ! ತುಂಬು ಗರ್ಭಿಣಿ!" ಎಂದು ಸೆರಗಿನ ತುದಿಯಿಂದ ಕಣ್ಣೊಜ್ಜಿಕೊಂಡರು. ಕೋಳಿ ಕೂಗಿದ್ದನ್ನು ಕೇಳಿ, ಬಾಗಿಲು ತೆರೆದು ಹೊರಗೆ ಬಂದು, ಪ್ರಕಾಶನನ್ನು ಎಚ್ಚರಿಸಿ, ತಮ್ಮ ಕಾರ್ಯಕ್ಕೆ ಹೊರಟು ಹೋದರು. ಮಾಧವರಾಯರು ಕುಳಿತಿದ್ದವರು ತಿರುಗಿ ಅಡ್ಡಾದರು. ಎಚ್ಚರದಲ್ಲಿದ್ದುಕೊಂಡು ಏನೇನೋ ಯೋಚಿಸಲಾರಂಭಿಸಿದರು.

ಕಾವೇರಮ್ಮ ಬೆಳಗಿನ ಉಪಾಹಾರ ಮಾಡಿಟ್ಟು ಗಂಡನನ್ನು ಕರೆಯೋಣ ವೆಂದು ಬಂದು ನೋಡಿದಾಗ ಮಾಧವರಾಯರು ಕಣ್ಣು ಮುಚ್ಚಿಕೊಂಡು ಏನೇನೋ ಮಾತಾಡುತ್ತಿದ್ದುದನ್ನು ನೋಡಿ, "ಏನು! ಹುಚ್ಚು ಗಿಚ್ಚು ಹಿಡಿಯಿತೆ?" ಎಂದಳು.

"ಸ್ವರ್ಣ ಜೀವಿಸಿರಬಹುದೆ?"

"ಜೀವಿಸಿದ್ದರೆ ಎಂದಾದರೊಂದು ದಿನ ನಮಗೆ ಕಾಣಸಿಕ್ಕಾಳು."

"ಸ್ವರ್ಣಳನ್ನು ನೋಡೋ ಭಾಗ್ಯ ನಮಗುಂಟೆ? ನನಗಂತೂ ನಂಬಿಕೆ ಇಲ್ಲ."

"ದೇವರು ಅವಳನ್ನು ಉಳಿಸಿದ್ದೇನಂತಾದರೆ ಸಿಕ್ಕಾಳು!"

"ಅಷ್ಟೆ!"

"ಏಳಿ, ಕಾಫಿ ತಣ್ಣಗಾಯಿತು, ಹೋದದ್ದು ಹೋಯ್ತು. ಏನು ಮಾಡ ಲಿಕ್ಕಾದೀತು? ಇದ್ದುದನ್ನು ನೋಡಿಕೊಂಡು ಸಂತೋಷವಾಗಿದ್ದರೆ ಸುಖ; ಸುಮ್ಮನೆ ಹೋದದ್ದನ್ನೆಲ್ಲ ನೆನೆದುಕೊಂಡು ಕೊರಗಿದರೆ ಏನು ಬಂತು? ಏಳಿ."

ಕಾವೇರಮ್ಮನ ಎದೆ ಸ್ವಲ್ಪ ಗಟ್ಟಿ! ಅದರಿಂದ ಕೆಡಕಿಲ್ಲ. ಮಾಧವ ರಾಯರು ಸ್ವಲ್ಪ ಮೃದು ಸ್ವಭಾವದವರು. ಲೋಕದಲ್ಲಿ ಹುಟ್ಟಿದವರೆಲ್ಲ ಒಂದೇ ರೀತಿಯಿರಲು ಸಾಧ್ಯವಿಲ್ಲ! ಐದು ಬೆರಳುಗಳೂ ಸಮವೆ? ಸಂಸಾರದಲ್ಲಿ—ಇಬ್ಬರಲ್ಲಿ ಒಬ್ಬರು—ಗಂಡನಾಗಲಿ ಹೆಂಡತಿಯಾಗಲಿ—ಧೈರ್ಯವುಳ್ಳವರಾಗಿ ಗಟ್ಟಿ ಹೃದಯದವರಾಗಿರಬೇಕು.

ಕಾವೇರಮ್ಮ ಲೋಕಜ್ಞಾನವುಳ್ಳವರೆಂದು ಹೇಳಬಹುದು. ಪ್ರಪಂಚದಲ್ಲಿ ಯಾರಿಗೆ ಯಾರೂ ಇಲ್ಲವೆಂಬುದನ್ನು ಅರಿತವರೆಂದು ಅವರ ಗುಣಸ್ವಭಾವ ಗಳೆ ಹೇಳುತ್ತಿದ್ದವು. ಆಧುನಿಕ ಜಗತ್ತಿನಲ್ಲಿ ಅಂಥವರೇ ಬೇಕಾಗಿದ್ದಾರೆ. ತಂದೆ ಗೆಂದು ಮಕ್ಕಳೂ ಮಕ್ಕಳಿಗೆಂದು ತಂದೆಯೂ ಸಾಯದೆ ಉಳಿಯುವಂತಿದ್ದರೆ ಪ್ರಪಂಚ ಎಷ್ಟು ಪಾಲು ದೊಡ್ಡದಾಗಿರಬೇಕೆಂಬುದನ್ನು ನಿರ್ಣಯಿಸಲು ಸಾಧ್ಯವೆ? ಕಾವೇರಮ್ಮನ ಸ್ಥಾನದಲ್ಲಿ ಇನ್ನೊಬ್ಬರಿರುತ್ತಿದ್ದರೆ ಯಾವಾಗಲೊ ಪ್ರಾಣ ಬಿಟ್ಟಿರುತ್ತಿದ್ದರೇನೊ!

* * * *

ಮಾಧವರಾಯರು ಹಜಾರದಲ್ಲಿ ಕುಳಿತು ತಾಂಬೂಲ ಹಾಕಿಕೊಳ್ಳುತ್ತಿ

ದ್ದರು. ಟಪ್ಪಾಲು ಪೇದೆ ಒಂದು ಪತ್ರವನ್ನು ತಂದು ಅವರ ಕೈಗಿತ್ತು ಹೋದ. ರಾಯರು ಅದನ್ನೊಡೆದು ಓದಿದರು. ಹೆಂಡತಿಯನ್ನು ಕರೆದು ಮತ್ತೊಮ್ಮೆ ಗಟ್ಟಿಯಾಗಿ ಓದಲಾರಂಭಿಸಿದರು.

ಮದರಾಸು

ತೀ|| ಅವರ ಸನ್ನಿಧಾನಗಳಲ್ಲಿ,

ಪುತ್ರಿ ತುಳಸಿಯು ಬೇಡಿಕೊಳ್ಳುವ ಆಶೀರ್ವಾದಗಳು. ಏನೆನ್ನ ಬೇಕೆಂದು ನನಗೇ ತಿಳಿಯಲೊಲ್ಲದು! ಒಟ್ಟು—ಚೆನ್ನಾಗಿದ್ದೇವೆ, ಇಷ್ಟೇ ಹೇಳುವೆ. ಅಣ್ಣ ತಮ್ಮಂದಿರೊಳಗೆ ಜಗಳವಾಗಿ ನಾವೀಗ ಬೇರೆ ಬಿಡಾರ ಮಾಡಿದ್ದೇವೆ. ಮಗುವಿಗೆ ಒಂದು ದಿನ ಚೆನ್ನಾಗಿದ್ದರೆ ಒಂದು ದಿನ ಮೈಗೆ ಚೆನ್ನಾಗಿರುವುದಿಲ್ಲ. ಜ್ವರ, ಶೀತ ತಪ್ಪುವುದಿಲ್ಲ.

ನನಗೆ ಎರಡು ತಿಂಗಳಿಂದೀಚೆ ಹೊಟ್ಟೆನೋವು ಸುರುವಾಗಿದೆ. ಅಮಾವಾಸ್ಯೆ ಹತ್ತಿರವಾಗುವಾಗಲೆಲ್ಲ ಅಕ್ಕನು ನನಗೆ ಕನಸಿನಲ್ಲಿ ಕಾಣಿಸಿ ಕೊಳ್ಳುತ್ತಿದ್ದಾಳೆ. 'ನನ್ನನ್ನು ಕೊಂದು ನೀನು ಸುಖವಾಗಿ ಬಾಳುತ್ತಿ' ಎನ್ನುತ್ತಾಳೆ. ಸತ್ತುಹೋದರೂ ಉಳಿದಿರುವವಳಂತೆ 'ನಿನ್ನನ್ನು ತೆಗೆಯ ದಿದ್ದರೆ ನಾನಿದ್ದೇನು ಫಲ?' ಅನ್ನುತ್ತಾಳೆ. ಒಮ್ಮೊಮ್ಮೆ ಅಕ್ಕನು ಕೈಯಲ್ಲಿ ಒಂದು ಮಗುವನ್ನು ಎತ್ತಿ ಹಿಡಿದುಕೊಂಡು ಬಂದು 'ಇದನ್ನು ಸಾಕು; ನಾನು ನಿನ್ನನ್ನು ಏನೂ ಮಾಡುವುದಿಲ್ಲ' ಎಂದು ಕೂಗು ತ್ತಾಳೆ. ಎಚ್ಚರಾಗಿ ನೋಡಿದರೆ ಯಾರೂ ಇಲ್ಲ! ಮತ್ತೊಮ್ಮೆ ಹಾಗೇ ಬಂದು 'ಈ ಮಗುವನ್ನು ಸಾಕದಿದ್ದರೆ, ನಿನ್ನ ಮಗುವನ್ನು ಇಡುವು ದಿಲ್ಲ' ಎಂದು ಗರ್ಜಿಸುತ್ತಾಳೆ. ಹೇಳುವಾಗ ನನಗೆ ಮೈ ಜುಮ್ಮೆನ್ನು ತ್ತಿದೆ! ಮಗುವನ್ನು ವೈದ್ಯರೊಡನೆ ತೋರಿಸಿದರೆ, 'ಮಗುವಿಗೆ ಅಪಸ್ಮಾರ, ಅಷ್ಟೇನೂ ಹೆದರಬೇಕಾಗಿಲ್ಲ!' ಅನ್ನುತ್ತಾರೆ. ಜೋಯಿಸ ರನ್ನು ತೋರಿಸಿದರೆ, 'ಅದೇನು ಮಹಾ! ನಾನೇ ಪರಿಹಾರ ಮಾಡು ತ್ತೇನೆ ಅದನ್ನ! ಮದ್ದು-ಗಿದ್ದು ಏನೂ ಬೇಡ ಅದಕ್ಕೆ. ಇದೆಲ್ಲಾ ಭೂತ ಗಣಾದಿಗಳ ಉಪದ್ರವ. ಈ ಕಷ್ಟ ಕಾಲದಲ್ಲಿ ಹಾಗೆಲ್ಲಾ ವೆಚ್ಚಮಾಡ ಬಾರದು. ಬೇಗ ಒಂದು ಬಂಗಾರದ ತಾಯಿತ, ಒಂದು ಎಂಟಂಗುಲ ಉದ್ದದ ಬೆಳ್ಳಿಯ ತಗಡು ಮಾಡಿಸಿ—ಎಲ್ಲಾ ನಿವೃತ್ತಿ!' ಎಂದು ಹೇಳು

ತ್ತಾರೆ. ಅವರು ಇದಕ್ಕೆ ಕಿವಿಗೊಡುವುದಿಲ್ಲ! ನಾನೇ ಮಾಡೋಣ ವೆಂದರೆ ಜೀವದಾಸೆ ಬಿಟ್ಟು ಮಾಡಬೇಕಾಗಿದೆ. ನಾನು ಸತ್ತರೆ ಅಷ್ಟೇ ಹೋಯಿತೆನ್ನೋಣ; ಆದರೆ ಒಂದು ಮಗುವಿದೆಯಲ್ಲ. ಅದರ ಗತಿ? ಅವರ ಕ್ರೋಪವನ್ನು ಮನುಷ್ಯಮಾತ್ರರಿಂದ ತಡೆಯುವುದು ಅಸಾಧ್ಯ! ನನ್ನ ಸ್ಥಾನದಲ್ಲಿ ಇನ್ನೊಬ್ಬಳಿರುತ್ತಿದ್ದರೆ 'ಸಾಕಪ್ಪಾ ಸಾಕು' ಎಂದು ಓಡಿಬಿಡುತ್ತಿದ್ದಳು. ಎಲ್ಲಾ ನನ್ನ ವಿಧಿ!

ನೀವಾದರು ನನ್ನ ಮೇಲೆ ಕರುಣೆಯಿಟ್ಟು ನನಗೂ ಮಗುವಿಗೂ ಎರಡು ತಾಯಿತ ಮಾಡಿಸಿ ಬರಿಸಿ ಕಳುಹಿಸಿ ಕೊಡುವಿರೆಂದು ನಂಬು ತ್ತೇನೆ. ನನ್ನ ಹೊಟ್ಟೆ ನೋವಿಗೇನಾದರೂ ಲೇಹ ಮಾಡಿಸಿ ಕಳುಹಿಸಿ ಕೊಡಿ. ಕಳುಹಿಸಿಕೊಡುವುದರ ಬದಲು ಅಮ್ಮನೇ ಬಂದರೆ ಒಳಿತು. ಇಷ್ಟು ನಿಮ್ಮಿಂದ ಸಾಧ್ಯವಾಗದೆ ಹೋದಲ್ಲಿ ಹೆಚ್ಚು ಶ್ರಮ ವಹಿಸಬೇಡಿ. ನನ್ನ ಹಣೇಬರಹ ಹೇಗಿದೆಯೊ ಹಾಗೆ ನಡೆದೀತು!

ಇಂತಿ,
ಬೇಡಿಕೊಳ್ಳುವ ಆಶೀರ್ವಾದಗಳು,
ತು ಳ ಸಿ

—ಎಂದು ಮಾಧವರಾಯರು ಪತ್ರವನ್ನು ಓದಿ ಮುಗಿಸಿದರು.

ಕಲ್ಲೆದೆಯಾದರೇನು? ಹೆಂಗಸಲ್ಲವೆ? ಗಂಡನ ದುಃಖವನ್ನು ಪರಿಹಾರ ಮಾಡಲೋಸುಗ ಆಗ ಹಾಗೆ ಹೇಳಿದಳು. ಈಗ ತುಳಸಿಯ ಪತ್ರವನ್ನು ಓದಿ ಕೇಳಿದಾಕ್ಷಣ ಕಾವೇರಮ್ಮನ ಕಣ್ಣುಗಳಿಂದ ನೀರು ಸುರಿಯತೊಡಗಿತು.

ಕಡಿಮೆಯೆಂದರೆ ಇಪ್ಪತ್ತೈದು ರೂಪಾಯಿಯಿಲ್ಲದೆ ಇದರ ನಿವಾರಣೆ ಅಸಾಧ್ಯ. ಅಂದೇ ಹೊರಟುನಿಂತಿದ್ದ ರಾಯರ ಕೆಲಸಕ್ಕೆ ತೊಡಕು ಬಂದಿತು. ಆ ತಿಂಗಳು ಹೋಗುವುದೂ ಬೇಡವೆಂದಾಯಿತು.

ಪ್ರಕಾಶನಿಗೆ ಸಿಟ್ಟೇನೊ ಬಂದಿರಬಹುದು. ಆದರೆ ಹೊರಗೆಡಹುವುದಕ್ಕೆ ಹೋಗದೆ ಸಿಟ್ಟನ್ನು ಹೊಟ್ಟೆಯೊಳಗೆ ಇಟ್ಟುಕೊಂಡನು.

## ೧೮

ಮಾನವನಜೀವನದಲ್ಲಿ ಮನ್ಮಥಲೀಲೆಯು ಅಡಗಿರದಿದ್ದರೆ ಊಸರ ಭೂಮಿಗೂ ಈ ಮಾನವಜೀವನಕ್ಕೂ ಅಂತರವೇನಿದೆ?

ಬಿಡಿಸಿದ ಕಿತ್ತಳೆಯ ಹಣ್ಣಿನ ತೊಳೆಯನ್ನು ಸುಲಿದಿಟ್ಟಂತೆ ಅವಳೆರಡು ತುಟಿಗಳು. ವಿಶಾಲವಾದ ಕಣ್ಣುಗಳು. ನೋಟಕ್ಕೆ, ಅವಳ ಕಪೋಲಗಳು ಗುಲಾಬಿಗಿಂತಲೂ ಮೃದುವಾಗಿದ್ದವು. ಕಿವಿಗಳಲ್ಲಿ ಮಿಂಚುವ ವಜ್ರದೋಲೆ; ಅದರಲ್ಲಿ ನವನಾಗರಿಯ ಲೋಲಾಕು ಜೋಲುತ್ತಿತ್ತು. ಸುಂದರವಾದ ತೆಳ್ಳಗಿನ ಮೈ. ಗೌರವರ್ಣದಿಂದ ಶೋಭಿಸುತ್ತಿದ್ದ ಅವಳ ಬೆಳ್ಳಿಯೊಡ್ಯಾಣವು ಅವಳ ಕಟಿಪ್ರದೇಶದ ಅಂತರವನ್ನು ತೋರಿಸುತ್ತ ಥಳಥಳನೆ ಜ್ವಲಿಸುತ್ತಿತ್ತು. ಬಿಗಿದು ಕಟ್ಟಿದ್ದ, ಆಗತಾನೆ ಬಿರಿಯಲಿರುವ ಕಮಲದಂತೆ, ಅವಳೆರಡು ಕುಚಗಳು ತೊಟ್ಟಿದ್ದ ರೇಷ್ಮೆಯ ಕುಪ್ಪಸದೊಳಗೆ ಹುದುಗಿದ್ದವು. ಎಷ್ಟು ದೊಡ್ಡ ಧೀರ ಬ್ರಹ್ಮಚಾರಿಗಳನ್ನೂ ಮೋಹಗೊಳಿಸುವಂತಿತ್ತು—ಅವಳ ರೂಪ. ಸುಗಂಧದ್ರವ್ಯಗಳಿಂದ ಪರಿಮಳಿಸುತ್ತಿದ್ದ ಅವಳ ಮೈಯ ಸಿರಿಗಂಪು ಯಾವ ಪುರುಷನನ್ನು ತಾನೆ 'ಊಹುಂ' ಅನ್ನಿಸೀತು! ಯಾವ ಪುರುಷನು ಅವಳ ಮಾಯಾ ಜಾಲದಲ್ಲಿ ಸಿಲುಕದವ? ಪುರುಷರ ಹೃದಯವನ್ನು ಇಕ್ಕುಳಿಯಿಂದ ಹಿಡಿದು ಎಳೆಯುವಂತಿತ್ತವಳ ಮೋಹಮಯ ನೋಟ. ನಸುನಗುವು, ಚೆಲುವು ದಾಟಿ ಹೊರಡುವ ಕಿಲಕಿಲನೆ ನಗುವ ರವವು ಬಾಡಿದೆದೆಯನ್ನು ಮೂಡಿಸುವಷ್ಟು ಶಕ್ತಿಯುಳ್ಳದಾಗಿದ್ದವು. ಹಲವಾರು ಬಂಗಾರದ ಬಳೆಗಳು ಅವಳ ಕೈಯ ಮಣಿಕಟ್ಟಿನಲ್ಲಿ ಎರಡು ಗಾಜಿನ ಬಳೆಗಳ ಮಧ್ಯೆ ಹೊಳೆಯುತ್ತಿದ್ದವು. ಮುಂದಿನ ಮೇಜಿನ ಮೇಲಿನ ಕನ್ನಡಿಯ ಎದುರು ಕುಳಿತು, ತನ್ನ ಸಿಂಗಾರಾದಿಗಳು ಮುಗಿಯಲು ಹೊರಗೆ ಬಂದಳು—ಮೋಹಿನಿ!

ಕನ್ನಡಿಯಂಥ ನೆಲದಲ್ಲಿ ಸುಂದರವಾದೊಂದು ಹುಲ್ಲಿನ ಹಸೆಯನ್ನು ಹಾಸಿದೆ. ಬಂಗಾರದಂತೆ ಹೊಳೆಯುತ್ತಿದ್ದ ಹಿತ್ತಾಳೆಯ ತಟ್ಟೆಯಲ್ಲಿ ತುಂಬಾ ತಾಂಬೂಲವಿದೆ. ಅದರ ಸಮೀಪ ಒಬ್ಬಳು ವೀಳ್ಯೆಗೆ ಸುಣ್ಣ ದಡವಲು ಸಜ್ಜಾಗಿ ಕುಳಿತಿದ್ದಳು. ಇನ್ನೊಬ್ಬಳು ತೆಳ್ಳಗಿನ ಗಾನವನ್ನು ಉಸುರುತ್ತಾ ತಂಬೂರಿ ಮೀಟುತ್ತಿದ್ದಳು. ಮತ್ತೊಬ್ಬಳು ಮೃದಂಗವಲ್ಲಿ ಸ್ವರ ಹೊರಡಿಸುತ್ತಿದ್ದಳು. ಮಗುದೊಬ್ಬಳು ಮುಂದೆ ಹಾರ್ಮೋನಿಯಂ ಇಟ್ಟುಕೊಂಡು ಶೃತಿ ಮಾಡುತ್ತಾ, ಬೆರಳನ್ನು ಪಟ್ಟಿಯ ಮೇಲಿಟ್ಟು ಬಾರಿಸಲನುವಾಗಿದ್ದಳು.

ಅವರಿಗೆದುರಾಗಿ ಸುತ್ತಲೂ ರತ್ನಗಂಬಳಿ ಹಾಸಿದೆ. ರೇಷ್ಮೆಯ ಬಟ್ಟೆ ಹೊದೆಸಿದ್ದ ದಿಂಬುಗಳನ್ನು ಅದರ ಮೇಲೆ ಸಾಲಾಗಿರಿಸಿದೆ. ನವನಾಗರಿಕ

ತರುಣರ ತಂಡವೊಂದು ಸಾಲಾಗಿ ಆ ರತ್ನಗಂಬಳಿಯ ಮೇಲೆ ಬಂದು ಕುಳಿತು ದಾಯಿತು. ಅವರ ಬಟ್ಟೆಗಳ ಮೇಲಿಂದ ಶ್ರೀಮಂತರ ಮಕ್ಕಳೆಂದು ಹೇಳ ಬಹುದಿತ್ತು.

ಸಂಗೀತಕ್ಕೆ ಸಿದ್ಧರಾಗಿದ್ದ ಹೆಂಗಸರು ಎದ್ದು ಆ ತರುಣರಿಗೆ ನಮಸ್ಕಾರ ಮಾಡಿದರು. ಅವರು ಕುಳಿತನಂತರ ಇವರೂ ಕುಳಿತರು. ಸಂಗೀತ ಆರಂಭ ವಾಯಿತು.

ತಂಬೂರಿ ಮೀಟುತ್ತಿದ್ದವಳು "ಮೋಹಿನಿ ?" ಎಂದಾಗ "ಹಾಂ! ಬಂದೆ!" ಎಂಬೊಂದು ಸದ್ದು ಕೇಳಿಸಿತು.

ಮೋಹಿನಿ ಬಂದೇ ಬಂದಳು. ಅವಳ ನಾಟ್ಯವೂ ಆಯಿತು. ಅದರ ಸವಿಯನ್ನು ಸವಿದ ಯುವಕರು ಕಿಸೆಯೊಳಗಿನ ಚರ್ಮದ ಚೀಲವನ್ನು ಹೊರ ತೆಗೆದು ಅವರವರ ಶಕ್ತಿಗನುಸಾರವಾದ—ಒಳಗೊಳಗೆ ಸಂಘ ಕಟ್ಟಿಕೊಂಡು—ಒಬ್ಬನು ಹತ್ತಾದರೆ ಇನ್ನೊಬ್ಬನು ಹದಿನೈದು, ಹೀಗೆ ಇದ್ದೆಲ್ಲ ರೂಪಾಯಿ ನೋಟುಗಳನ್ನೂ—ಮೋಹಿನಿಯ ಮೋಹನರೂಪಕ್ಕೆ ಮರುಳಾಗಿ—ಅವಳ ಪಾಲುಮಾಡಿ, ಅವಳಿಗೊಂದು ನಮಸ್ಕಾರ ಹೊಡೆದು, ಬೇಡ ಬೇಡವೆಂದರೂ ಅರ್ಧ ಮನಸ್ಸಿನಿಂದ ಹೊರಗೆ ಕಾಲಿಟ್ಟರು. ಮಾರ್ಗಕ್ಕಿಳಿದವರೆಲ್ಲರೂ ಒಬ್ಬೊಬ್ಬರು ಒಂದೊಂದು ಮಾರ್ಗವಾಗಿ ಹೋದರು. ಅವರಲ್ಲಿ ಒಬ್ಬನಾದ ತೇಜಪಾಲ ಅಲ್ಲೇ ಸಮೀಪದ ಉಪಾಹಾರಗೃಹವನ್ನು ಹೊಕ್ಕನು. ಎಲ್ಲರೂ ಮರೆಯಾದ ರೆಂದಾಗ ಆತ ಅಲ್ಲಿಂದ ಮೋಹಿನಿಯ ಮನೆಯ ಕಡೆಗೆ ನಡೆದನು.

"ನೀವು ಹೋದಿರೆಂದೇ ಭಾವಿಸಿದೆ. ನೀವು ಬಹಳ ಚತುರರೆಂದು ನಾನು ಬಲ್ಲೆ! ಆದರೆ...." ಎಂದಳು ಮೋಹಿನಿ

"ಆದರೇನು ?"

"ಆದರೇನೂ ಇಲ್ಲ!....ನಿಮ್ಮ ನಡೆ ನೋಟ ನೋಡಿ, ನೀವು ಹೋಗಿಯೆ ಬಿಡುವಿರೆಂದು ನೆನೆದೆ."

"ದೂರ ನಿಂತು ಮಾತನಾಡ್ತೀಯೇಕೆ? ಸಮೀಪ...."

"ಇದೊ ಬಂದೆ—ಗೆಜ್ಜೆ ತೆಗೆದಿಟ್ಟು....ಕಾಲು ನೋಯ್ತಿದೆ."

"ಸರಿ!"

"ಮತ್ತೆ, ನಿಮ್ಮ ಮದುವೆ ವಿಚಾರವೇನಾಯ್ತು ?"

" ಏನು ? ಒಂದೇ ತಿಂಗಳು ಉಳಿದಿದೆ, ಮೋಹಿನಿ ! "

" ನಮ್ಮನ್ನೆಲ್ಲಾ ಕರೀತೀರೊ ಏನೊ ! "

" ಹಹಹ ! ಚೆನ್ನಾಗಂದೆ. ನಾನು ಕರೀಬೇಕೆ, ಮೋಹಿನಿ ? ಹಂ ! " ಎನ್ನುತ್ತ ಅವಳ ಸಮೀಪಕ್ಕೆ ಸರಿದು ಪರಿಮಳಿಸುತ್ತಿದ್ದ ಅವಳ ಕೇಶರಾಶಿಯನ್ನು ಕೈಯಿಂದ ತಡವುತ್ತ, ಮುಖವಿಟ್ಟು ಆಘ್ರಾಣಿಸುತ್ತ, ಆ ಸುಗಂಧ ಸುಖದಲ್ಲಿ ಲೀನನಾಗಿ ಅವಳ ಶಿರವನ್ನೊಮ್ಮೆ ಮುದ್ದಿಟ್ಟನು. ಆಗ ಅವಳ ಮಂದಸ್ಮಿತ ವದನವು ಅವನನ್ನು ನೋಡಿತು. ಅವಳೆರಡು ಕೋಮಲ ಕರಗಳು ಅವನ ತೋಳುಗಳನ್ನಾಶ್ರಯಿಸಿದವು. ಇಬ್ಬರೂ ಒಮ್ಮೆ ಮೌನವಾಗಿ ನಕ್ಕು ಉಗುಳು ನುಂಗಿದರು. ಅವರೀರ್ವರ ನಯನಗಳಲ್ಲಿ ಪ್ರೇಮ ಪ್ರಭಾಕರನು ಮೂಡಿ ಮುಳುಗಿದನು—ಎರಡು ರೂಪುಗಳು ಪರಸ್ಪರ ಬಯಸಿದವು. ಒಂದಾಗ ಲೊಪ್ಪಿದವು. ಇನ್ನು ಬಾಯ್ದೆರೆದು ಮಾತಾಡಲಾರವು—ಅಲ್ಲೇ ಸುಖಾಸನದಲ್ಲಿ ಬಿದ್ದುಬಿಟ್ಟವು.

* * * *

ಅನಂತನನ್ನು ಕಾದು ಕುಳಿತಿದ್ದಾರೆ ಪದ್ಮಮ್ಮ. ಒಳಗಿನ ದೀಪಗಳೆಲ್ಲ ವನ್ನೂ ಆರಿಸಿದ್ದರು. ಹಜಾರದ ಮತ್ತು ಅಡಿಗೆಕೋಣೆಯ ವಿದ್ಯುದ್ದೀಪಗಳು ಮಾತ್ರ ಉರಿಯುತ್ತಿದ್ದವು.

ಅನಂತ ಬಂದವನೆ ಕಾಲು ತೊಳೆದುಕೊಂಡು ಮೇಲೇರಿದ. ಒಳಹೊಕ್ಕು ಅಂಗಿ ತೆಗೆದಿಟ್ಟು ಹಾಸಿಗೆ ಬಿಡಿಸಿ ಮಲಗಿದ. ಪದ್ಮಮ್ಮ, " ಅನಂತೂ, ಬಾಪ್ಪಾ. ಬಡಿಸಿದ್ದೀನೆ. ಊಟ ಮಾಡಿಕೊಂಡು ಮಲಗು " ಎಂದುದನ್ನು ಕೇಳಿ ಅನಂತ ಊಟ ಮಾಡಲು ಎಲೆಯ ಮುಂದೆ ಹೋಗಿ ಕುಳಿತು ಒಂದೆರಡು ತುತ್ತು ಉಣಲಾರಂಭಿಸಿದ.

" ಇಷ್ಟು ಹೊತ್ತು ಎಲ್ಲಿ ಹೋಗಿದ್ದೆ, ಅಣ್ಣಯ್ಯ ? "

" ನಾಟಕಕ್ಕೆ ಹೋಗಿದ್ದೆನಮ್ಮಾ ! "

" ಯಾವ ನಾಟಕ ? "

" ದೇವದಾಸಿ. "

" ಮಾವನನ್ನು ನೋಡಿದೆಯಾ ? "

" ಇಲ್ಲ. ಬರ್ಲಿಲ್ವೆ ? "

" ಇಲ್ಲ. ಅವನು ಡಿ.ಎಸ್.ಪಿ. ಮನೆಗೆ ಹೋಗಿದ್ದಾನೆ. ಅವರ ಹುಟ್ಟು ಹಬ್ಬಾಂತೆ ಈವತ್ತು."

* * * *

ಕಿಟಕಿಯ ಮೇಲಿನ ಬಾಗಿಲನ್ನು ತೆರೆದಿಟ್ಟು ಮೂವರು ಹೆಂಗಸರು ಏನನ್ನೋ ನೋಡಿ ಹಲ್ಲು ಬಿಡದೆ ನಗುತ್ತಿದ್ದರು.

" ನೀ ಕರೀಯೆ."

" ಯಾರು ? ನಾನೆ! ಊಹುಂ! ನೀನೆ ಕರಿ."

" ಬೇಡ ಹೋಗು. ನೀ ಕರಿ."

" ಅಯ್ಯೋ! ನಾನೆ! ನಾನೊಲ್ಲಪ್ಪ!"

" ಸರಿ. ನಾನೇ ಕರೀತೇನೆ. ಮೋಹಿನಿ ?"

ಮೋಹಿನಿ ದಡಬಡಿಸಿಕೊಂಡು ಎದ್ದಳು. ಎದ್ದು ಮೈಮುರಿದುಕೊಂಡಳು. ಕಣ್ಣು ತೆರೆದು ನೋಡಲ್ಲು ಭಾವೀ ಗಂಡ ಮಾಯವಾಗಿದ್ದ. " ನನ್ನನ್ನು ಆಗಲೆ ಕರೀಬಾರದಿತ್ತೆ, ಸುಂದಾ ?" ಎಂದು ಸಂಗಾತಿಯೊಬ್ಬಳಿಗೆ ಪ್ರಶ್ನೆ ಹಾಕಿದಳು, ಮೋಹಿನಿ.

ಸುಂದಾ, " ನಿನ್ನ ಮಹಾರಾಜರು ಈಗ ತಾನೆ ಹೋದರು. 'ನಾನು ಹೋಗೊ ತನಕ ಕರೀಬೇಡಿ' ಎಂದವರ ಅಪ್ಪಣೆಯಾಗಿತ್ತು ರಾಣಿ, ನಮಗೆ" ಎಂದಳು ಮೋಹಿನಿಗೆ ಉತ್ತರವಾಗಿ.

ಎದ್ದವಳೇ ನಿತ್ಯಾನುಷ್ಠಾನ ಉಪಹಾರಾದಿಗಳನ್ನು ತೀರಿಸಿಕೊಂಡು ಎಲ್ಲಿಗೋ ಹೊರಡಲನುವಾದಳು, ಮೋಹಿನಿ.

* * * *

ಹನ್ನೊಂದು ಹೊಡೆಯಲು ಐದು ಮಿನಿಟು ಇತ್ತಷ್ಟೆ. ಕಲೆಕ್ಟರ್ ತೇಜಪಾಲರಾಯರು ಆಫೀಸಿನ ಬಾಗಿಲಲ್ಲಿ ಜಟಕಾ ಬಿಟ್ಟು ಕೆಳಗಿಳಿದರು. ಚಂದಪ್ಪ ಬಂದು ಗಾಡಿಯೊಳಗಿನ ತೊಗಲಿನ ಚೀಲವನ್ನು ತೆಗೆದೊಯ್ದನು.

" ಚಂದಪ್ಪಾ ?"

" ಸ್ವಾಮಿ !"

" ಹೆಡ್‌ಕ್ಲಾರ್ಕು ಬಂದಿದ್ದಾರೇನು ನೋಡು."

" ಇಲ್ಲ.... ಈಗಷ್ಟೇ ಬರ್‍ತಿದ್ದಾರೆ, ಸ್ವಾಮಿ."

" ನಾನು ಕರೆದೆ ಅನ್ನು."

ಚಂದಪ್ಪ ಓಡಿದ. ಹೆಡ್‌ಕ್ಲಾರ್ಕ ಬಂದು,

" Good morning, Sir" ಎಂದರು.

" Good morning.... You are late today."

" I am sorry, Sir!"

" ಪರವಾಗಿಲ್ಲ. Miss. Mohini, you have got plenty of work today. ಈ ಐದು sheetಗಳನ್ನು type ಮಾಡಿ ತರ್ಬೇಕು."

ಚಂದಪ್ಪ ಬಾಗಿಲ ಬದಿಯಲ್ಲಿ ಮುದುಡಿಕೊಂಡು ನಿಂತಿದ್ದ. ಮೋಹಿನಿ ಕೈಯುಚ್ಛಾಗ(ಟೈಪಾಗ)ಬೇಕಾದ ಕಾಗದಪತ್ರಗಳನ್ನು ತೆಗೆದುಕೊಂಡು ಹೋದಳು. ಹೋಗುವಾಗ ಚಂದಪ್ಪನನ್ನೂ ಕರೆದಳು; ಆದರೆ ಚಂದಪ್ಪ ಹೋಗಬೇಕೊ ಬೇಡವೊ ಎಂಬ ದೃಷ್ಟಿಯನ್ನು ರಾಯರ ಕಡೆ ಬೀಸಿದ. ರಾಯರು, " ಹೋಗು, ಹೋಗು! ಮೆಶಿನ್ ಕ್ಲೀನ್ ಮಾಡಿಕೊಟ್ಟು ಬಾ!" ಎಂದರು. ಚಂದಪ್ಪ ಧಾವಿಸಿದ.

* * * *

ಆಲಸ್ಯದ ಅಧಿದೇವತೆಯು ಅಂದು ಮೋಹಿನಿಯ ವದನಮಂಡಲದಲ್ಲಿ ಅವತರಿಸಿದ್ದಳು. ಸ್ಫುಟ ಕೊಟ್ಟು ನಿಮಿರಿ ನಿಂತಿದ್ದ ಅವಳ ಅಂಗಾಂಗಗಳು ಯಾವುದನ್ನೋ ಬಯಸುತ್ತಿದ್ದವು. ಈಗ ತಾನೆ ನಿದ್ದೆಯಿಂದ ಎದ್ದಂತಿತ್ತು, ಅವಳ ಮುಖ. ಹಾಸಿಗೆಯಿಂದ ಸಿಂಗರಿಸಿದ್ದ ಮಂಚದ ಮೇಲೆ ಬಿದ್ದುಕೊಂಡು ಆಕಳಿಸುತ್ತ, ಹೊರಳಾಡುತ್ತ, ಗಳಿಗೆಗೊಮ್ಮೆ ಮೈಮುರಿದುಕೊಳ್ಳುತ್ತಿದ್ದಳು. ಶೃಂಗಾರಗಳೇನೂ ಅವಳನ್ನಾಗ ಅಲಂಕರಿಸಿದ್ದಿಲ್ಲ. ಬಿಳಿ ಬಟ್ಟೆಗಳನ್ನು ಉಟ್ಟಿದ್ದಳು. ತಾಸು ಅರ್ಧ ತಾಸಿಗೊಮ್ಮೆ ಎದ್ದು ಹಜಾರದ ಬಾಗಿಲ ಕಡೆಗೆ ನೋಡುತ್ತಿದ್ದಳು. ಇದರಿಂದ ಯಾರನ್ನೋ ಅವಳು ನಿರೀಕ್ಷಿಸುತ್ತಿದ್ದಾಳೆಂಬುದು ವ್ಯಕ್ತವಾಗುತ್ತಿತ್ತು. ಮುಖ ಮೇಲೆ ಮಾಡಿ ಮಲಗಿ ದುಪ್ಪಟಿಯನ್ನು ಕತ್ತಿನವರೆಗೆ ಎಳೆದುಕೊಂಡು, ದೀರ್ಘನಿದ್ರೆ ಆವರಿಸಿದ್ದರೂ ತಲೆನೋವಿನಿಂದ ಬಾಧೆ ಪಡುವವಳಂತೆ, ಕಣ್ಮುಚ್ಚಿ ತಲೆಯನ್ನು ಕೈಬೆರಳುಗಳಿಂದ ಒತ್ತಿ ಹಿಡಿದುಕೊಂಡು ಮಲಗಿದ್ದಾಳೆ. ನರಳುವಿಕೆಯ ಧ್ವನಿಯೊಂದನ್ನು ಹೊರಡಿಸಲು ಪ್ರಯತ್ನಿಸುತ್ತಿದ್ದಾಳೆ.

ಆಂಗ್ಲ ಪೋಷಾಕಿನಿಂದ ಸುಸಜ್ಜಿತನಾದ ಮಧ್ಯವಯಸ್ಕ ಆ ಹಜಾರದ ಬಾಗಿಲನ್ನು ಸರಿಸಿದ. ಬಂದವನೇ ಆ ಸ್ತ್ರೀವ್ಯಕ್ತಿಯ ಸಮೀಪಕ್ಕೆ ಸರಿದು, ಮಂಚದ ಮೇಲೆ ಕುಳಿತನು. ಆಗ ಅವಳು ಅವನ ಕಡೆ ಬೆನ್ನು ಮಾಡಿ ಸರಿದು ಮಲಗಿದಳು.

" ಏನು, ಸಿಟ್ಟೆ ? "

" ಮತ್ತಿಂದು ರವಿವಾರವಾಗಿದ್ದರೂ ಇಷ್ಟು ತಡವೇಕೊ ? ಮದುವೆಯ ಸುದಿನದ ಸವಿನೆನಹುಗಳು ಬರ...."

" ಹಾಗೇಕೆನ್ನುವೆ, ಮೋಹಿನಿ ? ನಾನು ಮದುವೆ ಮಾಡಿಕೊಳ್ಳುವುದರಲ್ಲಿ ನಿನಗಿಷ್ಟವಿಲ್ಲವೆಂಬಂತೆ ತೋರುತ್ತದಲ್ಲ ! "

" ನಾನು ಈ ತಿಂಗಳ ಕೊನೆಗೆ ನನ್ನ ಕೆಲಸಕ್ಕೆ ರಾಜೀನಾಮೆ ಕೊಡ ಬೇಕೆಂದಿದ್ದೇನೆ ! "

" ಅದೇಕೆ ? "

" ಟೈಪಿಂಗ್ ಕೆಲಸ ನನ್ನ ಹೃದಯವನ್ನು ಬಲಹೀನ ಮಾಡುತ್ತಿದೆ."

" ಹಾಗಿದ್ದರೆ ಬಿಟ್ಟುಬಿಡು."

" ನನ್ನ ಮುಂದಿನ ಗತಿ ? "

" ನಾನಿಲ್ಲವೆ ? "

" ನೀವಿದ್ದರೆ ! ನಾಳೆ ಮದುವೆಯಾದರೆ ಮೋಹಿನಿಯ ನೆನಪೂ ಮಾಯ ವಾಗುವುದು ! "

" ನನ್ನನ್ನು ಅಂಥವರ ಪಂಗಡಕ್ಕೆ ಸೇರಿಸಿದೆಯಾ ? "

" ನೀವೇನು ? ಪ್ರಪಂಚದಲ್ಲಿ ಎಲ್ಲರೂ ಹಾಗೇ ! ಈಗಲೇನೊ ಉಪಾಯ ವಿಲ್ಲದೆ ಆಗಾಗ....! "

" ಹಾಗೆನ್ನಬೇಡ, ಮೋಹಿನಿ. ನಿನ್ನ ಇಷ್ಟಾರ್ಥವನ್ನು ಚೆನ್ನಾಗಿ ಬಿಡಿಸಿ ಹೇಳಿದರೆ ತಾನೆ ತಿಳಿಯಲು ಸಾಧ್ಯ."

" ಹೇಳಿದರೇನು ? ಅದೆಲ್ಲಾ ಆಗುವುದೆ ನಮ್ಮಂತಹವರಿಗೆ ! ಬಿಡಿ. ತಲೆ ಸಿಡಿಯುತ್ತಿದೆ."

" ಮೋಹಿನಿ, ನೀನು ಹೀಗೆ ಮಾಡಿದರೆ ನಾನು ಹೋಗುವೆ."

" ನೋಡಿದಿರಾ ! ಈಗಲೆ ಇಷ್ಟಿದೆ ಸಿಟ್ಟು. ಮುಂದೆ ? "

" ಇಲ್ಲ. ಮೋಹಿನಿ. ನಿನ್ನ ಇಷ್ಟಾರ್ಥವನ್ನು ಹೇಳು. ನನ್ನಿಂದ ಸಾಧ್ಯ ವಿದ್ದರೆ ಖಂಡಿತವಾಗಿ ಮಾಡುವೆ "

ಎಂದು ತೇಜಪಾಲನು ಮೋಹಿನಿಯನ್ನು ಸರಿಸಿ ಮುಖಕ್ಕೆ ಮುಖವಿಟ್ಟು ಹೇಳಿದನು. ತಲೆಯನ್ನು ಸವರಿದನು. ಸಿಡಿಯುತ್ತಿದ್ದ ಶಿರದ ನರವನ್ನು ಒತ್ತಿಹಿಡಿದು ಅದರ ಬಾಧೆಯನ್ನು ಕಮ್ಮಿಯಾಗಿಸಿದನು. ಆಮೇಲೆ ಅವಳನ್ನು ಸನಿಯಕ್ಕೆಳೆದು ಅವಳ ಬೆನ್ನು ದಡವುತ್ತ " ಹೇಳು, ಮೋಹಿನಿ, ಹೇಳು " ಎಂದ.

" ಆಗಲೆ ' ಸಾಧ್ಯವಿದ್ದರೆ ! ' ಎಂದಿರಲ್ಲ. ಎರಡು ಮಾರ್ಗಗಳಲ್ಲಿ— ನಿಮಗಿಷ್ಟವಿದ್ದ ಮಾರ್ಗದಲ್ಲಿ ನೀವು ತಿರುಗುವಿರೆಂಬುದು ಅದರಲ್ಲೇ ಚೆನ್ನಾಗಿ ವ್ಯಕ್ತವಾಗುವುದಲ್ಲಾ ! "

" ನಿನ್ನಿಚ್ಛೆಯನ್ನು ಖಂಡಿತ ಪೂರೈಸುವೆ, ಮೋಹಿನಿ. ಈಗಲಾದರೂ ಹೇಳು."

" ಖಂಡಿತ ! "

" ಹುಂ ! "

" ಹುಂ ! ಅಂದರೆ ಸಾಲದು. ಹೇಳಿ ' ಖಂಡಿತ ' ಎಂದು."

" ಖಂಡಿತ ! "

" ಹಾಗಾದರೆ ಈ ಕಾಗದದಲ್ಲಿ ಬರೆದುಕೊಡಿ."

" ಏನೆಂದು ? "

" ಭಯವೇಕೆ ? ನಾನು ಹೇಳಿದಂತೆ !........"

" ಬರೆಯುವುದೇಕೆ ? ನನ್ನಲ್ಲಿ ನಿನಗೆ ಅಷ್ಟು ನಂಬಿಕೆಯಿಲ್ಲವೆ ? "

" ಆಗಲಿ, ಬೇಡ ! ಹೇಳಲೆ ? ಖಂಡಿತವಾಗಿಯೂ ನಡೆಸಿಕೊಡುವಿರಷ್ಟೆ? ನೀವು ಸುವಿದ್ಯಾವಂತರು-–ಪದವೀಧರರು—ಸಮಾಜೋನ್ನತಿಯನ್ನು ಕೋರ ತಕ್ಕವರು—ಮೋಸವಂಚನೆಗಳನ್ನು ಖಂಡಿಸಿ ಲೋಕಕಲ್ಯಾಣಕ್ಕಾಗಿ ದುಡಿದು, ನ್ಯಾಯಾನ್ಯಾಯಗಳನ್ನು ಪರಿಶೀಲಿಸಿ, ನೆಲಸುವಂತೆ ಮಾಡಿ, ಕಾಪಾಡಿ ಕೊಂಡು ಬರಬೇಕಾದವರು........"

" ಮೋಹಿನಿ, ಇದೇಕೆ ಈ ಭಾಷಣ ಈವತ್ತು ? "

" ಬೇಕು ! ಸಾಕೆನ್ನುವಿರಾದರೆ ಕಡೇದಾಗಿ ಒಂದು ಮಾತು. ನಾಲಿಗೆ ಯೆಂಬುದು ಮನುಷ್ಯನಿಗೆ ಒಂದೇ ಎಂಬುದನ್ನು ತಾವು ತಿಳಿದೇ ಇರಬೇಕು ! ಆದರೂ........"

" ಇನ್ನೂ ನನ್ನ ಮೇಲೆ ಸಂಶಯವೆ, ಮೋಹಿನಿ ? "

" ಆಗಲಿ, ನನ್ನಿಚ್ಛೆಯನ್ನು ಹೊರಗೆಡವುದರ ಮೊದಲು ಹಲ ಕೆಲವು ವಿಷಯಗಳನ್ನು ಕೇಳಬೇಕೆಂದಿದ್ದೇನೆ........"

" ಆತಂಕವೇನಿದೆ ? "

" ನೀವು ನನ್ನನ್ನು ಅಪೇಕ್ಷಿಸಿದಂದಿನಿಂದ ನನ್ನ ಸಂಗಸುಖವನ್ನು ಅನುಭವಿಸಿರುವುದು ನಿಜವಷ್ಟೆ ? "

" ನೀನೂ ನನ್ನ ಸಂಗದಿಂದ ಸುಖಪಟ್ಟಿರಬಹುದು."

" ಇರಬಹುದು. ಏಕೆ ? ಪಟ್ಟಿದ್ದೇನೆ !....ಆದರೆ ನಾನಾಗಿ ನಿಮ್ಮನ್ನು ಬಯಸಲಿಲ್ಲ; ನೀವಾಗಿ ನನ್ನನ್ನು ಬಯಸಿದಿರಿ ! "

" ಮೋಹಿನಿ, ವೃಥಾ ದ್ರಾವಿಡಪ್ರಾಣಾಯಾಮವೇಕೆ ? ತೆರೆದು ಹೇಳಿಬಿಡು."

" ನೀವು ನನ್ನನ್ನು ಮದುವೆಯಾಗಬೇಕು."

" ಹಾಂ ! "

" ಏಕೆ ? "

" ನೀನು........ನಿನ್ನನ್ನು !........"

" ನಾನೇನು ? ವೇಶ್ಯೆಯೆನ್ನುವಿರಾ ? ಇಲ್ಲ. ನಾನು ವೇಶ್ಯೆಯಲ್ಲ. ಸೂಳೆಯಲ್ಲ ! ನಾನಿಲ್ಲಿಗೆ ಬರುವವರನ್ನು ಬರಿ ನಾಟ್ಯದಿಂದಲೆ ತೃಪ್ತಿಪಡಿಸುವೆ, ಇತರ ಯಾವ ರೀತಿಯಲ್ಲಿಯೂ ಅಲ್ಲ. ನೀವೇ ನನ್ನನ್ನು ಮುಟ್ಟಿ ಅಸ್ಪೃಷ್ಟಗೊಳಿಸಿದಿರಿ. ನೀವು ವಿದ್ಯಾವಂತರು, ಉತ್ತಮ ಪುರುಷರು—ನನ್ನನ್ನು ಕೈಬಿಡಲಾರಿರೆಂಬ ನಂಬಿಕೆಯಿಂದ ನಿಮ್ಮ ಇಚ್ಛೆಗೆ ಒಪ್ಪಿದೆ........"

" ನಿನ್ನನ್ನು ನಾನು ಮದುವೆಯಾಗುವೆನೆಂದರೆ ಮನೆಯಲ್ಲಿ ಒಪ್ಪುವರೆ ?"

" ಏಕೆ ಒಪ್ಪಲಾರರು ? ಇದ್ದುದನ್ನು ಇದ್ದಂತೆ ಹೇಳಿರಿ."

" ಮೋಹಿನಿ, ನಿನಗೆ ನಾನು ಒಂದು ಸಾವಿರ ರೂಪಾಯಿ ಕೊಡ್ತೇನೆ ; ಸುಮ್ಮನೆ ಗೊಂದಲವೆಬ್ಬಿಸಬೇಡ."

" ಓಹೊ ! ಮರ್ಯಾದೆಯನ್ನು ಹಣದಲ್ಲಿ ತೋರಿಸುವಿರಾ ? ಗುಣದಲ್ಲಿ ತೋರಿಸಿ; ಕಾರ್ಯದಲ್ಲಿ ತೋರಿಸಿ. ನನ್ನನ್ನು ಮದುವೆಯಾಗಲು ನಾಚಿಕೆಯಾಗುವುದೆ ?........"

" ಅಲ್ಲಾ ಮೋಹಿನಿ, ಜನ ಏನೆಂದಾರು ? "

" ಜನರ ಬಾಯಿಗೆ ಮಣ್ಣು ಹಾಕಿ ! ಲೋಕದ ಜನರಿಗೆ ಗೊತ್ತಿದೆ ಯಾದರೂ ಏನು ? ಐ.ಸಿ.ಎಸ್. ಕಲಿತ ನಿಮಗೆ ಗೊತ್ತಿರುವುದು ಇಷ್ಟೇ ಎಂದ ಮೇಲೆ ಅವರಿಗೆಷ್ಟು ಗೊತ್ತಿದ್ದೀತು !?........ಸಂಭಾವಿತರಾದ ನೀವು ಈ ಅಸಂಭಾವಿತತನವನ್ನು ಮಾಡಿದುದು ನಿಮಗೆ ತಪ್ಪೆನಿಸುವುದಿಲ್ಲವೆ ? ಲೋಕಕ್ಕೆ ಹೆದರುವ ನೀವು ಸ್ವರ್ಗಕ್ಕೆ ಹೆದರಬೇಡವೆ ? ದೇವರಿಗೆ ಹೆದರಬೇಡವೆ ? ಅಬಲೆಯೊಬ್ಬಳ ಪಾತಿವ್ರತ್ಯ ಭಂಗಮಾಡಿ, ಕಡೆಗೆ ಅನ್ಯರಿಗೆ ಹೆದರಿ, ಅವಳ ಕೈಬಿಡುವ ನಿಮ್ಮಂತಹ ಪುಕ್ಕ ಪುರುಷರನ್ನು ಏನೆನ್ನಬೇಕೊ ?........"

" ಮೋಹಿನಿ ! "

" ಏಕೆ ?—ನನ್ನನ್ನು ಈ ಗತಿಗೇನೊ ತಂದಿರಿ ! ಮುಂದೆ ಯಾರನ್ನೂ ಹೀಗೆ ಅಧಃಪಾತಾಳಕ್ಕೆ ನೂಕಬೇಡಿ. ಹೆಣ್ಣಿನ ಶಾಪ ಸಾಮಾನ್ಯವಲ್ಲ ! ವಂಶ ನಶಿಸಿ ಹೋದೀತು !........"

" ಮೋಹಿನಿ, ಬಾ. ಹೊರಡು ! "

" ಎಲ್ಲಿಗೆ ? "

" ಹೇಳುವೆ, ಬಾ."

" ಹೇಳದೆ ಬರಲಾಗದು ! "

" ನಾವು ' ರಜಿಸ್ಟರ್ ' ಮದುವೆ ಮಾಡಿಕೊಳ್ಳೋಣ. ಆದರೆ ಒಂದು —ನೀನು ನಾಡಿದ್ದು ಬುಧವಾರ ನನ್ನೊಡನೆ ಹೊರಡಬೇಕು ! "

" ರಿಜಿಸ್ಟರ್ ನನಗೆ ಅಗತ್ಯವಿಲ್ಲ."

" ಮೋಹಿನಿ, ಬರುವ ತಿಂಗಳಲ್ಲಾಗುವ ನನ್ನ ಮದುವೆಯನ್ನು ಆರು ತಿಂಗಳು ಮುಂದೆ ಹಾಕಿದೆ. ನನಗೆ ಮದನಪಲ್ಲಿಗೆ ವರ್ಗವಾಗಿದೆ. ರಿಜಿಸ್ಟರ್ ಮಾಡಿಕೊಂಡು ಅಲ್ಲಿಗೆ ಹೋಗೋಣ."

ಮೋಹಿನಿ ದೀರ್ಘವಾಗಿ ಆಲೋಚಿಸಿದಳು. ಹೆಚ್ಚಿಗೆ ಯೋಚಿಸುವುದಕ್ಕೆ ಆಗ ಸಮಯವಿರಲಿಲ್ಲ. " ಸರಿ, ಹಾಗಾದರೆ ಹಾಗೆ, ಮುಂದಿನದ್ದು ಮುಂದೆ ನೋಡಿಕೊಳ್ಳೋಣ " ಎಂದು ಸಿಂಗರಿಸಿಕೊಂಡು ಆತನೊಡನೆ ಹೊರಡಲನು ವಾದಳು. ಸಂತೋಷದ ಚಿಹ್ನೆ ಇಬ್ಬರ ಮುಖದಲ್ಲೂ ಮೂಡಿದೆ. ಆದರೆ ಕಳಂಕರಹಿತವಾಗಿರಲಿಲ್ಲ !

ಅಂದು ವೃಂದಾವನದಲ್ಲಿ ಅನಂತ-ವಿಜಯರು ಕೂಡಿದ್ದಾರೆ. ಕ್ಲೇಶಮಯ ಮುಖಗಳಲ್ಲಿ ಕಿಂಚಿತ್ ಆನಂದವು ಮೂಡಿತ್ತು. ನಿರಾಶೆಯ ಹೃದಯದಲ್ಲಿ ಒಂದಿಷ್ಟು ಆಸೆ ಉದ್ಭವಿಸಿದಂತಿತ್ತು. ಇಬ್ಬರೂ ಮೈ ಹಚ್ಚಿ ಕುಳಿತಿದ್ದರು. ಕಣ್ಣುಗಳಲ್ಲಿ ನೀರ ಹನಿ—ದುಃಖಾಶ್ರುವಲ್ಲ; ಆನಂದಾಶ್ರು!

" ವಿಜಯಾ, ಅಳುವೆಯೇಕೆ ? "

" ಇಲ್ಲ. ಅದು ಸಂತೋಷದ ಕಣ್ಣೀರು ! "

" ಏಕೆ ? "

" ನಿಮ್ಮನ್ನು ಪಡೆಯುವ ಭಾಗ್ಯ ದೂರ ಸರಿಯುತ್ತಾ ಇದೆ ನನ್ನಿಂದ, ಆದ್ದರಿಂದ. ಪ್ರಪಂಚ ತ್ಯಾಗಮಾಡಲು ಸಿದ್ಧಳಾಗಿರುವೆನು. ಅದರ ಮೊದಲು ಸಂದರ್ಶನ ದೊರಕುವುದೊ ಇಲ್ಲವೊ ಎಂಬ ಅಪನಂಬಿಕೆಯಲ್ಲಿದ್ದೆ. ಆದರೆ ಹಾಗಾಗದೆ ನಿಮ್ಮ ಸಮ್ಮುಖ ದರ್ಶನ ದೈವಾನುಗ್ರಹದಿಂದ ಸಿಕ್ಕಿತು. ಇದೇ ಕಾರಣ."

" ವಿಜಯಾ, ನೀನು ನಿರಾಶಳಾಗೋದು ಅನಗತ್ಯ. ನಿನಗೊಂದು ಒಳ್ಳೇ ಸುದ್ದಿಯನ್ನು ತಂದಿದ್ದೇನೆ. ನೀನು ಬಲ್ಲೆಯಾ ? "

" ಹೇಗೆ ಸಾಧ್ಯ ? "

" ಮದುಮಗನಿಗೆ ಮದನಪಲ್ಲಿಗೆ ವರ್ಗವಾಗಿದೆ. ಮದುವೆಯನ್ನು ಆರು ತಿಂಗಳು ಮುಂದೂಡಿದೆ."

" ನಿಜವೆ ?........"

" ಹೂಂ ! ನಾನೆಂದಾದ್ರೂ ಸುಳ್ಳಾಡಿದ್ದೇನೇನು ನಿನ್ನೊಂದಿಗೆ ? "

ವಿಜಯಳ ವಿಶಾಲಾಕ್ಷಿಗಳಲ್ಲಿ ಆನಂದಜ್ಯೋತಿ ಮಿನುಗಲಾರಂಭಿಸಿತು. ಆ ವೃಂದಾವನದಲ್ಲಿ ನಿಂತಿದ್ದ ವಿಜಯಕುಮಾರಿ ವನದೇವತೆಯೊ ಎಂಬಂತೆ ತೋರುತ್ತಿದ್ದಳು, ಅನಂತನಿಗೆ. ದೇಹವೆಂಬ ತಂಬೂರಿಯ ಹೃದಯದೊಳಗಿನ ಮಿಡಿತಧ್ವನಿಯು, ಅನಂತನ ಎದೆಯ ಮೇಲೆ ಶಿರವನ್ನಿಟ್ಟಿದ್ದ ವಿಜಯಳಿಗೆ ಕೇಳಿಬರುತ್ತಿತ್ತು.

" ವಿಜಯಾ, ಏಳು. ದೈವೇಚ್ಛೆ ಹೇಗಿದೆಯೊ ಯಾರು ಬಲ್ಲರು ! ಆತನು ನಮ್ಮಿಬ್ಬರನ್ನೇ ಒಟ್ಟುಗೂಡಿಸಲು ಕಾಯುತ್ತಿರುವನೊ ಏನೊ ! ಇಲ್ಲವಾದರೆ ನಮ್ಮ ಕೊರಳಿಗೆ ಬಂದ ಬಾಳು ದೂರ ಸರಿಯಲು ಕಾರಣವೇನು ? "

" ನಿಮ್ಮ ಊಟವಾಯಿತೆ ? "

" ಇಲ್ಲ, ವಿಜಯಾ. ನಿನಗೆ ಹಸಿವಾಗುವುದೆ ? "

" ಒಳ್ಳೇ ಸುದ್ದಿಯನ್ನು ಕೇಳಿದಾಗ ಉಂಡುದೆಲ್ಲಾ ಹಾರಿಹೋಯಿತು."

" ಸರಿ. ಹೋಗೋಣವೆ ? ವಿಚಿತ್ರ ! "

" ಹೂಂ ! ಯಾವದು ವಿಚಿತ್ರ ? "

" ಅಲ್ಲಾ, ಸಾಧಾರಣವಾಗಿ ಸಂತೋಷವಾದಾಗ ಹೊಟ್ಟೆ ತುಂಬಿದಂತೆ ಆಗುವುದು...."

ಇತ್ತೀಚೆಗೆ ಹಸಿವೆಂದರೇನೆಂದರಿಯದ ವಿಜಯಳಿಗೆ ಇಂದು ಹಸಿವು ಬಾಧಿಸಿತು. ಪ್ರಪಂಚದಲ್ಲಿ ಮಾನವನಿಗೆ ಅತ್ಯಧಿಕ ದುಃಖ ಸಂಭವಿಸಿದಾಗ ಊಟವೆ ಬೇಡವೆನಿಸುವುದು; ಅಂತೆಯೆ, ಹೆಚ್ಚಾದ ಆನಂದವಾದಾಗಲೂ. ಆದರೆ ಇವೆರಡಕ್ಕೂ ಅಂತರವಿದೆ. ದುಃಖವಾದಾಗ ಹಸಿವಿದ್ದರೂ ಉಣ್ಣಲು ಇಚ್ಛೆಯಿರದು. ಸಂತೋಷವಾದಾಗ, ಆ ಹೊತ್ತು ಬಂದಾಗ ಊಟದ ನೆನಪಾದರೂ—ಒಮ್ಮೊಮ್ಮೆ ನೆನಪೇ ಆಗದು—ಆನಂದವೆ ಅನ್ನವಾಗಿ ಪರಿಣಮಿಸಿ, ಹೊಟ್ಟೆ ತುಂಬಿದಂತಾಗಿ, ಹಸಿವೆಂದರೇನೆಂದು ಅರಿಯದವನಾಗುವನು. ಸಮದುಃಖಸಂತೋಷಗಳು ಒಟ್ಟುಗೂಡಿದಾಗ ಆಗುವುದೇ ಬೇರೆ. ಅತ್ಯಂತ ದುಃಖ ಸಂಭವಿಸಿ, ಅದು ಬೇಗನೆ ನಿವಾರಣೆಯಾಗದಿದ್ದು, ಶೋಕಿಸುತ್ತಿರುವವನಿಗೆ, ಆ ಕಷ್ಟ ಕ್ರಮೇಣ ಸಾವಧಾನವಾಗಿ ನಿವಾರಣೆಯಾಗುವುದೆಂದಾಗ ಅಥವಾ ತನ್ನ ಕಷ್ಟವು ಕ್ರಮೇಣ ದೂರ ಸರಿಯುವುದೆಂದಾಗ ಅವನ ಮನಸ್ಸಿಗೆ ಸ್ವಲ್ಪ ಶಾಂತಿ ದೊರಕುವುದು. ಆಗ ಅವನಿಗೆ ಹಸಿವಿನ ಅರಿವು ಉಂಟಾಗುವುದು. ಆದರೆ ಅವನ ಗಮನವೆಲ್ಲವೂ ಮುಂದಿನ ಅಂದರೆ ಭವಿಷ್ಯತ್ತಿನ ಮೇಲೆ ಇರುತ್ತದೆ. ಅಂತೆಯೆ, ಈಗ ವಿಜಯಳ ಸ್ಥಿತಿಯಾಯಿತು. ತನ್ನ ಕಂಟಕ ತುಸು ದೂರ ಸರಿಯಿತೆಂದಾಗ ಒಂದಿಷ್ಟು ಶಾಂತಿ ದೊರೆಯಿತು, ಅವಳ ಚಿತ್ತಕ್ಕೆ. ಆಗಲೆ ಹಸಿವಿನ ಜ್ಞಾಪಕವಾಯಿತು.

ಮಸಣಕ್ಕೆ ಸಿದ್ಧಳಾಗಿದ್ದ ವಿಜಯಳ ನಿರ್ಣಯವೇನಾಯಿತು ? ಅವಳ ಹೃದಯದಿಂದ ಸದ್ಯಕ್ಕದು ಮಾಯವಾಯಿತು. ತಾನು ಜೀವಿಸಬೇಕೆನಿಸಿತು. ಮನುಷ್ಯನು ತನ್ನೊಂದಂಗದಲ್ಲಿ ಒಂದು ಗಾಯವಾದರೆ ಅದು ವಾಸಿಯಾಗುವ ತನಕ ಆ ಕಡೆ ಹೆಚ್ಚಾಗಿ ನೋಡುವುದಕ್ಕೂ ಅಸಹ್ಯಪಡುತ್ತಾನೆ. ಆದರೆ ಅದು

ವಾಸಿಯಾದ ತರುವಾಯ ಆ ಕಡೆಯೆ ಹೆಚ್ಚಾಗಿ ಮುಟ್ಟಿ ನೋಡುತ್ತಿರುತ್ತಾನೆ. ವಿಜಯಳ ಮನೋಗಾಯ ಸಂಪೂರ್ಣವಾಗಿ ವಾಸಿಯಾಗದಿದ್ದರೂ ಆದೀತು ಎಂಬ ಭಾವನೆಯಿಂದ ಹಿಂದಿನ ಕ್ಲೇಶಗಳನ್ನೆಲ್ಲ ಮರೆತುಬಿಟ್ಟಳು. ಮುಂದೆ ಬರುವ ಕಷ್ಟ ಸುಖದ ನಿರೀಕ್ಷಣೆ ಮಾಡಲಾರಂಭಿಸಿದಳು.

೧೯

ಮೋಹಿನಿ ರಿಜಿಸ್ಟರ್ ಮದುವೆಯಾಗಿ ಗಂಡನೊಂದಿಗೆ ಮದನಪಲ್ಲಿಗೆ ತೆರಳಿದಳು.

ಮೋಹಿನಿಯದೊಂದು ಚಿಕ್ಕ ಕಥೆ! ರತ್ನ—ಅವಳ ತಾಯಿ. ರತ್ನಳ ತಂದೆತಾಯಿಗಳು ಬಹಳ ಬಡ ಸ್ಥಿತಿಯಲ್ಲಿದ್ದರು. ಮಗಳನ್ನು ಇದ್ದೆರಡು ಕಾಸನ್ನು ವೆಚ್ಚಮಾಡಿ, ಅವಳಿಗೆ ತಕ್ಕ ಯುವಕನಿಗೆ ಲಗ್ನಮಾಡಿಕೊಟ್ಟರು. ತಂದೆತಾಯಿಗಳು ಒಂದೆರಡು ವರ್ಷಗಳೊಳಗೆ ನಿಧನರಾದರು. ಪ್ರೇಮಪುತ್ಥಳಿಯಂತೆ ಮಗುವೊಂದು ಜನಿಸಿತವಳಿಗೆ. ಅದೇ ಮೋಹಿನಿ! ಮೋಹಿನಿಗೆ ಹರಯ ಮೂರು ತುಂಬಬೇಕಾದರೆ ರತ್ನ ತನ್ನ ಗಂಡನನ್ನು ಕಳೆದುಕೊಂಡಳು.

ರತ್ನಳ ತಂದೆತಾಯಿಗಳು ಅವಳಿಗೆ ತಕ್ಕ ಪ್ರಾಯದ ಗಂಡನನ್ನೇನೊ ಆರಿಸಿ ಮದುವೆ ಮಾಡಿಸಿದ್ದರು. ಆದರೆ ಅವನೂ ಬಡವ, ಅಲ್ಲದೆ ಬಂಧುಗಳಿಂದ ನಿರ್ಗತಿಕ ತರುಣನಾಗಿದ್ದನು. ದುಡಿದರೆ ದುಡ್ಡಿದೆ, ಅದಿದ್ದರೆ ಹೊಟ್ಟೆಗೆ ಅನ್ನವಿದೆ, ಇಲ್ಲವಾದರೆ....ಎಂಬಂತಿದ್ದವನು.

* * * *

ಮಗು ಚೀರಿದ್ದನ್ನು ಕೇಳಿ, ಅರ್ಧನಿದ್ದೆಯಲ್ಲಿ ಬಿದ್ದುಕೊಂಡಿದ್ದ ರತ್ನ ಎಚ್ಚರಾದಳು. ತೊಟ್ಟಿಲಲ್ಲಿ ಮಲಗಿದ್ದ ಮಗುವನ್ನು ಕೈಯಲ್ಲಿ ತೆಗೆದುಕೊಂಡು ಮಡಿಲಲ್ಲಿರಿಸಿ, ಅಳುವನ್ನು ನಿಲ್ಲಿಸಲು ಪ್ರಯತ್ನಿಸಿದಳು. ಹಸಿವು ತಡೆಯಲಾರದೆ ಮಗು ಪುನಃ ಚೀರಿಟ್ಟು ಅತ್ತಿತು. ಮನೆಯ ಹೊರಗೆ—ಶ್ಮಶಾನ ಶಾಂತಿ! ಆಕಾಶವನ್ನು ಕಾರ್ಮೋಡ ಕವಿದಿತ್ತು. ಮಗುವಿನ ಅಳು ಸುತ್ತಮುತ್ತಲಿನ ಹತ್ತು ಮನೆಗಳಿಗೆ ಎಟಕಿರಬೇಕು. ತಾಯಿಯ ಹೃದಯ ನೊಂದಿತು. ತನ್ನಿಂದಾದಷ್ಟು ಪ್ರಯತ್ನಪಟ್ಟಳು, ಮಗು ತನ್ನ ಅಳುವನ್ನು ನಿಲ್ಲಿಸಲೊಲ್ಲದು. ಆ ಹೊತ್ತಿನಲ್ಲಿ, ಮಗುವಿಗೆ ಕೊಡಲು ಹಾಲು ಇಲ್ಲ,

ಕೈಯಲ್ಲಿ ಕಾಸೂ ಇಲ್ಲ. ರತ್ನಳಿಗೆ ತನ್ನ ಚುಕ್ಕಾಣಿಯಿಲ್ಲದ ದೋಣಿಯಂತೆ ಸಾಗುತ್ತಿದ್ದ ಬಾಳುವೆಯು ನೆನಪಾಯಿತು. ಹಳೆಯ ನೆನಹುಗಳು ಕಡಲ ತೆರೆಗಳಂತೆ ಒಂದರ ಹಿಂದೊಂದಾಗಿ ಬಂದು ಅಪ್ಪಳಿಸುತ್ತಿದ್ದವು.

ರತ್ನ ಹುಟ್ಟಿದ ಊರು ಹಳ್ಳಿ. ನಗರದ ನಾಗರಿಕತೆಯೂ ಎಟಕಲಾರದ ಬರಿಗಾಡು ಆ ಗ್ರಾಮ. ಅವಳ ತಾಯಿತಂದೆಗಳಿಗೆ ಅವಳೊಬ್ಬಳೇ ಮಗಳು. ತಂದೆಯೇನೋ ಒಂದಷ್ಟು ಜಾಗವನ್ನು ಗುತ್ತಿಗೆ ನೋಡಿಕೊಂಡು ಬರುತ್ತಿದ್ದ. ಅದರಲ್ಲಿ ಬಂದ ವರಮಾನದಿಂದ ಹೇಗೆ ಹೇಗೋ ಸಾಕು ಬೇಕಾಗಿ, ಸಂಸಾರದ ನೆಲೆದಪ್ಪಿದರೂ ತಪ್ಪದ ಹಾಗೆ ಸುಧಾರಿಸಿಕೊಂಡು ಬರುತ್ತಿದ್ದನಾತ—ಅವಳ ತಂದೆ, ನಾಣಪ್ಪಯ್ಯ. ಆತನಿಗೆ ಮಗಳೆಂದರೆ ಜೀವ.

ರತ್ನ ಸದಾ ಬಯಲುಗದ್ದೆಗಳಲ್ಲಿ ಆಡುತ್ತಲೂ ಹಾಡುತ್ತಲೂ ಹೊತ್ತು ಕಳೆಯುವಳು. ಏನಾದರೂ ಕಾಯಿಪಲ್ಯಗಳನ್ನು ಕೊಟ್ಟಲ್ಲಿ ಅದನ್ನು ತೆಗೆದುಕೊಂಡು ಪಕ್ಕದೂರಿನ ಸಂತೆಗೆ ಹೋಗಿ ಮಾರಿಬಿಟ್ಟು ಬರುವಳು. ಮನೆಯಲ್ಲಿ ಅರೆಕ್ಷಣ ನಿಲ್ಲಳು. ಅಪ್ಪನಿಗೆ ತಾಯಿ ಕಟ್ಟಿಕೊಟ್ಟ ಬುತ್ತಿಯನ್ನವನ್ನು ಎತ್ತಿ ಒಯ್ದರೆ, ಸಂಜೆ ಕಳೆದು ಇರುಳು ಕವಿಯುವ ತನಕ ಅಪ್ಪನೊಂದಿಗೇ ಇದ್ದು ಬಿಡುವಳು. ಕಟ್ಟು ಬಿಚ್ಚಿ ಬಿಟ್ಟ ಕರುವಿನಂತೆ, ಓಡಾಡಿ ತಿರುಗುವುದರಲ್ಲೆ ಅವಳು ಸದಾ ಇರುತ್ತಿದ್ದಳು. ಬಾಹ್ಯಪ್ರಪಂಚದ ಪರಿಜ್ಞಾನವಿಲ್ಲದೆ, ನಿಸರ್ಗದ ಮಡಿಲಲ್ಲಿ ಬೆಳೆದು, ತರುಣ ಪ್ರಾಯವನ್ನು ತಲಪಿದಳು. ಅವಳ ಅಪ್ಪ ಅವಳನ್ನು ಯಾವ ತರದ ಬಂಧನಿಬಂಧನೆಗಳನ್ನೂ ಹಾಕಿ ಯಾವ ಕಟ್ಟುಪಾಡುಗಳಿಗೂ ಒಳಗಾಗಿಸಲಿಲ್ಲ. ಕಾಲಕ್ರಮೇಣದಲ್ಲಿ ಅವಳ ಬುದ್ಧಿಚಾತುರ್ಯಗಳು ಪರಿಪಕ್ವವಾಗುತ್ತ ಬಂದವು. ತನ್ನ ಆಟಪಾಟಗಳಿಗೆ ತಾನೇ ಬೇಲಿ ಕಟ್ಟಿದಳು. ತನಗಾಗಿ ತನ್ನ ತಾಯಿತಂದೆಗಳು ಬಡುವ ಕಷ್ಟಗಳನ್ನು ನೆನೆದು ನೋಡಿದಳು. ಅವಳು ಗಾಳಿಗೋಪುರಗಳನ್ನು ಕಟ್ಟಲಿಲ್ಲ; ತನಗೆಟಕದ ಕೋಟೆಗಳನ್ನು ಕಟ್ಟಲಿಲ್ಲ!

ತಾನು ಯಾವಾಗಲೂ ಸೊಗದಿನಿದು ಗಾನ ಸುರಿವ ಗಂಧರ್ವಲೋಕದಲ್ಲಿ ಬಾಳಬೇಕು ಎಂದೇನೂ ಅವಳು ಕನಸು ಕಂಡುದಿಲ್ಲ. ಹೇಗಾದರೂ ತನ್ನನ್ನು ಯಾರಿಗಾದರೂ ಒಂದು ಬಾರಿ ಕಟ್ಟಿಕೊಟ್ಟುಬಿಟ್ಟರೆ ಸಾಕು, ತನ್ನ ತಂದೆ ಬಡುತ್ತಿರುವ ಕಷ್ಟಗಳಿಂದ ಮುಕ್ತಿಪಡೆದಾನು, ಬಿಡುಗಡೆಯಾದಾನು ಎಂದೆಣಿಸಿ

ಕೊರಗುತ್ತಿದ್ದಳು. ತಾನು ಹೀಗಿರಬೇಕು, ಹಾಗಿರಬೇಕು ಎಂಬ ರೀತಿಯಲ್ಲಿ ಆಕೆ ಎಂದೂ ಚಿಂತಿಸಿದ್ದಿಲ್ಲ. ತಾನೊಂದು ಒಳ್ಳೆಯ ಮನೆಯನ್ನು ಹೊಕ್ಕು ನಾಲ್ಕು ಮಕ್ಕಳನ್ನು ಹೆತ್ತು ಸುಖಪಡಬೇಕು ಎಂಬ ಮಟ್ಟದಲ್ಲಿ ಅವಳ ಬಾಳಿನ ಸಮಸ್ಯೆ ಅಡಗಿತ್ತು. ಹಣವಿಲ್ಲದ ತಂದೆಯ ಹೆಣ್ಣುಮಗಳನ್ನು ಹುಡುಕಿಕೊಂಡು ಬರುವ ವರಮಹಾಶಯರುಗಳು ಈ ಲೋಕದಲ್ಲಿ ಬಹಳ ಕಡಿಮೆ ಎಂಬುದನ್ನು ಅವಳು ಮನವಾರೆ ತಿಳಿದುಕೊಂಡಿದ್ದಿರಬೇಕು!

ರತ್ನಳಿಗೆ ಮದುವೆಯೂ ಮಂಗಳಕರವಾಗಿ ನೆರವೇರಿತು. ಅವಳ ಗಂಡ ಅದೇ ಪಕ್ಕದ ಪಟ್ಟಣದಲ್ಲಿ ಕಾರ್ಖಾನೆಯೊಂದರಲ್ಲಿ ದುಡಿದು ಕೆಲಸ ಮಾಡಿ ಜೀವನ ಸಾಗಿಸುವ ಒಬ್ಬ ನೌಕರ. ಆತನಿಗೆ ತಾಯಿಯಿಲ್ಲ, ತಂದೆಯಿಲ್ಲ. ಇಷ್ಟಬಂಧುಮಿತ್ರರುಗಳು ಮೊದಲೇ ಇಲ್ಲ. ಅವನನ್ನು ಬಿಟ್ಟರೆ ಈ ಲೋಕದಲ್ಲಿ ಈ ಜನ್ಮದಲ್ಲಿ ಬೇರೆ ಗಂಡು ಸಿಗುವಂತಿರಲಿಲ್ಲ ಅವಳಿಗೆ! ರತ್ನಳಿಗೆ ತಂದೆತಾಯಿಗಳನ್ನು ಬಿಟ್ಟಗಲಲು ಮನಸ್ಸೇ ಇಲ್ಲ. ಧಾರೆಧಾರೆಯಾಗಿ ಕಣ್ಣೀರು ಸುರಿಸಿ ಅತ್ತೂ ಬಿಟ್ಟಳು.

ಶಕುಂತಳೆ, ತನ್ನನ್ನು ಪ್ರೀತಿಯಿಂದ ಸಾಕಿದ ವನವನ್ನು ಬಿಟ್ಟು ಅಗಲುವ ಮನವಿಲ್ಲದೆ ಬಿಟ್ಟಗಲಿದಂತೆ, ರತ್ನಳೂ ತನ್ನ ನಲ್ಮೆಯ ತೋಟವನ್ನು, ಬಯಲುಗದ್ದೆಗಳನ್ನು ಮನವಿಲ್ಲದೆ ಬಿಟ್ಟು ತೆರಳಿದಳು. ಅವಳು ಗ್ರಾಮದಲ್ಲಿ ಕಳೆದ ಪ್ರಶಾಂತ ಜೀವನವನ್ನು ನೆನೆದು, ಚಿಂತಿಸುತ್ತ ಹೋದಳು. ಹೇಗಾದರೂ ತಂದೆ ತನಗಾಗಿ ಬಡುತ್ತಿದ್ದ ಬನ್ನ, ಪಡುತ್ತಿದ್ದ ಪಾಡು ಬಗೆಹರಿಯಿತು, ಅವರ ಚಿಂತೆ ಪರಿಹಾರವಾಯಿತು—ಅದೇ ಸಾಕು ಎಂದು ಅವಳ ಮನಸ್ಸು ಸಮಾಧಾನ ಹೊಂದಿತು. ಪಟ್ಟಣವಾಸ ಅವಳಿಗಷ್ಟೊಂದು ಹಿಡಿಯಲಿಲ್ಲ. ಗಂಡನು ಅದೆಷ್ಟೋ ಪ್ರಿಯವಾಗಿಯೆ ಇದ್ದ. ಜೀವನವೆಂಬುದು ಕಬ್ಬಿನಷ್ಟು ಇನಿದಾಗಿಯೆ ಇತ್ತಾದರೂ, ಯಾವುದೊ ಏನೊ ಒಂದಿಲ್ಲದ ಹಾಗಿತ್ತು. ಎಲ್ಲರೂ ಹೋಗುವುದೂ ಬರುವುದೂ—ಅರ್ಥರಹಿತವಾಗಿ ತೋರಿತವಳಿಗೆ. ಏನೊ ಎಲ್ಲರೂ ಯಂತ್ರದಂತೆ ನಿಟ್ಟುಸಿರು ಬಿಡುವಂತೆ ಅವಳಿಗೆ ಭಾಸವಾಯಿತು. 'ಯಾತಕ್ಕಾಗಿ ಈ ತರದ ಅರ್ಥರಹಿತ, ಹುರುಪಿಲ್ಲದ ಬಾಳುವೆ ಸಾಗಿಸುತ್ತಾರೆ?' ಎಂಬುದು ಅವಳಿಗೆ ಬಗೆಹರಿಯಲಿಲ್ಲ. 'ಕೊಡೋಣ–ಕೊಳ್ಳೋಣ' ವ್ಯಾಪಾರದಂತೆ ಜೀವನವನ್ನು ನಡೆಸುತ್ತಿರುವಂತೆ ಭಾಸವಾಯಿತವಳಿಗೆ. ಅವಳಿಗೆ ಅರ್ಥವಾಗದ ವಿಷಯಗಳು ತುಂಬಾ ಇದ್ದವು.

ಪಟ್ಟಣದಲ್ಲಿನ ಜನರು ತಾವಾಯಿತು, ತಮ್ಮ ಕೆಲಸವಾಯಿತು ಎಂಬ ರೀತಿಯಲ್ಲಿ ಪಳಗಿದವರು. ಪ್ರೀತಿ ಆದರಗಳಿಂದ ಮಾತನಾಡಲು ಯಾರೂ ಮುಂಬರಲಿಲ್ಲ. ಯಾವುದನ್ನು ತೆಗೆದರೂ— ಹಣ ಹಣ ಎಂದು ಕೈಯಲ್ಲಿ ಕಾಸೇ ತಂಗುವುದಿಲ್ಲ. ರತ್ನ ಗರ್ಭ ಧರಿಸಿದಳು. ಮನಸ್ಸಿನಲ್ಲಿ ಆನಂದ ಎದ್ದೆದ್ದು ಬಡಿಯಿತು!

ಕಾಲಕ್ರಮೇಣ ರತ್ನ ಕನಸಿನಲ್ಲೂ ಎಣಿಸಿ ನೋಡದ ನವೀನ ಸಂಕಷ್ಟ ಗಳು ತಲೆಯೆತ್ತಿದವು. ಅವಳಿಗೆ ಬಗೆಹರಿಯದ ಸಮಸ್ಯೆಗಳು ಅವಳ ಜೀವನ ವನ್ನು ಬಾಧಿಸಿದವು. 'ಹೀಗೆಲ್ಲಾ ಯಾಕೆ ಮಾಡುತ್ತಾರೆ?' ಎಂದೆನಿಸಿ ಬಾರಿ ಬಾರಿಗೂ ಕೊರಗುವಳು. ಆಗಾಗ ಅವಳ ಗಂಡ ಮಿಲ್ಲಿಗೆ ಕೆಲಸಕ್ಕೆ ಹೋಗದೆ ಮನೆಯಲ್ಲೆ ಕುಳಿತು ಬಿಡುವ. ಯಾರೊ ಹಲವರು ಬಂದು ಅವನೊಡನೆ ಮಾತಾಡಿ ಹೋಗುವರು. ಒಮ್ಮೆ, "ನಿನ್ನಪ್ಪನ ಹತ್ತಿರ ಹೋಗಿ ಸ್ವಲ್ಪ ಹಣ ಇದ್ದರೆ ತೊಗೊಂಡ್ಬಾ" ಎಂದು ಅವಳನ್ನು ತವರುಮನೆಗೆ ಕಳಿಸಿದ. ಮನಸ್ಸು ವೇದನೆಯಿಂದ ಮಿಡಿಯುತ್ತಿರಲು, ತಂದೆಯಿಂದ ಏನಾದರೂ ತೆಗೆದುಕೊಂಡು ಮತ್ತೆ ಹಿಂತಿರುಗುವಳು. ತಾಯಿಯಂತೂ ಅವಳನ್ನು ಮದುವೆ ಮಾಡಿ ಕೊಟ್ಟದ್ದೇ ಈ ಸಂಸಾರ ಸಾಕೆಂದು ಕೈಲಾಸ ಸೇರಿದಳು. ಇನ್ನು ಉಳಿದಿರುವು ದೆಂದರೆ ಆ ಒಂದು ಜೀವ—ತಂದೆ! ತನ್ನಿಂದ ಅವರಿಗೆ ಇನ್ನೂ ಕಷ್ಟಗಳೆ, ತೊಂದರೆಯೆ!—ಎಂದೆಣಿಸಿದ್ದೆ ಕಂಗಳಲ್ಲಿ ನೀರು ಉಕ್ಕಿ ಬಂದುಬಿಡುವುದು. ಅದೊಂದು ಬಾರಿ ಅವಳ ಗಂಡ ವಾರಗಟ್ಟಲೆ ಮನೆಯಲ್ಲೆ ಕುಳಿತುಕೊಂಡು ಬಿಟ್ಟ. ಸಹಿಸಲಿಕ್ಕಾಗದೆ, "ನೀವೇಕೆ ಮಿಲ್ಲಿಗೆ ಹೋಗೋದಿಲ್ಲ, ಕೆಲಸಕ್ಕೆ?" ಎಂದು ಕೇಳಿದಳು. "ನಿನಗೆ ಅದನ್ನೆಲ್ಲಾ ಹೇಳಿದರೆ ಏನೂ ತಿಳಿಯದು. ನಾವು 'ಸ್ಟ್ರೈಕ್' ಅಂದರೆ ಮುಷ್ಕರ ಹೂಡಿದ್ದೇವೆ. ಲಕ್ಷಗಟ್ಲೆ ಲಾಭ ಹೊಡೆಯು ತ್ತಿರೋ ಅವರ ಕೈಯಲ್ಲಿ ನಮ್ಗೂ ಅದರಲ್ಲಿ ಭಾಗ ಕೊಡಿ ಅಂತ ಕೇಳಿದ್ದೀವಿ" ಎಂದು ಆತನಿಂದ ಉತ್ತರ ಬಂದಿತು.

ಅವಳು, "ಭಾಗಾಲ್ಲ!....ಮಾಡೋ ಕೆಲಸಾನ ಸರಿಯಾಗಿ ಮಾಡಿದ್ರೆ ತಕ್ಕ ಕೂಲೀನ ಕೊಟ್ಟುಕೊಂಡು ಹೋಗ್ತಾರೆ, ಅವರು........" ಎಂದು ಹೇಳಿದಳು.

ಅವನಿಗೆ ಕೋಪವೆಂಬುದು ನಾಸಿಕಾಗ್ರವನ್ನು ತಲಪಿತು.

" ನೀನು ಸುಮ್ಮನೆ ಬಿದ್ದಿರೆ, ಅಲ್ಲಿ! ನಿನಗೆ ಇದೇನು ಕರೀದೊ ಬಿಳೀದೊ ಅಂತ ಕೂಡಾ ತಿಳೀದು."

" ಅದು ನಿಜ. ಅವರು ತಮ್ಮ ಕಾರ್ಖಾನೇನ್ನ ಮುಚ್ಚಿಕೊಂಡುಬಿಟ್ರಲ್ಲ, ಈಗ ಗಂಜಿಗೆ ಏನು ಮಾಡೋದೂಂತ ?"

" ಮಾಡೋದೇನು ? ಉಪವಾಸವೆ! ಏನೇ ಇದ್ದರೂ ದುಡಿಯುವ ನೌಕರರನ್ನು ಕಂಡರೆ ಅವರುಗಳಿಗೆ ಏನು ತಮಾಷೆ, ಅವಹೇಳನೆ! ದೇಹವನ್ನು ದಂಡಿಸಿ ಕಷ್ಟಪಡುವುದು ನಾವು, ತಿಂದು ಕೊಬ್ಬುವುದು ಅವರು!"

" ನಿಮಗ್ಯಾಕೆ ಈ ಎಲ್ಲಾ ಸುದ್ದಿ ? ನಮ್ಮ ಕೆಲಸ ನಾವು ಮಾಡಿದ್ರೆ, ಕೂಲಿ ಕೊಡ್ತಾನೆ. ಮಗುವಿಗೆ ಹಾಲು ಕೊಳ್ಳೋಕೆ ಕೂಡ ಕೈಯಲ್ಲಿ ಕಾಸಿಲ್ಲ, ಮಗುವಿನ ಮುಖ ನೋಡಿಯಾದರೂ...." ಎಂದು ಹೇಳಿ ಕಣ್ಣು ಜ್ಜಿಕೊಂಡಳು.

ಅವಳು ಏನೇನು ಹೇಳಿದರೂ ಅದರಿಂದ ಯಾವ ಪ್ರಯೋಜನವೂ ಆಗಲಿಲ್ಲ. ವಾರಗಟ್ಟಲೆ ಉಪವಾಸ ಬಿದ್ದರು. ತನ್ನನ್ನು ಎಲ್ಲಾದರೂ ಒಂದು ಹಳ್ಳಿಯಲ್ಲೆ ಮದುವೆ ಮಾಡಿ ಕೊಟ್ಟಿರಬಾರದೆ ?........ಎಂದು ಆಗಾಗ ನೆನೆದು ಚಿಂತಿಸುವಳು. ಎಲ್ಲಾದರೂ, ಕೊಡೋ ಮಹಾರಾಜನೊಂದಿಗೆ ವಿರೋಧ ಕಟ್ಟಿಕೊಂಡರೆ, ಕುಟುಂಬ ಬದುಕೀತೆ ?

ಅಂದು ಅಪರೂಪವಾಗಿ ಅವಳ ಗಂಡ ಮಿಲ್ಲಿಗೆ ಹೊರಟ—ಸೂರ್ಯಾಸ್ತ ಸಮಯದಲ್ಲಿ—ರಾತ್ರಿ ಕೆಲಸಕ್ಕೆ! 'ಸರಿ. ಗಂಜಿಗೆ ಕಷ್ಟವಿಲ್ಲ' ಎಂದೆಣಿಸಿ ಸಂತೋಷಗೊಂಡಳು. 'ಇಷ್ಟು ದಿನಾ ಏಕೆ ಇವರಿಗೆ ಬುದ್ಧಿ ಬರ್ಲಿಲ್ಲ ?' ಎಂದು ತನ್ನನ್ನೇ ಕೇಳಿಕೊಳ್ಳುವಳು. ಅಂತರ್ಯದಲ್ಲಿ ಅದೇಕೋ ಎದೆ 'ಡವಡವ' ಬಡಿದುಕೊಂಡಿತು. ಅದ್ಯಾವುದೋ ಒಂದು ತರಹದ ಭಯ ಅವಳ ಎದೆಯಲ್ಲಿ ಆವರಿಸಿ ಅಡ್ಡಗಟ್ಟಿದಂತಿತ್ತು. ಏನೋ ಕೂತರೊಂದು ವಿಚಾರ, ನಿಂತರೊಂದು ವಿಚಾರ! ಯಾವುದಕ್ಕೂ ಮನಸ್ಸು ಮುನ್ನಡೆಯದಾಯಿತು. 'ಬೆಳಗಾಗೋದರೊಳಗೆ ಏನು ನಡೆಯುತ್ತೋ' ಎಂದು ಹೃದಯ ಹೆದರಿಕೆ ತೋರಿತು. ಏನೇನೊ ಯೋಚನೆಗಳ ತಾಕಲಾಟದಲ್ಲಿ ಮಗುವಿನ ಸನಿಯದಲ್ಲಿ ಮಲಗಿದಾಕೆ ಕಣ್ಣು ಮುಚ್ಚಿದಳು.

ಮಗು ಚೀರಿಟ್ಟು ಅತ್ತದ್ದರಿಂದ ಎಚ್ಚೆತ್ತಳು. ಬೆಳಗ್ಗೆ ಬೆಂದೊಡಲ ಬೇಗೆ ಮಿಡಿದು, ಬೆಳಕು ಕಂಡೀತೆಂದು ತೋರಿತು. ಮಗು ಅತ್ತು ದಣಿವಿನಿಂದ ಪುನಃ

ನಿದ್ರಾವಶವಾಯಿತು. ಬೆಳಗಾಗುವ ತನಕ ರತ್ನಳಿಗೆ ನಿದ್ದೆಯಿಲ್ಲ. ಬೆಳಕು ಹರಿಯುವುದಕ್ಕೆ ಮೊದಲೆ ಬಾಗಿಲನ್ನು ಯಾರೋ ಬಡಬಡನೆ ಬಡಿದರು! ಎದೆಯೂ ಹಾಗೆ ಬಡಿದುಕೊಳ್ಳುತ್ತಿರಲು ರತ್ನ ಬಾಗಿಲು ತೆರೆದಳು. ಅವಳ ಗಂಡನ ಸ್ನೇಹಿತ ರಾಮಣ್ಣ ಕಂಬನಿದುಂಬಿದವನಾಗಿ ನಿಂತಿದ್ದ!

ಅಳು ಗಂಟಲನ್ನೊತ್ತಿಕೊಂಡು ಬಂದಿತು. ಬಾಯಿಗೆ ವಸ್ತ್ರ ಕೊಟ್ಟು, ಅಳುವನ್ನು ತಡೆದುಕೊಂಡ. ಕೈಕಾಲು ನಡುಗುತ್ತಿದ್ದವು.

"ತಂಗೀ, ಅಯ್ಯೋ! ರಾಮಣ್ಣ ಹೋಗಿಬಿಟ್ರಲ್ಲಾ!" ಎಂದು ಒದರಿಬಿಟ್ಟ.

ಸ್ವಲ್ಪ ಹೊತ್ತು ರತ್ನ ಹಾಗೇ ಭ್ರಮಿತಳಾಗಿ ನಿಂತುಬಿಟ್ಟಳು.

"ನಿನ್ನೆ, ಕಾರ್ಖಾನೆಯಲ್ಲಿ ಕೆಲಸ ನಾಗಲಿಲ್ವೆ?" ಎಂದು ಕೇಳಿದಳು.

"ನಿನ್ನೆ ರಾತ್ರಿ, ಒಳಗಿದ್ದ ಹಾಗೇ ಕೆಲಸ ನಿಲ್ಲಿಸೋಣ ಎಂದು ಮಾಡಿದೆವು. ಯಂತ್ರಗಳನ್ನೆಲ್ಲಾ ಮುರಿದು, ಪೋಲೀಸ್‌ನವರನ್ನೂ ಬೆತ್ತಗಳಿಂದ ತಡೆದೆವು. ಅವರು ತೋಟೆ ಹಾರಿಸಿದರು. ಒಂದು ತೋಟೆ ತಪ್ಪಿ ರಾಮಣ್ಣನ ಎದೆಯನ್ನು ನಾಟಿತು! ಆಗ ಅಲ್ಲೇ ಪ್ರಾಣ ಹೋಗಿಬಿಟ್ಟಿತು" ಎಂದು ಭೋರ್ಗರೆದು ಅತ್ತುಬಿಟ್ಟ.

"ಹುಂ! ನಮ್ಮವರೇ ನಮ್ಮನ್ನು ಸುಡುತ್ತಿದ್ದಾರೆ; ಸುಟ್ಟು ಕೊಲ್ಲುತ್ತಿದ್ದಾರೆ!........" ಎಂದೊದರಿದಾಕೆ ಉಳಿದ ಮಾತುಗಳನ್ನು ನುಂಗಿಕೊಂಡಳು. ಎದೆಯಲ್ಲಿ ದೊಡ್ಡ ಬಂಡೆ ಕಲ್ಲನ್ನು ಯಾರೋ ಎತ್ತಿಟ್ಟಂತಾಗಿತ್ತು, ಅವಳಿಗೆ. ತಲೆ ಗಿರಗಿರನೆ ತಿರುಗಿತು. ಕಂಗಳಿಂದ ಸುಡುಗಡಲ ನೀರಿನಂತೆ ಬಿಸಿಯಾದ ಕಣ್ಣೀರು ಉಕ್ಕುಕ್ಕಿ ಹರಿಯಿತು. ಮಳೆ ಬಂದು ನೀರುಕ್ಕಿ ನೆರೆ ಬಂದು ಜಗತ್ತಿನ ಒಳಿತು ಕೆಟ್ಟಗಳನ್ನು ಪರಿಗಣಿಸದೆ ಎಲ್ಲವನ್ನೂ ಒಂದಾಗಿ ತೊಳೆದುಕೊಂಡು ಒಯ್ಯುವಂತೆ ಅವಳ ಆ ಕಣ್ಣೀರು ಅವಳೆಲ್ಲ ಕನಸು–ನೆನಸುಗಳನ್ನೂ ಜೀವನದ ಆಶಾಭಿಲಾಷೆಗಳನ್ನೂ ಏಕಸಮನಾಗಿ ಕೊಚ್ಚಿಕೊಂಡೊಯ್ದಿತು.

ನಿರಾಶೆ–ನಿಟ್ಟುಸಿರುಗಳೆ ಅವಳ ಭಾಗಕ್ಕೆ ಬಾಕಿ ಉಳಿದವು. ಇಷ್ಟಾಗುವಾಗ ಅವಳ ತಂದೆಯೂ ಪ್ರಾಣಬಿಟ್ಟಿದ್ದ.

ರತ್ನಳಿಗೆ ಪ್ರಪಂಚವೆ ಶೂನ್ಯವಾಗಿ ಕಾಣಲಾರಂಭಿಸಿತು. 'ನಾನಿದ್ದೇನೆ' ಎನಲು ಯಾರಿರುವರವಳಿಗೆ? ಜಗತ್ತಿನಲ್ಲಿ ಏಕಾಕಿಯಾಗಿದ್ದಳವಳು. ಹೊಟ್ಟೆಗೆ

ಅನ್ನವಿಲ್ಲದೆ ಬತ್ತಿ ಒಣಗುತ್ತಿದ್ದಾಳೆ. ಅದನ್ನು ಹಿಂದಾಗಿ ಗಣಿಸಳವಳು. ಆದರೆ ಮೂರು ವರ್ಷದ ಮಗುವೊಂದಿದೆಯಲ್ಲವೆ? ಅಕ್ಕಪಕ್ಕದವರು ಒಂದು ದಿನ, ಎರಡು ದಿನ, ಮೂರು ದಿನ ಮಗುವೆಂದು ಏನಾದರೂ ಕೊಟ್ಟಾರು. ಯಾವಾಗಲೂ ಕೊಟ್ಟಾರೆ? ದುಡಿಯಲು ಹೊರಟಳು—ಮಗುವಿಗಾಗಿ.

ಮಗುವಿನ ಮುಖವನ್ನು ನೋಡಿ ರತ್ನ ತನ್ನ ದುಃಖವನ್ನೆಲ್ಲ ಮರೆತು ದಿನ ನೂಕಿದಳು. ಲೋಕದಲ್ಲಿ ಮನುಷ್ಯ ಬಯಸುವ ವಸ್ತುಗಳು, ಅವಸಿಶ್ಚಿಸಿದ ಸಾಮಗ್ರಿಗಳು ಆ ಸಮಯದಲ್ಲಿ ದಕ್ಕುವುದು ಬಹಳ ಕಡಿಮೆಯೆನ್ನಬಹುದು. ಬೇಡವಾದಾಗ ಹಿಂದೆ ಬೇಕಾದುದು ದಕ್ಕುವುದು. ಇದು ಸ್ವಾಭಾವಿಕ. ಆದರೆ ರತ್ನಳಿಗೆ ಬೇಡವಿತ್ತು; ಹಾಗೆಂದು ನಿಸರ್ಗದೇವತೆಯನ್ನು ದೂರಲಾಗುವುದೆ? ರತ್ನಳ ರೂಪ ಅಂದಚೆಂದಗಳಿಂದ ತುಂಬಿ ತುಳುಕಾಡುತ್ತಿತ್ತು. ಅವಳು ತನ್ನನ್ನು ಅತಿಯಾಗಿ ಹಳಿದುಕೊಂಡಳು. ಫಲ? ಪ್ರತಿಯೊಬ್ಬ ನೋಟಕನ ಕಣ್ಣು ಅವಳೆಡೆಗೆ ತಿರುಗದಿರಲಿಲ್ಲ. ಈ ಬಾಲ್ಯಪ್ರಾಯದಲ್ಲೆ ಪತಿಯನ್ನು ಕಳೆದು ಕೊಂಡಿದ್ದಳಾದರೂ ಪಾಪಕ್ಕೆ ಹೆದರುತ್ತಿದ್ದಳು—ರತ್ನ!

ರತ್ನ ಕೆಲಸಕ್ಕೆ ಸೇರಿದಳು. ಮನೆಯ ಯಜಮಾನಿಯನ್ನು ಕಳೆದುಕೊಂಡ ಯಜಮಾನನು ರತ್ನಳ ಮೇಲೆ ಕಣ್ಣಿಟ್ಟನು. ಕುಬುದ್ಧಿಯ ಪ್ರೇಮಸ್ಫೂರಿತ ವಾಕ್ಯಗಳನ್ನು ರತ್ನಳೊಂದಿಗೆ ಆಡತೊಡಗಿದನಾತ. ಅಂತೂ ಒಂದು ದಿನ ಬಲಾತ್ಕಾರದಿಂದ ತನ್ನ ದಾನವ ಕೃತ್ಯವನ್ನು ಕೈಗೂಡಿಸಿ ಸಾಧಿಸಿಕೊಂಡನು! ಆತ ಸಿರಿವಂತನಾದ್ದರಿಂದ ಹಣದ ಸುರಿಮಳೆಯನ್ನೇನೊ ರತ್ನಳ ಮೇಲೆ ಸುರಿಯಲಾರಂಭಿಸಿದ. ಮೋಹಿನಿಗೆ ಐದು ವರ್ಷ ತುಂಬಿತು. ಅವಳು ಶಾಲೆಗೆ ಹೋಗಲು ಆರಂಭಿಸಿದಳು.

ಮೋಹಿನಿ ವಿದ್ಯೆಯಲ್ಲಿ ಮುಂದಾದಳು. ತಾಯಿ-ಮಗಳ ವೆಚ್ಚಕ್ಕೆ ತಿಂಗಳಿಗೆ ದಕ್ಕಿದಷ್ಟು ಸಾಲದಾಯಿತು. ವ್ಯಭಿಚಾರದ ಪೈಶಾಚಿಕ ಕೃತ್ಯಗಾರನಾದವನ ಅಸಹ್ಯ ರೋಗ ರತ್ನಳಿಗೆ ತಾಗಿ ಬಾಧಿಸಲಾರಂಭಿಸಿತು. ರತ್ನ ಆರು ತಿಂಗಳು ಆಸ್ಪತ್ರೆ ಪಾಲಾದಳು. ದೇವರ ದಯೆಯೊ ಅಥವಾ ಮೋಹಿನಿಯ ಭಾಗ್ಯವೊ ರತ್ನ ಗುಣ ಹೊಂದಿ ಮನೆಯ ಮುಖ ನೋಡಿದಳು. ಪರರ ಅಂಗಳ ಗುಡಿಸುವ ಉದ್ಯೋಗಕ್ಕೆ ಹೋಗುವುದಿಲ್ಲವೆಂದು ಮನಸ್ಸಿನಲ್ಲೆ ನಿರ್ಧರಿಸಿದಳು. ಆದರೆ........ಆದರೆ ಇಬ್ಬರ ಹೊಟ್ಟೆಬಟ್ಟೆಯ ಖರ್ಚು ನಡೆಯಬೇಡವೆ? ಮೋಹಿನಿಯ ವಿದ್ಯೆಯೂ ಸಾಗಬೇಕು. ಇದು ಹೇಗೆ ನಡೆದೀತು? ಲೋಕ

ಹಣವನ್ನು ಮೆಚ್ಚುತ್ತಿದೆಯಲ್ಲದೆ ಗುಣವನ್ನು ಮೆಚ್ಚುತ್ತಿಲ್ಲ! ಲೋಕದ ಚಾಕರಿ ಮಾಡಿದರೂ ಮಾಡದಿದ್ದರೂ ತಾನು ವಿಷಯಾಸಕ್ತ ಬಹಿರಂಗ ಮಾನಸರಾದ ಗುಪ್ತಮಾನಸರಗಳಿಗೆ, ಮಾನವಶೋಷಣಗಳಿಗೆ ಎರವಾಗಲೇ ಬೇಕಾಗಿದ್ದಲ್ಲಿ ಆ ಚಾಕರಿಯನ್ನು ಮಾಡಬೇಕಾದ ಆವಶ್ಯಕತೆಯಾದರೂ ಏನಿದೆ?—ಎಂದು ದೀರ್ಘವಾಗಿ ಯೋಚಿಸಿದಳು, ರತ್ನ. ಅಂತೂ ಕೊನೆಯಲ್ಲಿ, ಕತ್ತಿನ ವರೆಗೆ ಮುಳುಗಿಯಾಯಿತು, ಇನ್ನು ಸಂಪೂರ್ಣ ಮುಳುಗುವುದಾಗಿ ನಿಶ್ಚಯಿಸಿದ ರತ್ನ—ತನ್ನ ಹಣೆಬರಹ ಹೇಗಿದೆಯೊ ಹಾಗಾಗಲಿ—ಇದು ಬಿಟ್ಟರೆ ಬೇರೆ ದಾರಿ ತಾನು ಕಾಣಲಾರಳು, ಇಂದಿನ ಈ ಸಮಾಜದೊಳಗೆ—ಎಂದು ಕೊಂಡಳು ತನ್ನೊಳಗೆ! ಹಣದ ಸಮಸ್ಯೆ ಅವಳನ್ನು ವೇಶ್ಯಾವೃತ್ತಿಗೆ ಇಳಿಸಿತು. ಸಿರಿವಂತ ಸೈನ್ಯದ ತಂಡವೆ ಬರಲಾರಂಭಿಸಿತು. ಆದರೆ ರತ್ನ ರೋಗಿಷ್ಠರ ಸಹ ವಾಸದ ಬಗ್ಗೆ ಜಾಗ್ರತೆ ವಹಿಸಿದಳು! ಆದರೂ ಶ್ರೀದೇವಿಯಾಸ್ಥಾನ ರತ್ನಳ ವಾಸ್ತವ್ಯವೆ ಆಗಿ ಪರಿಣಮಿಸಿತು!

ಇಂದಿನಂತೆ ಮನುಷ್ಯ ಎಂದೂ ಇರಲು ಸಾಧ್ಯವೆ? ರತ್ನಳಿಗೆ ಹರಯ ಮೀರಿತು. ಹಣದ ಬರುವಿಕೆ ಕಡಿಮೆಯಾಗತೊಡಗಿತು. ಸಂದರ್ಭವರಿತು ರತ್ನ ತ್ರಿಮೂರ್ತಿಗಳನ್ನು ತಂದಿರಿಸಿದಳು. ಹಿಂದಿನದಕ್ಕಿಂತಲೂ ಇಮ್ಮಡಿಸಿತು, ಆಗಿನ ಸಿರಿಯ ಬರುವಿಕೆ. ಆದರೆ ರತ್ನ ತನ್ನ ಮಗಳ ವಿಷಯವಾಗಿ ಅತ್ಯಂತ ಜಾಗ್ರತೆ ವಹಿಸುತ್ತಿದ್ದಳು!

ಮೋಹಿನಿ ತನ್ನ ವಿದ್ಯೆಯನ್ನು ಸಾಕುಮಾಡಿದಳು. ಇತರ ಲೋಕವ್ಯವಹಾರದ ವಿದ್ಯೆಗೆ ಕೈಹಚ್ಚಿದಳು. ಆಗ ರತ್ನ ತೀರಿಕೊಂಡಳು. ಕಲೆಕ್ಟರ್ ಆಫೀಸಿನಲ್ಲಿ ಮುಖ್ಯ ಗುಮಾಸ್ತ ಕೆಲಸವೊಂದು ಖಾಲಿಯಿದೆ ಎಂಬುದು ಗೊತ್ತಾಗಿ ಕೆಲಸ ಸೇರುವುದು ಅವಳಿಗೆ ಹಿತವೆಂದು ಕಂಡುದು ಒಳ್ಳೆಯದೆಂದೆ ಹೇಳಬೇಕಷ್ಟೆ!

ಕಲೆಕ್ಟರ್ ಆಫೀಸಿಗೆ ಮೋಹಿನಿಯು ಬಿನ್ನವತ್ತಳೆ ತಲಪಿದ್ದೆ ತಡ, ಕರೆ ಬಂದಿತು! ಮೋಹಿನಿಯೆಂಬ ಹೆಸರು ನೋಡಿ ಮೋಹಗೊಂಡ—ತೇಜಪಾಲ. ಅವಳನ್ನು ಪ್ರತ್ಯಕ್ಷ ಕಂಡಮೇಲಂತೂ ಕಣ್ಣೇ ಕುರುಡಾಯಿತವನಿಗೆ. ಮೋಹಿನಿ ಆ ಕುರುಡಾದ ಕಣ್ಣುಗಳನ್ನು ಕಾಣುವಂತೆ ಮಾಡಿದಳು. ಇಬ್ಬರ ಹೃದಯದೊಳಗಿನ ಪ್ರೇಮಗೃಹದ ಕದವು ತೆರೆಯಿತು. ಇಬ್ಬರೂ ಆ ಗೃಹವನ್ನು

ಹೊಕ್ಕರು. ಮುಖ್ಯ ಗುಮಾಸ್ತೆಯ ಆಫೀಸು ಸ್ವಲ್ಪ ದೂರವಲ್ಲೆ ಇತ್ತಾದರೂ ಈಗ ಕಲೆಕ್ಟರ್ ಆಫೀಸು ರೂಮಿನ ಪಕ್ಕದ ಕೋಣೆಯಾಗಿದೆ. ನಾಟ್ಯಾಭಿಮಾನಿಯಾದ ತೇಜಪಾಲ ಮೋಹಿನಿಯ ನಾಟ್ಯವನ್ನು ನೋಡಿ, ಅವಳು ಹೆಸರಿಗೆ ತಕ್ಕಂತೆ ಬರಿಯ ಮೋಹಿನಿ ಮಾತ್ರವಲ್ಲ, ಅಮರನ ಆಸ್ಥಾನದ ನರ್ತಕಿಯರಾದ ರಂಭೆ–ಊರ್ವಶಿಯರಿಗಿಂತ ಮಿಗಿಲಾದವಳೆಂದು ಭಾವಿಸಿ ಮನಸ್ಸಿನಲ್ಲೆ ಸಗ್ಗಸುಖವನ್ನು ಅನುಭವಿಸಿದನು! ತನ್ನ ವಿರಾಮದ ಸಮಯವನ್ನೂ ರಜಾದಿನಗಳನ್ನೂ ತೇಜಪಾಲ ಮೋಹಿನಿಯ ಮನೆಯಲ್ಲಿ ಕಳೆಯ ತೊಡಗಿದನು.

ಈಗಷ್ಟೆ ತನ್ನ ದುರಾಚಾರದ ಅರಿವಾಗುತ್ತಿದೆ, ಮೋಹಿನಿಗೆ. ತಾನೀಗ ಬಸುರಿ. 'ಮುಂದಿನ ನನ್ನ ಗತಿ? ನಾಳೆ ತೇಜಪಾಲ ಮದುವೆಯಾದರೆ ಮೋಹಿನಿಯ ಜ್ಞಾಪಕ ಇರುವುದೆ ಅವನಿಗಾಗ? ಮೋಹಿನಿ? ಅವಳಾರು? ಅವಳೊಬ್ಬ ವ್ಯಭಿಚಾರಿಣಿ ಅಥವಾ ವ್ಯಭಿಚಾರಿಣಿಯ ಮಗಳು ಎಂದು ಭಾವಿಸಿ ನನ್ನನ್ನು ತಿರಸ್ಕರಿಸುವುದರಲ್ಲಿ ಸಂದೇಹವೇನಿದೆ?........ಆತನು ನನ್ನಿಂದ ಸುಖವನ್ನನುಭವಿಸಿದನೇನೊ ನಿಜ; ಆದಗೆ ನಾನೂ ಅವನಿಂದ ಸುಖಪಡೆದಿದ್ದೇನೆ. ನಾನವನಿಗೆ ಎಡೆಗೊಟ್ಟಿದ್ದರಿಂದಲೆ ಅಲ್ಲವೆ ಅವನು ನನ್ನೆಡೆಗೆ ಬಂದುದು. ಆತನು ವಿದ್ಯಾವಂತನಿದ್ದು ಒಬ್ಬ ಸ್ತ್ರೀಯನ್ನು ನಿರ್ಗತಿಕಳನ್ನಾಗಿ ಮಾಡುವ ಕಾರ್ಯದಲ್ಲಿ ಕೈಹಾಕಬಾರದಲ್ಲವೆ? ಹೌದು. ಆತನೇ ತಪ್ಪುಗಾರ! ಅದು ಹೇಗೆ? ನಾನು ದಾಸಿಯೆಂಬುದನ್ನರಿತು ಆತನು ಆ ವಿಚಾರಕ್ಕೆ ಹೋಗಿರನು! ........ಏನೇ ಆಗಲಿ. ಅದರ ವಿಚಾರವೇಕೆ ಈಗ? ಆಗಬೇಕಾದದ್ದು ಆಗಿ ಹೋಯಿತು! ಇನ್ನು ಆಗಬೇಕಾದದ್ದು ಏನಿದೆಯೊ ಅದನ್ನು ಒಳ್ಳೆ ಎಚ್ಚರಿಕೆಯಿಂದ, ಜಾಗ್ರತೆಯಿಂದ ನೋಡಬೇಕಾಗಿದೆ. ನನ್ನ ಮುಂದಿನ ಕರ್ತವ್ಯವನ್ನು ನೋಡಬೇಕಾಗಿದೆ. ನನ್ನ ಭವಿಷ್ಯತ್ತನ್ನು—ಮುಂದಿನ ಜೀವನದ ಮಹತ್ ಸಮಸ್ಯೆಯನ್ನು ಬಗೆಹರಿಸಿ ಬಿಡಿಸಿಕೊಳ್ಳಬೇಕಾಗಿದೆ.........ಇದನ್ನು ಹೇಗೆ ಮಾಡಲಿ?........ನನ್ನನ್ನೇ ಮದುವೆಯಾಗಲು ಅವನೊಡನೆ ಕೇಳಬಾರದೇಕೆ? ದಾಸಿಯೆಂದು ಹಿಮ್ಮೆಟ್ಟುವನೆ? ಏಕೆ? ದಾಸಿಯು ಮಾಡುವಂತೆ ನಾನವನನ್ನು ದುರ್ಗತಿಗೆ ಇಳಿಸಿಲ್ಲ! ಇಳಿಸುವ ಪ್ರಯತ್ನವನ್ನು ನಾನು ಕನಸಿನಲ್ಲಿಯೂ ಮಾಡಿಲ್ಲ.........ನನ್ನ ತಾಯಿ ನನ್ನನ್ನು ಸಲಹಲು ವ್ಯಭಿಚಾರ

ವೃತ್ತಿಯನ್ನು ಕೈಕೊಂಡಿರಬಹುದು. ಆದರೆ ನಾನು ವ್ಯಭಿಚಾರಕ್ಕೆ ಇಳಿದಿಲ್ಲ ವಲ್ಲ. ಅಥವಾ ವ್ಯಭಿಚಾರಿಣಿಯ ಮಗಳು ವ್ಯಭಿಚಾರಿಣಿಯೆ ಆಗಬೇಕೆಂದು ಅದಾವ ಶಾಸನದಲ್ಲಿ ಬರೆದಿದೆ?........ವಂಶದಲ್ಲೊಂದು ಹೆಣ್ಣು ನಿರ್ಗತಿಕಳಾಗಿ ಕ್ರೂರ ಪ್ರಪಂಚದಲ್ಲಿ, ನೀಚ ಸಮಾಜದೊಳಗೆ, ಎಲ್ಲೆಡೆ ತಿರುಗಿದರೂ ಕಾಮಾ ಸಕ್ತ ಕಣ್ಣುಗಳ ಮಧ್ಯೆ ವ್ಯಭಿಚಾರವೊಂದಲ್ಲದೆ ಬೇರಿನ್ನಾವ ರೀತಿಯಲ್ಲಿಯೂ ಸೇವಾಸಕ್ತಳಾಗಿರುವುದು, ಬದುಕಿರುವುದು, ಬದುಕಿ ತನ್ನ ಕೂಸೊಂದನ್ನು ಸಾಕುವುದು ಸಾಧ್ಯವೆ ಇಲ್ಲವೆಂದು ತಿಳಿದುಬಂದು, ವ್ಯಭಿಚಾರಿಣಿಯಾದವಳೆಂದ ಮಾತ್ರಕ್ಕೆ, ಆ ಇಡಿ ವಂಶವೆ ಮೇಲೆ ಬರದೆ, ಉದ್ಧಾರವಾಗದೆ, ನಿಸ್ಸಂತಾನ ವಾಗಿ ಮಣ್ಣುಗೂಡಿಹೋಗಬೇಕೆ? ಇದುವೆ ಸಮಾಜ ಸುಧಾರಣೆ?' ಎಂದು ಕೊಂಡಳು ಮೋಹಿನಿ ತನ್ನೊಳಗೆ.

ಹೀಗೆಂದು ಅನೇಕ ವಿಧವಾಗಿ ಯೋಚಿಸಿ ಒಂದು ನಿರ್ಧಾರಕ್ಕೆ ಬಂದ ಮೋಹಿನಿ ಅಂದು ತೇಜಪಾಲನ ಮುಂದೆ ತನ್ನ ಊಹೆಯನ್ನು ಪ್ರಸ್ತಾಪಿಸಿ ದಳು. ಮೋಹಿನಿಯ ಊಹೆ ತನ್ನ ಕಿವಿಗಳಲ್ಲಿ ಬಿದ್ದಾಕ್ಷಣ ತೇಜಪಾಲ ಹಿಂಜರಿದನೇನೊ ನಿಜ; ಆದರೆ ಬುದ್ಧಿಯನ್ನು ತಂದುಕೊಂಡು ತನ್ನ ತಪ್ಪನ್ನೂ ಪರಿಗಣಿಸಿಕೊಂಡನು. ಸಂದರ್ಭಕ್ಕೆ ಸರಿಯಾಗಿ ವರ್ಗವೂ ಆಗಿ ಬಿಟ್ಟಿದ್ದರಿಂದ ಆತನ ಮದುವೆಯೂ ಆರು ತಿಂಗಳ ಮುಂದೆ ಬಿದ್ದಿತ್ತು.

ತೇಜಪಾಲ ಮೋಹಿನಿಗೆ ಭರವಸೆಯಿತ್ತನು. ಆಗ ಮೋಹಿನಿಗಾದ ಮನೋಲ್ಲಾಸವನ್ನು ಬಣ್ಣಿಸಲರಿಯದು. ಅವನು ಮೋಹಿನಿಯನ್ನು ರಿಜಿಸ್ಟರ್ ಮದುವೆ ಮಾಡಿಕೊಂಡನು.

ತೇಜಪಾಲನೊಂದಿಗೆ ಮದನಪಲ್ಲಿಗೆ ತೆರಳಲು ಮೋಹಿನಿ ಅನುವಾದಳು. ಅಂದೇ ರಾತ್ರಿ ಮೋಹಿನಿಯ ಸಮೇತ ತೇಜಪಾಲ ಮದನಪಲ್ಲಿಗೆ ಪಯಣ ಬೆಳಸಿದನು. ಬಸ್ ನಿಲ್ದಾಣಕ್ಕೆ ಪೇದೆ ಚಂದಪ್ಪನೂ ಬಂದಿದ್ದನು. ಐದು ರೂಪಾಯಿಯ ನೋಟೊಂದನ್ನು ಚಂದಪ್ಪನಿಗೆ ಕೊಟ್ಟಳು, ಮೋಹಿನಿ.

ಈ ವಿಷಯವೆಲ್ಲ ಚಂದಪ್ಪನಿಗೆ ಚೆನ್ನಾಗಿ ಗೊತ್ತು. ತೇಜಪಾಲ ಅನ್ಯಾಯವನ್ನೆ ಮಾಡಿದ್ದನಾದರೂ ಅದನ್ನು ನ್ಯಾಯ ರೀತಿಯಲ್ಲಿ ಕೊನೆಗಾಣಿ ಸಿದನಾದ ಕಾರಣ ಚಂದಪ್ಪನಿಗೆ ಮನಸ್ಸಿನಲ್ಲೆ ಒಂದು ಸಂತೋಷ. ಚಂದಪ್ಪ ನಿಗೆ ಮೋಹಿನಿಯೆಂದರೆ ಅಷ್ಟು ಪ್ರೀತಿ. ಅವಳನ್ನು ತನ್ನ ಮಗಳಂತೆ ಕಾಣು

ತ್ತಿದ್ದ. ಆಫೀಸಿನಲ್ಲಿ ಮೋಹಿನಿಗೆ ಅವಳ ಕೆಲಸಗಳಲ್ಲಿ ಹೆಚ್ಚಾಗಿ ಚಂದಪ್ಪ ನೆರವಾಗುತ್ತಿದ್ದ.

ಚಂದಪ್ಪ ಜೋಲು ಮೋರೆ ಹಾಕಿಕೊಂಡು ಮನೆಗೆ ತೆರಳಿದ.

## ೨೦

ತಲೆಯ ಮೇಲೆ ಬೀಳುವ ಸಿಡಿಲು ದೂರ ಬಿತ್ತು—ಕತ್ತಿಗೆ ಬಂದ ಬಾಳು ಗುರಿತಪ್ಪಿ ಹೋಯಿತು—ಶಿರಕ್ಕೆ ಬಂದ ಆಪತ್ತು ಮುಂಡಾಸು ಹಾರಿಸಿಕೊಂಡು ಹೋಯಿತು—ಎಂಬಷ್ಟು ಸುರಕ್ಷಿತ ಸ್ಥಿತಿಗೆ ಬಂದಿತು ರಂಗಮ್ಮನ ಈಗಿನ ಪಾಡು. ದೇಶಭಕ್ತ ಟೆಲ್ಲನು, ಅಂದು ಮಗನ ತಲೆಯ ಮೇಲಿನ ಲಿಂಬೆಗೆ ಗುರಿಯಿಟ್ಟು ಶರ ಹಿಡಿದು ನಿಂತಾಗ, ಆ ಹುಡುಗನಿಗೆ ಆ ತಲೆಯ ಮೇಲಿನ ಹಣ್ಣು ಹುಣ್ಣಿಗಿಂತಲೂ ನೋವು ಮಾಡುತ್ತಿತ್ತಂತೆ! ಟೆಲ್ಲನ ಗುರಿ ತಪ್ಪದೆ ಬಾಣ ಲಿಂಬೆ ಹಣ್ಣನ್ನೆ ಎರಡು ಸೀಳು ಮಾಡಿದಾಗ, ಅಪಾಯದಿಂದ ಪಾರಾದ ಆ ಹುಡುಗನಿಗೆ ಅದೆಷ್ಟು ಆನಂದವಾಗಿರಬೇಕು? ಟೆಲ್ಲನಿಗೂ ಕಂಟಕದಿಂದ ಪಾರಾದ ಆ ಮಗನನ್ನು ನೋಡಿ ಅತ್ಯಾನಂದವಾಗಿರಲಿಲ್ಲವೆ? ತೇಜಪಾಲ ವರ್ಗವಾಗಿ ಮದನಪಲ್ಲಿಗೆ ತೆರಳಿದನೆಂದಾಗ ರಂಗಮ್ಮನಿಗೆ ಚಿರಾನಂದ ದೊರೆಯಿತು. ರಂಗಮ್ಮನಂದು ಎಲ್ಲಿಗೋ ಅವಸರವಸರವಾಗಿ ಹೋಗುತ್ತಿದ್ದಾಳೆ. ಮುಖದಲ್ಲಿ ಖೇದದ ಚಿಹ್ನೆಯಿಲ್ಲ, ಶಾಂತಿ ಮೂಡಿದೆ! ಶಕ್ತಿಗುಂದಿದ್ದರೂ ಮನಸ್ಸು ನೆಮ್ಮದಿ ಹೊಂದಿದ್ದುದರಿಂದ ಅವಳಲ್ಲಿ ಅದು ಕಂಡುಬರುತ್ತಿರಲಿಲ್ಲ.

ಸಂಜೆ ದೇವತಾರಾಧನೆಗೆ ಹೂ ಕುಯ್ಯುತ್ತ ನಿಂತಿದ್ದಳು, ವಿಜಯ. ರಂಗಮ್ಮ ಹಿಂದಿನಿಂದ ಬಂದುದನ್ನು ಅವಳು ಕಾಣಲಿಲ್ಲ.

" ಅಮ್ಮಣ್ಣಿ ! "

" ಅಮ್ಮಾ, ಅತ್ತಿಯ ಹೂವಾಯ್ತೆಯೇಕೆ ? "

" ಸಂಜೆ ಮನೆಗೆಲಸ ಮುಗಿಯುವಾಗ ವೇಳೆ ಮೀರಿ ಹೋಗುತ್ತೆ ಚಿನ್ನ, ಮತ್ತೆಲ್ಲಿ ಸಮಯ ಹೇಳು."

" ಇಂದು ಹೇಗೆ ? "

" ಇಂದಿನಿಂದೊಂದು ಕೆಲಸ ಇಲ್ಲವಾಯಿತು. ಆಫೀಸಿಗೆ ಅನ್ನ ಹೊರೋದು ನಿಂತಿತು. ಆ ಸಮಯ ಹಾಗೆ ಬಿಡದೆ, ಬಹಳ ದಿವಸವಾಯ್ತು ನಿನ್ನನ್ನು

ನೋಡಿ ಅಂದುಕೊಂಡು, ಬೇಗನೆ ನನ್ನ ಕೆಲಸ ಮುಗಿಸಿಕೊಂಡು ನಿನ್ನನ್ನು ಕಾಣಲು ಬಂದೆ."

"ನಾನೇನು ದೇವತೆಯೆ ?"

"ನನ್ನ ಮುದ್ದು, ನೀನೆನ್ನ ಕಣ್ಮಣಿ, ಮಗು ! ದೇವತೆಯೂ ಹೌದು."

"ಹಾಗಾದರೆ ದೇವತೆ ಒಂದು ಪ್ರಶ್ನೆ ಕೇಳುತ್ತಾಳೆ, ಅದಕ್ಕೆ ಸರಿಯಾದ ಉತ್ತರ ಕೊಡ್ತೀರಾ ?" ಎಂದು ವಿಜಯ ನಕ್ಕು ನುಡಿದಳು.

"ಯಾವ ಪ್ರಶ್ನೆ, ನನ್ನ ಚಿನ್ನ ?"

"ಭರವಸೆಯಿತ್ತರೆ ಮಾತ್ರ ಹೇಳುವೆ ! ಅಂದು—ನಾನು ಇನ್ನೊಂದು ಪ್ರಶ್ನೆ ಕೇಳಲಿ—ಎಂದಾಗ ನೀನೇನೊ ಅವಸರದಿಂದ ಪಾಠವನ್ನು ಕಾದುಕೊಂಡಿದ್ದಾಳು ಅಂತ ಹೊರಟೆ—ಅದೆ !"

"ಕೇಳು."

"ಆ ದಿನ ನಾನು ನಿನ್ನನ್ನು 'ಅಮ್ಮಾ' ಎಂದು ಕರೆದಾಗ ನಿನಗೆ ಅಷ್ಟೊಂದು ಸಂತೋಷವಾಗಲು ಏನು ಕಾರಣ ?"

"ಅಂದೇ ಹೇಳಲಿಲ್ಲವೆ ನಿನಗೆ ನಾನದನ್ನು. ಈ ಹೊತ್ತಿನಲ್ಲಿ ನಿನ್ನಷ್ಟೆ ಹರಯದ ಮಗಳೊಬ್ಬಳು ನನಗೂ ಇರಬೇಕಿತ್ತೂಂತ."

"ಸರಿ. ನಾನು ನಿನ್ನನ್ನು ಇಷ್ಟು ಸಲಿಗೆಯಿಂದ ಕಾಣೋದಕ್ಕೂ, ಅಮ್ಮಾ ಎಂದು ಕರೆಯೋದಕ್ಕೂ ಕಾರಣವೇನು—ನೀನು ಬಲ್ಲೆಯಾ ?"

"ಇಲ್ಲ."

"ನಾನು ಎಳಗೂಸಾಗಿದ್ದಾಗ ನೀನು ನನಗೆ ನಿನ್ನೆದೆಯ ಹಾಲು ಕೊಟ್ಟು ಸಲಹಿದುದು ನಿಜವೆ ?"

"ನಿನಗೆ ಯಾರು ಹೇಳಿದರು ? ಕಾಂಚನಳೆ ?"

"ಇರಬಹುದು. ಆದರೆ ಹಾಗೆ ಮಾಡಿದುದು ನಿಜವೆ ?"

"ಹೌದು."

"ಕಾರಣ ?"

"ಕಾಂಚನ ರೋಗಪೀಡಿತಳಾದಾಗ ನಿನ್ನ ಆರೈಕೆ ಮಾಡಲು ನಾನೇ ನೇಮಿಸಲ್ಪಟ್ಟೆ. ಆಗ ನನ್ನೆದೆಯಲ್ಲಿ ಹಾಲಿತ್ತು. ನೀನು ಬಾಯ್ಬಿಟ್ಟು ಕಿರಿಚೋದನ್ನು ನೋಡಿ ನನಗೆ ಸಹಿಸೋದಾಗಲಿಲ್ಲ. ನಿನಗೆ—ಹಸುಗೂಸಿಗೆ ವಂಚಿಸೋ

ದಾಗಲಿಲ್ಲ!........ಕಾಂಚನ ತಿರುಗಿ ಬಂದ ಮೇಲೆ ಕೂಡ ನಾನವಳೊಡನೆ ಸ್ನೇಹ ಬೆಳಸಿಕೊಂಡು ನಿನಗಾಗಿ ಕದ್ದು ಬಂದು ಹೋಗ್ತಿದ್ದೆ. ನಿನ್ನ ಅಳುವು—ನನ್ನಿಂದ ಕಡಿಮೆಯಾಗಿತ್ತಾದ ಕಾರಣ ಕಾಂಚನ ನನ್ನನ್ನು ಸದಾ ಇದಿರು ನೋಡುತ್ತಿದ್ದಳು. ಹೀಗಾಗಿ ಗತ್ಯಂತರವಿಲ್ಲದೆ ಕಾಂಚನೆಯ ಒತ್ತಾಯದಿಂದ ದಿನಾಲು ಎರಡು ಮೂರು ಬಾರಿ ಬರದೆ ಇರುತ್ತಿರಲಿಲ್ಲ, ಮಗು."

" ಹಾಗಾದರೆ ನೀನು ನನ್ನ ಸಾಕುತಾಯಿ ಆದೆಯಲ್ಲ್ವೆ ? "

" ಹಾಗನ್ನಬೇಡ ಮಗು. ಹಗಲಿರುಳು ನಿನ್ನ ಸನಿಯ ಕೂತು ಕಾಪಾಡಿದ ಕಾಂಚನೆಯನ್ನೇ ನಿಜವಾದ ತಾಯಿಯೆಂದು ಭಾವಿಸು."

" ಆಗಲಿ. ಅನಂತರಾಯರೇನು ಮಾಡ್ತಿದ್ದಾರೆ ಮನೇಲಿ ? "

" ನಾನು ಹೋಗಲೇನಮ್ಮ ? "

" ನಾನು ಕೇಳಿದ್ದಕ್ಕೆ ?........"

" ಕೇಳಿದ್ದಕ್ಕುತ್ತರ ಇಲ್ಲಿದೆ........ನಾಲದೆ ? "

ರಂಗಮ್ಮನೊಂದಿಗೆ ಅತಿ ಸಂತೋಷದಿಂದ ಸಂಭಾಷಣೆ ಮಾಡುತ್ತಿದ್ದ ವಿಜಯಕುಮಾರಿಗೆ ಅನಂತನು ಪ್ರತ್ಯಕ್ಷನಾದುದು ಗಣನೆಗೆ ಬಂದಿರಲಿಲ್ಲ. ರಂಗಮ್ಮ ಅದೇ ಸಂದರ್ಭವರಿತು ವಿಜಯಳಿಗೆ ಉತ್ತರವೀಯದೆ ಹೊರಡಲಣು ವಾದಳು. ರಂಗಮ್ಮ ಮುಗುಳು ನಕ್ಕುದನ್ನು ಹೂ ಕುಯ್ಯುವುದರಲ್ಲಿ ತಲ್ಲೀನ ಳಾಗಿದ್ದ ವಿಜಯ ನೋಡಿರಲಿಲ್ಲ. ಅಲ್ಲದೆ ಅನಂತನ ಕಣ್ಸನ್ನೆಯೂ ಆಗಿಬಿಟ್ಟಿತು, ರಂಗಮ್ಮನಿಗೆ! ವಿಜಯಳಿಗೆ ತಿಳಿಯುವುದು ಹೇಗೆ ತಾನೆ ಸಾಧ್ಯ ? ವಿಜಯ ನಾಚಿ ಅಧೋಮುಖಳಾದಳು. ರಂಗಮ್ಮನಾಗಲೆ ಮಾಯವಾಗಿದ್ದಳು. ಅನಂತ ಪ್ರಿಯ ಸಖಿಯ ಗಲ್ಲ ಹಿಡಿದೆತ್ತಿದ. ತುಂಬಿ ಹೀರಿದ ಕಮಲದಂತೆ ನಾಚಿ ಬಾಡಿತ್ತು, ಅವಳ ಮುಖ. ಒಳ ಮುಚ್ಚಕದಂತೆ ಮುದುಡಿಕೊಂಡು ಬಿಟ್ಟಳು, ಆ ಕ್ಷಣ. ಮುಗುಳು ನಗು ಅವಳ ಚೆಂದುಟಿಗಳ ಮಧ್ಯೆ ನಲಿದಾಡುತ್ತಿದ್ದಿತು. ಸುಂದರ ಮುಖದ ಮೇಲೆ ಸುಳಿಯುತ್ತಿದ್ದ ತೆಳುವಾದ ತಂಗಾಳಿಯಿಂದ ಹರಿದಾಡುತ್ತಿದ್ದ ಮುಂದಲೆಯ ಕೇಶರಾಶಿಯನ್ನೊಮ್ಮೆ ಅನಂತ ತನ್ನ ಕೋಮಲ ಹಸ್ತಗಳಿಂದ ಹಿಂದೆ ಸರಿಸಿದನು.

" ನಿಮ್ಮೊಳಗಿನ ಗಹನ ವಿಚಾರವೇನದು ? "

" ಕೃತ್ರಿಮವೇಕೆ ? "

"ಯಾವ ಕೃತ್ರಿಮತೆ? ನಾನು ನೀನಾಡಿದ್ದನ್ನೆಲ್ಲ ಅವಿತು ಕೇಳಿದೆನೆಂದು ನಿನ್ನ ಭಾವನೆಯೆ? ಇಲ್ಲ ವಿಜಯಾ, ನಾನೀಗಷ್ಟೆ ಬಂದೆ."

"ಅದೇಕಿಷ್ಟು ಉಲ್ಲಾಸ ಈವತ್ತು?"

"ಮೊನ್ನಿನ ತನಕ ಅತ್ತು ಸೊರಗಿ ಬಾಡಿದ್ದ ವಿಜಯಕಮಲ ಇಂದು ಹೇಗೆ ಅರಳಿತು?"

ಅನಂತನ ಪ್ರಶ್ನೆಗೆ ವಿಜಯ ತುಸು ನಾಚಿದವಳಾಗಿ ತಲೆ ಬಾಗಿದಳು. ತಾನೇ ಜಾಣಳೆಂದು ಭಾವಿಸಿ, ಅನಂತನ ಮೇಲೆ ಮೊದಲೊಂದು ಶರವೆಸೆದಳು ವಿಜಯ. ಅನಂತನೇನು ಮೂಢನೆ? ವಿಜಯಳು ನಾಚಿ ತಾಳಿದ ಕೃತ್ರಿಮ ಕೋಪವನ್ನು ಅನಂತ ನಗುಮೊಗದವನಾಗಿ ಅವಳ ಬಾಚಿ ಹೆಣೆದ ಜಡೆಗೊಂದು ಹೂವಿಟ್ಟು ಹೋಗಲಾಡಿಸಿದನು.

"ವಿಜಯಾ, ನಾನೊಂದು ಹೇಳಲೆ?"

"ಏನದು?"

"ನೀನು ಬೇಸರ ಮಾಡಬಾರದು....ಮತ್ತು ಅಡ್ಡಿಯೂ ಮಾಡಬಾರದು. ಅಂದರೆ ಹೇಳುವೆ."

"ಬೇಗ ಹೇಳಬಾರದೆ?"

"ನಾನಾಡಿದ ಕಟ್ಟುಪಾಡಿಗೆ ವಚನವಿತ್ತೆಯಾ?"

"ಹೂಂ!"

"ನಾನು ಮುಂದಿನ ವಿದ್ಯಾಭ್ಯಾಸಕ್ಕೆ ಮಂಗಳೂರಿಗೆ ಹೋಗಲಿರುವೆ."

"ನಾನು?"

"ನೀನು? ಇಲ್ಲೇ ಇರು. ಬೆದರಲೇನಿದೆ?"

"ಆದರೆ?...."

"ಆದರೇನು? ನಾನು ನಿನಗೆ ಪತ್ರಕ್ಕೇನೂ ಕಡಿಮೆ ಮಾಡಲಾರೆ. ಟಪ್ಪಾಲು ಪೇದೆಗೆ ಎಲ್ಲಾ ಹೇಳಿ ಸರಿಮಾಡಿಟ್ಟದ್ದೇನೆ. ನಿನಗೆ ನನ್ನ ಪತ್ರ ಗುಟ್ಟಾಗಿ ಕೈಸೇರುತ್ತೆ!"

"ಅಲ್ಲೆಲ್ಲಿರುವಿರಿ?"

"ಅಲ್ಲಿ ನಮಗೆ ಬೇಕಾದವರ ಮನೆಯಿದೆ."

"ಯಾರದ್ದು?"

" ಅವನ್ನೆಲ್ಲಾ ಹೇಳಿದರೆ ನಿನಗೆ ತಿಳಿಯುವುದೆ? ಮಾಧವರಾಯರು ಎಂದು ಅವರ ಹೆಸರು. ಹುಣಸೂರು ಗ್ರಾಮದಲ್ಲಿನ ಒಂದು ದೊಡ್ಡ ಆಸ್ತಿ ಬಂಗಲೆ ಎಂದೆಲ್ಲಾ ನಮ್ಮ ವಶಕ್ಕೆ ಬಂದಿದೆ ನೋಡು....ಅವರು."

" ಹೌದು."

" ಅದೇ....ಅದರ ಒಡೆಯರು ಕೂಡ ಅಲ್ಲೇ ಮಂಗಳೂರಲ್ಲಿ ಮಾಧವ ರಾಯರ ಮನೆಯಲ್ಲಿ ಇದ್ದಾರೆ; ಮಾಧವರಾಯರು ಸುಬ್ಬರಾಯರ ಬೀಗ ರಾಗಬೇಕು."

" ನಿಮಗೇನಾಗಬೇಕವರು ? "

" ಸಂಬಂಧವೇನೂ ಅಷ್ಟೊಂದಿಲ್ಲ. ಏನೊ ದೂರಿನಿಂದ, ಅಂದರೆ ನಮ್ಮ ತಂದೆಯವರ ತಾಯಿಯ ಅಣ್ಣನ ಹೆಂಡತಿಯೂ ಸುಬ್ಬರಾಯರ ತಾಯಿಯೂ ಅಕ್ಕತಂಗಿ ಮಕ್ಕಳಂತೆ. ಹೋಗಲಿ. ಆ ಹರಟೆ ಯಾಕೆ ನಮಗೆ ? "

" ಹೊರಡೋದು ಯಾವಾಗ ನಿಶ್ಚಯವಾಗಿದೆ ? "

" ಬರುವ ವಾರದಲ್ಲಿ. ಇನ್ನೊಂದು ವಾರವಿದೆ."

" ರಂಗಮ್ಮನಿಗಿದು ತಿಳಿದಿದೆಯೆ ? "

" ಇಲ್ಲ. ನಿನ್ನೆ ರಾತ್ರಿ ಈ ವಿಷಯ ನಮ್ಮೊಳಗೆ ನಿಷ್ಕರ್ಷೆಯಾಗಿ ಹೀಗೆಂದು ತೀರ್ಮಾನವಾಯ್ತು. ಅಮ್ಮ ಹೇಳಿದಳೊ ಏನೊ."

" ಇರಲಾರದು. ತಿಳಿದಿದ್ದರೆ ನನಗೆ ಹೇಳದಿರುತ್ತಿದ್ದಳೆ ? "

" ಹೌದು. ನಾವಿನ್ನು ಹೋಗೋಣ. ರಾತ್ರಿಯಾಯ್ತು."

ಅನಂತನು ಈಗ ಸಂತೋಷದಿಂದ ಇರುವುದನ್ನು ನೋಡಿ ಪದ್ಮಮ್ಮನಿಗೆ ಒಂದು ತರಹದ ಆನಂದ. ಅನಂತನಲ್ಲಿ ಉತ್ಸಾಹ, ದುಡುಕು ಬಂದಿದೆ. ಹೊತ್ತಿಗೆ ಸರಿಯಾಗಿ ಉಣ್ಣುತ್ತಾನೆ, ತಿನ್ನುತ್ತಾನೆ. ಅವನ ನಿರುತ್ಸಾಹಭರಿತ ವಾದ ಮುಖದಲ್ಲೀಗ ಕಳೆಯ ಚಿಹ್ನೆ ಮೂಡಿದೆ. ನಗುಮೊಗದವನಾಗಿದ್ದಾನೆ. ಮಗನ ಬದಲಾವಣೆ ಕಂಡ ಪದ್ಮಮ್ಮನಿಗೆ ಲೋಕವೆ ಬದಲಾಯಿತೊ ಎಂಬ ಸಂದೇಹ. ಆದರೆ ಒಂದು ವ್ಯಸನ—ಮಗನನ್ನು ವಿದ್ಯೆಗೆ ಪರವೂರಿಗೆ ಕಳುಹಿ ಕೊಡುವುದರ ವಿಷಯವಾಗಿ. ಅನ್ಯರು ಹಾಲಿನ ಮಳೆ ಸುರಿಸಿದರೂ ತಾಯಿ ಪಕ್ಕದಲ್ಲಿದ್ದು ಮಗನ ವಿಚಾರವಾಗಿ ಎಚ್ಚರಿಕೆ ತೆಗೆದುಕೊಂಡಂತಾಗುವುದೆ ?

ಪದ್ಮಮ್ಮ ಮಗನ ವಿಷಯವಾಗಿ ಯೋಚಿಸಿ ಗಂಡನೊಡನೆ ವಿಚಾರಿಸಿ

ದರು. ಕಡೆಗೆ ತಾವಿಬ್ಬರೂ ಅನಂತನೊಂದಿಗೆ ಹೋಗಿ, ಅವರಿಗೆ ಈತನ ಗುಣ ನಡತೆಗಳನ್ನೆಲ್ಲ ವಿಶದೀಕರಿಸಿ, ಎರಡು ದಿನವಿದ್ದು ಹಿಂತಿರುಗುವುದೆಂದು ತೀರ್ಮಾನ ಮಾಡಿದರು.

ಪದ್ಮಮ್ಮ-ಮಥುರಾನಾಥರ ಪುತ್ರಪ್ರೇಮ ವಿಶೇಷ ತರಹದ್ದೇನಲ್ಲ! ಸಾಧುವಾದುದೆ ಆಗಿರುತ್ತದೆ. ಲೋಕದಲ್ಲಿ ಕೆಲವು ತಂದೆತಾಯಿಗಳಿದ್ದಾರೆ, ಮಕ್ಕಳೆಂದರೆ ಮಣ್ಣು ತಿನ್ನಲಿಕ್ಕೂ ತಯಾರಾದವರು ಅವರು! ಅಂಥ ತಂದೆ ತಾಯಿಗಳ ಮಕ್ಕಳ ಜೀವನವು ಚಿಕ್ಕಂದಿನಲ್ಲಿ ಹೇಗೊ ಕಳೆದುಹೋಗುತ್ತದೆ; ದೊಡ್ಡದಾಗುತ್ತ, ಬುದ್ಧಿ ಬೆಳೆಯುತ್ತ ಹೋದ ಹಾಗೆ, ಈ ರೀತಿಯಲ್ಲಿ ಮಕ್ಕಳನ್ನು ಪ್ರೀತಿಸುವ ತಂದೆತಾಯಿಗಳೂ ಲೋಕದೊಳಗೆ ಇದ್ದಾರೆಯೆ ಎಂಬ ಜಿಗುಪ್ಸೆ ಹುಟ್ಟಿ, ಈ ಜೀವನವೆ ಬೇಡ ಅಥವಾ ಸಾಕು ಈ ಬಾಳು, ಎಂಬಲ್ಲಿಗೆ ಬಂದು ಮುಟ್ಟುತ್ತದೆ!—ಯಾವ ಮಕ್ಕಳಿಗೆ ತಂದೆತಾಯಿಗಳ ಪ್ರೀತಿ, ಗಮನ ಅಗತ್ಯವಿದೆಯೊ ಅಂಥ ಮಕ್ಕಳ ತಂದೆತಾಯಿಗಳು ತಮ್ಮ ಮಕ್ಕಳ ವಿಷಯದಲ್ಲಿ ಒಂದಿಷ್ಟೂ ಗಮನವಿಲ್ಲದವರಾಗಿ ಸಂತಾನಪ್ರೇಮ ವೇನೆಂದರಿಯದವರಾಗಿ ಪ್ರಾಣಿಗಳಿಗೆ ಸಮಾನವಾಗಿರುತ್ತಾರೆ!

ಮಧ್ಯೆ ತೊಡಕೊಂದು ಬಂದಿತು. ಎರಡು ದಿನ ಇಲ್ಲಿ ಯಾರಾದರೂ ಮನೆಯ ಜವಾಬ್ದಾರಿ ವಹಿಸುವುದು ಬೇಡವೆ? ಅದಕ್ಕೆ ಇಲ್ಲಿ ಯಾರಿದ್ದಾರೆ? ಮನೆಗೆ ಬೀಗ ಹಾಕಿ ಬಿಟ್ಟು ಹೋದರೆ ಹೊರಗಿನ ಸಾಮಾನುಗಳಿವೆಯಲ್ಲ? ರಮಾನಂದರನ್ನು ಮನೆಯಲ್ಲಿರುವಂತೆ ಹೇಳೋಣವೆಂದರೆ, ಪದ್ಮಮ್ಮನಿಗೆ ಚೆನ್ನಾಗಿ ಗೊತ್ತು, ಅವರು ತಮ್ಮ ಆ ಸ್ಥಾನವನ್ನು ಬಿಟ್ಟು ಎಲ್ಲಿಗೂ ಕದಲರೆಂಬುದು. ಆಶ್ರಮದಿಂದ ಕಾಂಚನೆಯನ್ನು ಬರಹೇಳೋಣವೆಂದರೆ ಅವಳೊಬ್ಬಳೆ ಹೇಗಿರಬಲ್ಲಳು ಇಲ್ಲಿ? ಅಲ್ಲದೆ, ಅಲ್ಲಿನ ಆ ಬಡಮಕ್ಕಳ ಗತಿಯೇನು—ಇಲ್ಲಿ ಬಂದು ಕುಳಿತರೆ? " ಪಾರಮ್ಮನನ್ನು ಒಂದು ಗಾಡಿ ಮಾಡಿ ಹೇಗಾದರೂ ಇಲ್ಲಿ ತಂದಿರಿಸೋಣ; ಹಾಗಾದರೆ ರಂಗಮ್ಮನೂ ಇಲ್ಲಿರಲಾಗುವುದು. ಹೊರಗೆ ರಾತ್ರಿ ಮಲಗಿಕೊಳ್ಳಲು—ಆಶ್ರಮದಲ್ಲಿ ನೀರೆರೆಯುವ ಜವಾನನಿಗೆ ಹೇಳಿದರೆ ಸರಿ" ಎಂದರು ಮಥುರಾನಾಥರಾಯರು. ಪದ್ಮಮ್ಮ ಗಂಡನ ಮಾತಿಗೆ ಸಮ್ಮತಿಸಿದರೂ 'ರಂಗಮ್ಮನನ್ನು ಮನೆಯಲ್ಲಿಟ್ಟು ಹೋದರೆ?....' ಎಂಬ ಪ್ರಶ್ನೆಗೆ ಸರಿಯಾದ ಉತ್ತರ ಹುಡುಕದಿರಲಿಲ್ಲ.

ರಂಗಮ್ಮನಿಗೆ ಈ ವಿಚಾರ ತಿಳಿದಾಗ ಮನಸ್ಸಿಗೆ ಬಹಳ ಬೇಸರ ವಾಯಿತು! ಪದ್ಮಮ್ಮನಿಗಾಗಿಯೆ? ಅಲ್ಲ! ಅನಂತನಿಗಾಗಿ! ಅವಳ ಮನೋನಿರ್ಧಾರ ನೆರವೇರುವುದೆಂದು ಭಾವಿಸಿದ್ದಳು. ತಾನು ಯೋಚಿಸಿದ್ದು ನಿರ್ವಹಿಸೀತೆಂದು ನೆನೆದಿದ್ದಳು. ತನ್ನ ದುಃಖ ಪರಿಹಾರವಾದೀತೆಂಬ ಭಾವನೆ ಅವಳದು. ಆದರೀಗ ತನ್ನ ಹೃದಯೇಚ್ಛೆ ಅದೆಲ್ಲಿ ಗಾಳಿಗೋಪುರವಾಗಿ ಬಿಡುವುದೋ ಎಂಬ ಸಂದೇಹ, ಭಯ—ಅವಳಿಗೆ. ಪದ್ಮಮ್ಮ ಮರೆಯಾದದ್ದೆ ರಂಗಮ್ಮ ಕಣ್ಣೀರು ಸುರಿಸಿದಳು.

ಮರುದಿನ ಮುಂಜಾನೆ ಹೊರಡುವ ದಿನ—ಮುಹೂರ್ತವನ್ನೂ ಆರಿಸಿದ್ದರು. ಇಂದು ಸಂಜೆಯೆ ಹಸೆ ಬಿಟ್ಟು ಏಳಲಾರದ ಪಾರಮ್ಮನನ್ನು ಕರೆಸಿದುದಾಯಿತು. ಪಯಣಕ್ಕೆ ಬೇಕಾದ ಸಾಮಾನುಗಳನ್ನೆಲ್ಲ ಸಿದ್ಧವಾಗಿರಿಸಿದರು.

ವಿಜಯಳಿಗೆ ಪ್ರಯಾಣದ ಮುನ್ನ ದರ್ಶನವೀಯಲು ಅನಂತ ಆ ಹೂದೋಟದಲ್ಲಿ ನಿಂತು ನಿರೀಕ್ಷಿಸುತ್ತಿದ್ದಾನೆ.

ವಿಜಯ ನಾಲ್ಕು ಕಡೆಗಳಲ್ಲೂ ತನ್ನ ದೃಷ್ಟಿ ಬೀರುತ್ತ ಯಾರದೋ ಬರುವಿಕೆಯನ್ನು ಬಯಸುತ್ತ ತುಸು ವೇಗವಾಗಿ ಆ ಕಡೆ ಬರುತ್ತಿದ್ದಳು. ಅವರಿಬ್ಬರ ನೆಟ್ಟದೃಷ್ಟಿ ಒಟ್ಟುಗೂಡಿತು.

"ನಾನು ಬರೋದು ತುಸು ತಡವಾಯಿತು."

"ಅದಕ್ಕೇನು? ನಾನಾದರೂ ಈಗಷ್ಟೇ ಬಂದೆ. ವಿಜಯಾ! ನಾಳೆ ಮುಂಜಾನೆ ಪ್ರಯಾಣ. ಹೋಗಲೆ?"

"ಹೋಗಲೆ ಅನ್ನುವಿರೇಕೆ? ಹೋಗಿಬರಲೆ ಅನ್ನಬಾರದೆ?"

"ಹಹಹ! ನೀನು ಅಜ್ಜೀ ಕಾಲದ ನಿಯಮ ಪಾಲಿಸೋಳೆಂದು ನಾನು ತಿಳಿದಿರಲಿಲ್ಲ. ಸರಿ, ಕ್ಷಮಿಸು. ಹೋಗಿ ಬರಲೆ?—ವಿಜಯಾ! ನಿಂತಿರುವಿಯೇಕೆ? ಕೂಡು."

ಅನಂತ–ವಿಜಯರು ಭುಜಕ್ಕೆ ಭುಜ ತಾಗಿ ಕುಳಿತರು. ತೆಂಗಾಳಿ ನಂದನವನದಂತಿದ್ದ ಆಶ್ರಮದ ಹೂದೋಟದಲ್ಲಿನ ಪರಿಮಳ ಪುಷ್ಪಗಳ ಸುಗಂಧವನ್ನು ವ್ಯಾಪಿಸಿಕೊಂಡು ಮಾನವಹೃದಯಕ್ಕೊಂದು ಆನಂದವೀಯುತ್ತ ಬೀಸುತ್ತಿದ್ದಿತು. ಆಗ ಸೂರ್ಯನಿಳಿದಿದ್ದನಾದರೂ ತಾಪವಿತ್ತು. ತಂಗಾಳಿಯ

ತಂಪು ಸ್ಪರ್ಶದಿಂದ ಆ ತಾಪ ಇಲ್ಲದಂತಾಗಿ ದೇಹಕ್ಕೆ ಸುಖ ದೊರೆಯು ವಂತಿತ್ತು.

"ವಿಜಯಾ! ಇಂದು ನಾನು ನಿನ್ನೊಡನೆ ಕುಳಿತಿರುವೆ!.... ಇನ್ನೆಂದು? ....ಆ ದಿನ ಬೇಗನೆ ........"

"ಅದೇಕೆ, ಅಬದ್ಧ ಮಾತು?"

"ಅಲ್ಲ, ವಿಜಯು, ನನಗೇಕೊ ನಾಳೆ ಹೋಗುವುದೆ ಬೇಡವೆನಿಸುತ್ತಿದೆ."

"ಛಿ! ಏನಿದು? ಮಕ್ಕಳ ಹಾಗೆ! ವಿದ್ಯಾರ್ಜನೆ ಮಾಡುವುದು ಪ್ರಪಂಚದಲ್ಲಿ ಮನುಷ್ಯನ ಕರ್ತವ್ಯ. ಅನುಕೂಲತೆಗಳಿರುವ ನೀವು ಹಾಗೆ ಹಿಂತೆಗೆಯುವುದು ಸರಿಯಲ್ಲ."

ಅನಂತನಿಗಿಂತಲೂ ಧೈರ್ಯಗುಂದಿದ್ದ ವಿಜಯ ಈಗ ಅನಂತನಿಗೆ ಉತ್ತೇಜನವೀಯುತ್ತಿದ್ದಾಳೆ!

"ಅತಿವಿದ್ಯೆ ಅನರ್ಥವನ್ನುಂಟು ಮಾಡುವುದೆನ್ನುವರು. ಹಾಗಾಗುವು ದನ್ನು ನಾನು ನನ್ನ ಕಣ್ಣಾರೆ ಕಾಣುತ್ತಿದ್ದೇನೆ."

"ಇರಬಹುದು. ಆದರೆ ಅವರೆಂಥವರೆಂಬುದನ್ನು ಬಲ್ಲಿರಾ? ವಿದ್ಯೆಗೆ ಅಂತ್ಯವಿಲ್ಲವೆಂಬುದನ್ನು ಬಲ್ಲಿರಾ? ದುರಾಚಾರಿಗೆ ಅಲ್ಪವಿದ್ಯೆಯೇ ಅತಿ ವಿದ್ಯೆ! ಅಂಥವನು ಐ.ಸಿ.ಎಸ್. ಓದಿದರೂ ಅವನಿಗೆ ಅನರ್ಥವನ್ನು ತರುವುದು. ಲೋಕಹಿತವನ್ನು ಬಯಸುವ ಮತ್ತು ಸದಾಚಾರಿಯಾದವನಿಗೆ ಎಷ್ಟೇ ಕಲಿತರೂ ಅವನಿಗೆ ಸ್ವಲ್ಪೇ ಎನಿಸುವುದು! ನೀವೀಗ ಧೈರ್ಯಗುಂದುವ ಅವಶ್ಯವಿಲ್ಲ."

"ವಿಜಯಾ! ಇಷ್ಟನ್ನು ನೀನೆಲ್ಲಿ ಕಲಿತೆ?"

"ಇದಕ್ಕೆ ಕಲಿಯಬೇಕೆ? ಸಮಾಜವೆ ಹಾಗೆ! ಅನ್ಯರಿಗೆ ಕಷ್ಟವೊದಗಿ ತೆಂದಾಗ ನೂರಾರು ಸದುಪಾಯಗಳನ್ನೂ ಸನ್ನಿಯಮಗಳನ್ನೂ ಹೇಳಿಕೊಡು ವರು. ಆದರೆ ತಮಗೆ ಆಪತ್ತುಂಟಾದಾಗ ತಬ್ಬಿಬ್ಬಾಗುವರು."

"ಆಗಲಿ. ಹಾಗಾದರೆ ನಾನು ಹೋಗಲೆ?"

"ಪುನಃ ಹೋಗಲೆ ಅನ್ನುವಿರಾ?"

"ಹಾಂ! ಹೋಗಿ ಬರಲೆ?"

"ಗುರುತು ಕೊಡಲಾರಿರಾ?"

"ನೀನಾಗಿ ಕೇಳಬೇಕೆಂದೇ ನಾನು ಹೊರಟುದು! ಇಗೊ"

ಎಂದವನೆ ವಿಜಯಳಿಗೆ ತನ್ನ ಭಾವಚಿತ್ರವೊಂದನ್ನು ಕೊಟ್ಟನು. ಅದನ್ನು ನೋಡಿದ ವಿಜಯಕುಮಾರಿಗೆ ಅದೆಷ್ಟು ಸಂತೋಷವಾಗಿರಲಾರದು! ಒಮ್ಮೆ ಚಿತ್ರವನ್ನೂ ಮತ್ತೊಮ್ಮೆ ಅನಂತನನ್ನೂ ನೋಡಿ,

"ನಾನೇನು ಕೊಡಲಿ?"

"ನೀನೇ ನನ್ನ ಹೃದಯದಲ್ಲಿರುವಾಗ ನಿನ್ನ ಗುರುತಿಗಾಗಿ ಬೇರೆ ವಸ್ತುವಿನ ಆವಶ್ಯಕತೆಯಿದೆಯೆ? ಹೋಗಿ ಬರಲೆ"

ಎನ್ನುತ್ತ ವಿಜಯಳ ಕೈಗಳನ್ನು ಹಿಡಿದಿದ್ದ ಅನಂತ ಬಿಟ್ಟುಬಿಟ್ಟನು. ಇಬ್ಬರ ಕಣ್ಣುಗಳಲ್ಲಿಯೂ ನೀರು ತುಂಬಿತು. ಅನಂತ ಮರೆಯಾಗುವ ತನಕ ನೋಡುತ್ತ ನಿಂತಿದ್ದ ವಿಜಯ, ಅವನು ಮರೆಯಾಗಲು ಕಣ್ಣು ಮುಚ್ಚಿ ಅವನ ಭಾವಚಿತ್ರವನ್ನೊಮ್ಮೆ ತನ್ನ ಹೃದಯಕ್ಕೊತ್ತಿಕೊಂಡಳು!

೨೧

ಅತಿಥಿಗಳನ್ನು ಸ್ವಾಗತಿಸಲು ಮಾಧವರಾಯರು ಸಿದ್ಧರಾಗಿದ್ದರು. ಅಂದು ಮಧ್ಯಾಹ್ನ ಊಟದ ಹೊತ್ತಿಗೆ ಸರಿಯಾಗಿ ಬರುವವರಿದ್ದಾರೆ—ಮಥುರಾನಾಥರಾಯರು ಕುಟುಂಬಸಮೇತರಾಗಿ. ಕಾವೇರಮ್ಮ ಅಂದು ಹೆಚ್ಚಿನ ಜಾಗ್ರತೆಯಿಂದ ಅಡಿಗೆ ಮಾಡುವುದರಲ್ಲಿ ಮಗ್ನರಾಗಿದ್ದರು. ಎಲ್ಲ ಕೆಲಸಗಳನ್ನೂ ಮಾಡಿಕೊಳ್ಳಬೇಕಾದ್ದರಿಂದ ಎಷ್ಟೇ ಬೇಗ ಮಾಡಿದರೂ ಅದು ತಡವೇ ಆಗುತ್ತಿತ್ತು. ಮಧ್ಯೆ ರಾಯರು "ಬೇಗ, ಬೇಗ! ಬರುವ ವೇಳೆಯಾಯ್ತು!" ಎಂದು ಎಚ್ಚರಿಸಿ ಹೋಗುತ್ತಿದ್ದರು. ಹೊರಗಿನಿಂದ "ಆಯಿತೆ?" ಎಂಬ ಪ್ರಶ್ನೆಗೆ "ಆಯಿತು; ಆಯಿತು" ಎಂಬ ಉತ್ತರವನ್ನೇನೊ ಕೊಡುತ್ತಿದ್ದರು ಕಾವೇರಮ್ಮ. ಆದರೆ ಒಳಗೆ ಒಂದೂ ಆಗಿರಲಿಲ್ಲ. ಆಗಷ್ಟೆ ಕಾಯಿ ಒಡೆಯುತ್ತಿದ್ದರು. ಮಸಾಲೆ ಅರ್ಧ ಅರೆದು ಈ ಕೆಲಸಕ್ಕೆ ಕುಳಿತಿದ್ದರು. ಬೇಳೆ ಬೇಯುತ್ತಿತ್ತು.

ಬೇಳೆ ಬೆಂದಿತು. ಕಾಯಿ ಹಾಕಿ ಮುಚ್ಚಿ, ಕಟ್ಟಿಗೆ ದೂಡಿ, ಕಲ್ಲಿನ ಕಡೆಗೆ ತಿರುಗಿದರು. ಅರೆದಾಗುವಷ್ಟರಲ್ಲಿ ಪಲ್ಯವೂ ಬೆಂದಿತು. ಮಸಾಲೆ ಹಾಕಿ ಉಪ್ಪಿನ ಪಾತ್ರೆ ತೆಗೆದರು. ಅದರ ಬಾಯಿ ಬರಿದಾಗಿತ್ತು. ಆದರೂ ಇದ್ದದ್ದರಲ್ಲಿ ಮಾಡಿ ಪದಾರ್ಥವನ್ನು ಒಲೆಯಿಂದ ಕೆಳಗಿಳಿಸಿ, "ಉಶ್" ಎಂದರು. ಒಗ್ಗರಣೆಗೆ ಸಾಸಿವೆ ಇರಲಿಲ್ಲ. ಕಾವೇರಮ್ಮನಿಗೆ ಸಿಟ್ಟು ಕಾವೇರಿತು.

"ಇಲ್ಲಿ ಬನ್ನೀಂದ್ರೆ" ಕಾವೇರಮ್ಮ ಗಂಡನನ್ನು ಕರೆದರು.

ಹೆಂಡತಿ ಗುಟ್ಟು ಹೇಳಲು ಕರೆಯುತ್ತಾಳೋ ಏನೋ ಎಂದು " ಹಾಂ! ಬಂದೆ " ಎನ್ನುತ್ತ ಒಳಗೆ ಬಂದರು.

" ನೀವು ಸಾಸಿವೆ ತರ್‍ಲಿಲ್ವೆ ? "

" ನೀನು ಹೇಳಿದ್ದೆಯೆ ? "

" ಹೇಳಲಿಲ್ಲವಾದರೇನಾಯ್ತು? ಸಾಮಾನು ಯಾವುದೂ ಇಲ್ಲ, ನೀನ್ನೇನೆ ಮುಗಿದಿದೆ ಅನ್ನಲಿಲ್ವೆ ? "

" ಈಗೇನು ಮಾಡೋದು ? ನೆರಮನೆ ಸಿಂಗಮ್ಮನ ಕೈಯಲ್ಲಿ ಸ್ವಲ್ಪ ಕೇಳಿ ಇಸ್ಕೊಂಡು ತಾ. ಮತ್ತೆ ಕೊಡಬಹುದು."

" ಮತ್ತೆ, ಉಪ್ಪೇಕೆ ತರ್‍ಲಿಲ್ಲ ? "

" ಉಪ್ಪು ತಂದಿದ್ದೆನಲ್ಲ ! "

" ಎಲ್ಲಿದೆ ? ಇಷ್ಟೆಲ್ಲ ಸಾಮಾನುಗಳನ್ನು ತೆಗೆದಿರಿಸಿದೆ. ಉಪ್ಪಿನ ಕಟ್ಟು ನನ್ನ ಕಣ್ಣಿಗೆ ಕಾಣ್ಸೋಕಿಲ್ವೆ ? "

" ಹೊ! ಹಾಗಾದ್ರೆ ಅಂಗಡೀಲೆ ಉಳೀತು. ಈಗ ಬೇಕೆ ? ಎರಡನ್ನೂ ತರ್‍ತೀನೆ."

" ಹುಂ! ಎಂಥ ಮರವೆ! ಈಗ ಹೋಗಿ....ಸುಮ್ನೆ ಕುಳಿತುಕೊಳ್ಳಿ ಹೋಗಿ."

ಹೆಂಡತಿಯ ಮಾತು ತುಸು ಕಠಿನವಾಗಿದ್ದರೂ ಅದರೊಳಗೆ ಕರುಣೆ ಅಡಗಿದ್ದುದರಿಂದ ಗಂಡನಿಗೆ ಮನದೊಳಗೆ ಸಂತೋಷವಾಗಿರಬೇಕು. ಮಾಧವರಾಯರು ವೃದ್ಧಾಪ್ಯಕ್ಕೆ ಬಂದಿದ್ದರೂ ತಮ್ಮ ಹೆಂಡತಿಯ ಮನಸ್ಸನ್ನರಿಯಲು ಹೂಡಿದ ಹೂಟವದು. ಅವರು ಅಂಗಡಿಗೆ ಹೋಗಲನುವಾದವರಂತೆ ಅವಸರದಿಂದ ಜಗಲಿಗೆ ಬರುತ್ತ ಬಾಯೊಳಗೆ ನಕ್ಕರು! ಕಪಟವರಿಯದ ಕಾವೇರಮ್ಮ " ಈಗ ಬೇಡಾಂದ್ರೆ " ಅಂದರು. ಜಗಲಿಯಲ್ಲಿ ನಿಂತು ಬಗ್ಗಿ ಮಾರ್ಗವನ್ನು ನೋಡುತ್ತ ಮಾಧವರಾಯರು, " ಹುಂ ! ಹುಂ ! " ಎಂದರು ಹಿಗ್ಗಿನಿಂದ, ಹೆಂಡತಿಯ ಮೇಲಿನ ಪ್ರೇಮ ತೋರಿಸಲು.

ನೆರಮನೆ ಸಿಂಗಮ್ಮನ ಮನೆಯಿಂದ ಸಾಸಿವೆ ಬಂದಿತು ; ಆ ಪದಾರ್ಥಕ್ಕೆ ಒಗ್ಗರಣೆಯೂ ಆಯಿತು. ಅದರ ಮೇಲೆ ಒಂದೆರಡು ಮೇಲೋಗರ ಸಾಂಬಾರು ಅವಿಯಲ್ ಕೂಟು ಮುಂತಾದವುಗಳಾದವು. ಅಂದಿನ ಊಟಕ್ಕೆ ಎಲ್ಲ ಸಿದ್ಧ

ವಾಯಿತು. ಕಾವೇರಮ್ಮ ಗುಡಿಸಿ, ಎಲ್ಲವನ್ನೂ ಸಜ್ಜಾಗಿಟ್ಟು, ಊಟಕ್ಕೆ ಬಾಳೆಯೆಲೆ ಕಟ್ಟನ್ನು ಸುಬ್ಬರಾಯರಿದ್ದಲ್ಲಿ ತಂದಿಟ್ಟು, ಬಚ್ಚಲಲ್ಲಿ ಒಲೆಯುರಿಯುತ್ತದೊ ಎಂದು ನೋಡಿಕೊಂಡು, ಒಳಗೆ ಬಂದು ದಣಿವಾರಿಸಿಕೊಳ್ಳಲು ಹುಲ್ಲಿನ ಹಸೆ ಬಿಡಿಸಿದರು.

ಕಾವೇರಮ್ಮನನ್ನು ಆಗ ಯಾರಾದರೂ ನೋಡಿದ್ದರೆ ' ಅಯ್ಯೋ, ಪಾಪ ! " ಅನ್ನುವಂತಿತ್ತು. ಮಗನಿಗೊಂದು ಮದುವೆಯಾಗದ್ದರಿಂದ ಇಷ್ಟೊಂದು ಕಷ್ಟ ಅವರಿಗೆ. ಮನೆಯಲ್ಲೊಬ್ಬಳು ಸೊಸೆ ಇರುತ್ತಿದ್ದರೆ ಎಲ್ಲವನ್ನೂ ಅವಳೇ ನೋಡಿಕೊಳ್ಳುತ್ತಿದ್ದಳು. ಮಾಧವರಾಯರೂ ಈ ವಿಷಯದಲ್ಲಿ ಯೋಚನೆ ಮಾಡದೆ ಇಲ್ಲ. ಅವರಿಗೂ ಒಮ್ಮೊಮ್ಮೆ ತಮ್ಮ ಹೆಂಡತಿಯನ್ನು ಕಂಡರೆ ' ಪಾಪ ! ಎಷ್ಟು ಕಷ್ಟಪಡುತ್ತಾಳೆ ' ಅನಿಸುತ್ತಿತ್ತು. ಆದರೆ ಮಾಡುವುದೇನು ? ಸಮಯ ಬಂದರೆ ಎಲ್ಲಾ ತನ್ನಷ್ಟಕ್ಕೇ ಆಗುತ್ತೆ ಎಂಬುದೆ ಮಾಧವರಾಯರ ನಿಶ್ಚಯ. ಪ್ರಕಾಶನಿಗೂ ಮದುವೆಯಾಗದೆ ಸಿಟ್ಟೇನೊ ಬರುತ್ತಿದೆ. ಆದರೆ ಸಮಯಕ್ಕಾಗಿ ದಾರಿ ಕಾಯುತ್ತಿಬೇಕು.

ಎಲೆ ಹಾಕಬೇಕು, ಬಡಿಸಬೇಕು—ಎನ್ನುವ ಹೊತ್ತಿಗೆ ಬಾಳೆಯೆಲೆಗಳನ್ನು ಸುಬ್ಬರಾಯರು ಕುಳಿತಲ್ಲಿಯೆ ಕತ್ತರಿಸಿ ಉಜ್ಜಿ ಸಿದ್ಧವಾಗಿರಿಸಿದರು.

ಆಳುಮಕ್ಕಳಿಬ್ಬರು ಎರಡು ಬೆಡ್ಡಿಂಗ್, ಎರಡು ದೊಡ್ಡ ಉಕ್ಕಿನ ಟ್ರಂಕ್ ಹೊತ್ತುಕೊಂಡು ತಂದು ಮಾಧವರಾಯರ ಜಗಲಿಯಲ್ಲಿರಿಸಿದರು. ಉಳಿದೆಲ್ಲ ಸಾಮಗ್ರಿಗಳೊಂದಿಗೆ ಅತಿಥಿಗಳು ಜಟಕಾದಲ್ಲಿ ಬಂದಿಳಿದರು. ಗಂಡನ ದನಿ ಕೇಳಿ ಕಾವೇರಮ್ಮ ಹೊರಗೆ ಬಂದು, " ಏನಮ್ಮ, ಈಗಲಾದರೂ ನಮ್ಮ ಮನೆಗೆ ದಾರಿ ಕಾಣಿಸಿತೆ ? " ಎನ್ನುತ್ತ ಪದ್ಮಮ್ಮನನ್ನು ಒಳಗೆ ಕರೆದೊಯ್ದರು. ಅದಕ್ಕೆ ಪದ್ಮಮ್ಮ ಏನೂ ಉತ್ತರಿಸಲಿಲ್ಲ; ಬರೇ ಹಲ್ಲುಬಿಟ್ಟರು, ಮಾತ್ರ. ಮಥುರಾನಾಥರು ಸುಬ್ಬರಾಯರೊಡನೆ ಮಾತಾಡಲೋಸುಗ ಅವರ ಸಮೀಪಕ್ಕೆ ನಡೆಯುವಷ್ಟರಲ್ಲಿ, " ಹಾಂ ! ಕುಳಿತುಕೊಳ್ಬಾರದ್ದು ! ಮೊದಲು ಮಿಂದು ಊಟವಾಗಬೇಕು. ಅನಂತರ ಕೂತು ಸಾವಕಾಶವಾಗಿ ಮಾತಾಡೋಣ. ಕೂತರೆ ಮತ್ತೆ ಸಮಯ ಹೋಗೋದು ತಿಳಿಯೋದಿಲ್ಲ " ಎಂದರು ಮಾಧವರಾಯರು. ಸುಬ್ಬರಾಯರೂ ಅದಕ್ಕೆ ಪ್ರೋತ್ಸಾಹ ಕೊಟ್ಟರು.

ಊಟವಾದೊಡನೆ ಮಥುರಾನಾಥರಿಗೆ ಕೂಡುವುದಾಗಲಿಲ್ಲ. ವಿಪರೀತ

ಉಷ್ಣವಾಗಿದ್ದರೂ ಅಲ್ಲಿ ಗಾಳಿ ಸಂಚಾರವು ಹೆಚ್ಚಿದ್ದುದರಿಂದ ಅವರು ಜಗಲಿಯಲ್ಲಿ ಹುಲ್ಲಿನ ಹಸೆ ಬಿಡಿಸಿ ಮಲಗಿದರು. ಹಗಲಾಗಿದ್ದರೂ ನಿದ್ದೆ ಹತ್ತಿತು. ಯಾರೂ ಅವರನ್ನು ಎಬ್ಬಿಸುವುವಕ್ಕೆ ಹೋಗಲಿಲ್ಲ.

ಒಳಗೆ ಹೆಂಗಸರಿಬ್ಬರ ಊಟವಾಗುತ್ತಿತ್ತು. ಪದ್ಮಮ್ಮನಿಗೆ ಯಾವಾಗಲೂ ಪದಾರ್ಥಗಳಿಗೆ ಉಪ್ಪು ಸ್ವಲ್ಪ ಹೆಚ್ಚು ಬೇಕು. ಅಂತೆಯೆ ಪದ್ಮಮ್ಮ "ಉಪ್ಪು ಕೊಡಿ, ಕಾವೇರಮ್ಮ" ಎಂದರು ಬಡಿಸುತ್ತಿದ್ದ ಕಾವೇರಮ್ಮನೊಡನೆ. ಕಾವೇರಮ್ಮನಿಗೆ ಸಿಡಿಲು ಬಡಿದಂತಾಯಿತು ತಲೆಗೆ! ಹಾಗೆಂದು 'ಇಲ್ಲ!' ಅನ್ನುವುದೆ? ಉಪ್ಪಿನ ಮರವೆಯನ್ನೆ ತಲೆಕೆಳಗೆ ಮಾಡಿದರು, ಆಗಲಿಲ್ಲ. ಸೌಟಿನ ಕಡೆ ಹಿಡಿದು ಮರವೆಯ ಮೂಲೆ ಮೂಲೆಗೆ ಕುತ್ತಿ ಸಿಕ್ಕಿದ್ದನ್ನು ಒಟ್ಟು ಮಾಡಿ ಪದ್ಮಮ್ಮನ ಎಲೆಯಲ್ಲಿ ಹಾಕಿದರು. ಇನ್ನು ಕೇಳಿದರೆ ಕಾವೇರಮ್ಮನ ಮರಣಕ್ಕೆ ಉಪ್ಪು ಹೇತುವಾಗಬಹುದು! ಮರ್ಯಾದೆ ಉಳಿಸಿಕೊಳ್ಳೋದು ಬೇಡವೆ? ಆದ್ದರಿಂದ ಇನ್ನು ಪದ್ಮಮ್ಮ ಉಪ್ಪು ಕೇಳಿದರೆ ಅಡಿಗೆಕೋಣೆಯಲ್ಲಿ ನೇಣು ಹಾಕಿಕೊಳ್ಳುವುದು ಎಂದು ನಿರ್ಧರಿಸಿದ್ದರು, ಕಾವೇರಮ್ಮ. ಪುಣ್ಯಕ್ಕೆ ಕೇಳಲಿಲ್ಲ! ಪದ್ಮಮ್ಮ ಹೊಟ್ಟೆ ತುಂಬಾ ಊಟ ಮಾಡಿ ಎಲೆ ಮಡಿಸಿ ಏಳಲನುವಾಗುತ್ತ, "ಉಪ್ಪು ಮಾತ್ರ ಎಲ್ಲದಕ್ಕೂ ಸ್ವಲ್ಪ ಕಡಿಮೆಯಾಯ್ತು. ಇಲ್ಲವಾದರೆ ಪರಮಾನ್ನ ಭೋಜನವೆಂದೆ ಹೇಳುತ್ತಿದ್ದೆ, ಊಟಕ್ಕೆ" ಎಂದರು. ಪದ್ಮಮ್ಮನ ಈ ಮಾತು ಹೊಗಳಿಕೆಯದ್ದಾಗಲಿ ದರ್ಪದ್ದಾಗಲಿ ಏನೂ ಅಲ್ಲ, ಸಹಜವಾದದ್ದೆ. ಕಾವೇರಮ್ಮನ ಕೈ ಎಂದರೆ ಪಾಕಶಾಸ್ತ್ರದಲ್ಲಿ ಸಾಧಾರಣವಾಗಿ ಎಲ್ಲ ಸ್ತ್ರೀಯರಿಗಿಂತಲೂ ಮೇಲು. ಅವರ ಅಡಿಗೆ ಉಂಡವರೆಲ್ಲ ಹಾಗೆ ಹೇಳಿದ್ದಾರೆ. ಅವರಲ್ಲೂ ಪಳಗಿದ ಕೈ ನೋಡಿ! ಮತ್ತೊಂದು, ಕೆಲವರು ಅಡಿಗೆ ಮಾಡಿದರೆ ಅವರ ಮನಸ್ಸಿನ ಹಾಗೆಯೆ ಆಗಿ ಹೋಗುತ್ತದಂತೆ! ಅಂದರೆ ಕೆಟ್ಟ ಮನಸ್ಸಿನಿಂದ ಮಾಡಿದರೆ ಕೆಟ್ಟು ಹೋಗುತ್ತದೆ, ಒಳ್ಳೆ ಮನಸ್ಸಿನಿಂದ ಮಾಡಿದರೆ ಒಳ್ಳೆದಾಗುತ್ತದೆ ಅಂತ! ಕಾವೇರಮ್ಮನದು ಯಾರಿಗಾದರೂ ಕೊಡಬೇಕು, ತೃಪ್ತಿಪಡಿಸಬೇಕು, ಸಂತೋಷಪಡಿಸಬೇಕು ಎಂಬ ಹೃದಯ. ಅಂಥವರು ಮಾಡಿದ್ದು ಕೆಡುವುದು ಹೇಗೆ? ಪಾಪ! ಕಾವೇರಮ್ಮ ಹೇಳಿದ ಸಾಮಾನುಗಳನ್ನು ಮಾಧವರಾಯರು ಸರಿಯಾಗಿ ತಂದು ಕೊಡದಿದ್ದರೆ, ಅವರೇನು ಮಾಡುವುದು? ಉಪ್ಪಿಲ್ಲದ್ದರಿಂದ ಹಾಗಾಯಿತು. ಅವರಾದ್ದರಿಂದ

ಇದ್ದದ್ದರಲ್ಲೆ ಸುಧಾರಿಸಿ ಅಷ್ಟಾದರೂ ಮಾಡಿದರು. ಬೇರೆ ಯಾರಾದರೂ ಆಗಿರುತ್ತಿದ್ದರೆ ಇಲ್ಲದ ರಂಭಾಟ ಮಾಡಿ!........ಇನ್ನು ಹೆಚ್ಚು ಹೇಳಲೇಕೆ? ಅವರ ಮಗ ಪ್ರಕಾಶ ಮದುವೆಯಾಗಲಿರುವ ಹೆಂಡತಿಯ ವಿಷಯದಲ್ಲಿ, ಓದು ಬರಹ ಬಲ್ಲವಳಾಗಿರಬೇಕೇನೊ ಸಹಜವೆ, ಆದರೆ........ಆಕೆ ತನ್ನ ತಾಯಿಯಂತೆ ಇದ್ದದ್ದರಲ್ಲಿ ಸಾಗಿಸುವ ಪಾಕಶಾಸ್ತ್ರಪ್ರವೀಣೆಯಾಗಿದ್ದರೆ ಒಳ್ಳೆಯದು, ಎಂಬ ಆಲೋಚನೆಯಲ್ಲಿ ಇದ್ದಾನೆ! ಪದ್ಮಮ್ಮನ ಮಾತು ಕೇಳಿ ಕಾವೇರಮ್ಮ ತಮ್ಮ ಮರ್ಯಾದೆ ಗೌರವಗಳನ್ನು ಉಳಿಸಿಕೊಳ್ಳಲು, " ಇದೇ ಹೆಚ್ಚೆಂತ ಅವರು ಕೋಪಿಸಿಕೊಂಡರು. ಇಲ್ಲಿ ಉಪ್ಪು ತಿನ್ನುವವಳೆಂದರೆ ನಾನೆ! ತಂದೆ ಮಕ್ಕಳಿಬ್ಬರಿಗೂ ಉಪ್ಪೆಂದರೆ ಶತ್ರು!" ಎಂದು ಚಿಕ್ಕ ಭಾಷಣ ಮಾಡಿದರು. ಆದರೆ ಆಗಲೆ ಪದ್ಮಮ್ಮ ಉಂಡ ಎಲೆಯನ್ನು ಸುತ್ತಿ ಹಿಡಿದುಕೊಂಡಿದ್ದುದನ್ನು ನೋಡಿ, " ಇದೇನು ಪದ್ಮಮ್ಮ ? ಛೆ! ನಾನ್ತೆಗೀತೇನೆ. ಅಲ್ಲಿಡಿ! ಹೂಂ, ಹುಂ! ಅಲ್ಲಿಡಿ!" ಎಂದರು. ಅದಕ್ಕೇ ಕಾದು ಕುಳಿತಿದ್ದ ಪದ್ಮಮ್ಮ ಎಲೆಯನ್ನು ಅಲ್ಲಿಯೆ ಇಟ್ಟು, ಎದ್ದು ಹೋಗಿ ಕೈ ತೊಳೆದು ಸೀರೆಯ ಸೆರಗಿನಿಂದ ಕೈಯುಜ್ಜಿಕೊಳ್ಳುತ್ತ ಜಗಲಿಗೆ ವೀಳ್ಯೆ ತಟ್ಟೆಯಿದೆಯೆ ಎಂದು ನೋಡಲು ಹೋದರು. ಆದರೆ ಅದನ್ನು ತಮ್ಮ ಹತ್ತಿರವಿಟ್ಟುಕೊಂಡು ಗೊರಕೆ ಹೊಡೆಯುತ್ತಿದ್ದರು, ಮಾಧವರಾಯರು.

ಕಾವೇರಮ್ಮನೆದ್ದು ಚಿಕ್ಕಪುಟ್ಟ ಕೆಲಸಗಳನ್ನು ಮಾಡಿಬಿಟ್ಟು ಪದ್ಮಮ್ಮನಿಗೆ ತಾಂಬೂಲ ತಟ್ಟೆ ತಂದು ಕೊಡೋಣ ಎಂದು ಹೊರಬಂದು ನೋಡಲು, ಅದಿದ್ದ ಸ್ಥಳ ನೋಡಿ, 'ಹಾಂ! ಆದನ್ನು ತೆಗೀಲಿಕ್ಕೆ ಹೋದರೆ ಮೈಮೇಲೆ ಹಾರಿಬಿದ್ದಾರು, ನಿದ್ದೆಯಲ್ಲಿರುವಾಗ!' ಎಂದುಕೊಂಡು, ಒಳಗೆ ಹೋಗಿ ಬೇರೆ ಒಂದು ಹರಿವಾಣ ಹುಡಕಿ, ಅದರಲ್ಲಿ ಎಲೆಯಡಿಕೆ ಹಾಕಿ ಪದ್ಮಮ್ಮನಿದಿರಿಗೆ ತಂದಿಟ್ಟರು. ವೀಳ್ಯೆ ಹಾಕಿದ ತರುವಾಯ ಒಂದು ದೊಡ್ಡ ಜಮಖಾನೆಯನ್ನು ಅಲ್ಲೇ ನಡುಕೋಣೆಯಲ್ಲಿ ಹಾಸಿ ಮಲಗಿ, ಇಬ್ಬರೂ 'ಅದು–ಇದು' ಎಂದು ತ್ರಿಕಾಲ ಸಂಭಾಷಣೆಗಾರಂಭಿಸಿದರು.

ಆಡುತ್ತಾಡುತ್ತ ಕಾವೇರಮ್ಮನಿಗೆ ಹಿರಿಯ ಮಗಳ ನೆನಪಾಯಿತು. ಕಣ್ಣುಗಳಲ್ಲಿ ನೀರು ತಂದುಕೊಂಡರು. ಅವಳಾದರೂ ಇರುತ್ತಿದ್ದರೆ ಕಾವೇರಮ್ಮನಿಗೆ ಸುಮ್ಮನೆ ಕುಳಿತು ಉಣ್ಣಬಹುದಿತ್ತು ಈಗ. ನೇಮ ಕೂಡ ಹಾಕುವುದು

ಬೇಡವಿತ್ತು! ಮನೆಗೆಲಸದಲ್ಲಿ ಹಿಂಜರಿದವಳಲ್ಲ ಅವಳು. ಅವಳಿರುವಾಗ ಅನುಭವಿಸಿದ ಆ ಸುಖದ ಅರಿವು ಈಗ ತಾನೆ ಕಾವೇರಮ್ಮನಿಗೆ ಆಗುತ್ತಿದೆ. ಅವಳು ಅಂದು ಬಡಿಸಿ ಉಂಡ ಅನ್ನದ ರುಚಿ ಈಗಲೂ ನೆನಪಿಗೆ ಬರುತ್ತಿತ್ತು! ಗತಿವಿಹೀನಳಾಗಿ, ತಂದೆತಾಯಿಗಳಿರುವರು ಎಂಬಾಸೆಯಿಂದ ಮನೆಯ ಕಡೆ ಬಂದು ನಿಂತು ದೈನ್ಯಭಾವದಿಂದ ಅಳುತ್ತ ಇಂಬು ಬೇಡಿದ ಬಾಡಿದ ಮುಖ ಈಗಲೂ ಕಾವೇರಮ್ಮನಿಗೆ ತಮ್ಮ ಕಣ್ಣುಗಳ ಮುಂದೆ ಕಟ್ಟಿದಂತೆ ಸುಳಿದಾಡು ವಂತಿತ್ತು! ಆಗ ಲೋಕನಿಂದೆಗೆ ಹೆದರಿ ಮಗಳಿಗಾಶ್ರಯವೀಯದ ಪತಿಯ ಅನುಜ್ಞೆಯನ್ನೆ ಅನುಸರಿಸಿದುದಕ್ಕಾಗಿ ತಮ್ಮನ್ನು ತಾವೇ ಜರಿದುಕೊಂಡರು.

ಮನುಷ್ಯನಿಗೆ ಬುದ್ಧಿಯಿದ್ದರೆ ಸಾಲದು! ಅದನ್ನು ಆಯಾಯ ಸಮಯ ಗಳಲ್ಲಿ, ಆಯಾಯ ಸ್ಥಳಗಳಲ್ಲಿ ಉಪಯೋಗಿಸಲು ಅರಿತಿರಬೇಕು. ಅಂದರೆ ಪ್ರತಿಯೊಬ್ಬನೂ ತನ್ನ ಬುದ್ಧಿಯನ್ನು ಏಕೆ, ಎಲ್ಲಿ, ಯಾವಾಗ, ಹೇಗೆ ಪ್ರಯೋಗಿಸಲು ತಿಳಿದವನಾಗಿರುವುದು. ಇಲ್ಲವಾದರೆ ಕಣ್ಣಿದ್ದೂ ಕುರುಡನಂತೆ!

ಸಂಭಾಷಣೆಯಾಗುತ್ತಿದ್ದಂತೆ ಇಬ್ಬರಿಗೂ ನಿದ್ದೆ ಬಂದು ಹಾಯಾಗಿ ಕಣ್ಣು ಮುಚ್ಚಿದರು.

ಸುಬ್ಬರಾಯರು ಮಾತ್ರ ಜಗಲಿಯಲ್ಲಿ ಒಂದು ಹುಲ್ಲಿನ ಹಸೆ ಹಾಸಿ ಮಲಗಿದ್ದರಾದರೂ ಎಚ್ಚರಾಗಿದ್ದರು. ವಿಚಾರಪ್ರಪಂಚದಲ್ಲಿದ್ದರು. ಹಾಗಿರು ವಾಗ ನಿದ್ದೆ ಬರುವುದಾದರೂ ಹೇಗೆ? ಕಿಶೋರನೇಕೆ ತಮ್ಮನ್ನು ಬಿಟ್ಟು ವಿನಾಕಾರಣ ಹೋದ?—ಎಂಬುದೇ ಆ ವಿಚಾರ.

* * * *

ಪಾರಮ್ಮನನ್ನು ಗಾಡಿಯಲ್ಲಿ ಹಾಕಿ ಮಥುರಾನಾಥರ ಭವನದಲ್ಲಿ ತಂದು ಹಾಕಿದ್ದುದರಿಂದ, ವೈಯಲುಗಿ ರೋಗ ಉನ್ನತಶಿಖರಕ್ಕೇರಿತು. ಅಂದು ಇಡಿ ರಾತ್ರಿ ರೆಪ್ಪೆ ಹಾಕದೆ ರಂಗಮ್ಮ ಪಕ್ಕದಲ್ಲಿದ್ದು ಆರೈಕೆ ಮಾಡುತ್ತಿದ್ದಳು. ಪಾರಮ್ಮನ ಆಯುಸ್ಸು ಬೆಳಗಾಗುವುದರೊಳಗೆ ತುಂಬುವುದೊ ಎಂಬ ಸಂದೇಹ ರಂಗಮ್ಮನಿಗೆ ಬರದಿರಲಿಲ್ಲ.

ಬೆಳಿಗ್ಗೆ ಹೊತ್ತು ಮೂಡಲು ಇನ್ನೂ ಸ್ವಲ್ಪ ಸಮಯವಿದೆಯೆನ್ನುವಾಗ ರಂಗಮ್ಮ ಪಾರಮ್ಮನ ಬಾಯಿಗೆ ತುಳಸಿದಳ ನೀರು ಬಿಟ್ಟಳು. ಆಗಲೆ ಪಾರಮ್ಮನ ಪ್ರಾಣವಾಯು ಅವಳ ಅಸ್ಥಿಪಂಜರದೊಳಗಿಂದ ಎಲ್ಲೋ ಹಾರಿ ಹೋಯಿತು.

ಆಕಾಶದ ಸೂರ್ಯನಿಗೂ ಮಣ್ಣೊಳಗಿನ ಹುಳಕ್ಕೂ ಎಷ್ಟು ವ್ಯತ್ಯಾಸ ವಿದೆಯೊ ಅಷ್ಟೇ ವ್ಯತ್ಯಾಸವು ಪಾರಮ್ಮನ ಗುಡಿಸಲಿಗೂ ಮಥುರಾನಾಥರ ಅರಮನೆಯಂಥ ಆನಂದ ಭವನಕ್ಕೂ ಇತ್ತು. ಆದರೆ ಪಾರಮ್ಮನ ಮರಣ ವಾದುದ್ದು ಆ ಭವನದಲ್ಲಿ !

* * * *

ರೇಶನ್ ಕಾಲವಾದ್ದರಿಂದ ರಾತ್ರಿಗೆ ಊಟವೆಲ್ಲಿಯದು ? ಕಾಫಿ-ಫಲಾಹಾರ ವಾಯಿತು. ಮಥುರಾನಾಥರಾಯರು ಆರಾಮಾಸನದಲ್ಲಿ ಕುಳಿತಿದ್ದರು. ಭಾವಂದಿರಿಬ್ಬರೂ ಹುಲ್ಲಿನ ಹಸೆ ಬಿಡಿಸಿ ಕುಳಿತಿದ್ದರು. ಕಾವೇರಮ್ಮನೂ ಪದ್ಮಮ್ಮನೂ ಅಲ್ಲೇ ಮುಂಬಾಗಿಲಲ್ಲಿ ಅರೆಮರೆಯಾಗಿ ಕುಳಿತು ಹೊರಗಾಗುತ್ತಿದ್ದ ಸಂಭಾಷಣೆ ಕೇಳುತ್ತಿದ್ದರು.

ಪ್ರಕಾಶನೂ ಅನಂತನೂ ಉಪಾಹಾರ ತೀರಿಸಿಕೊಂಡು, ಅವರ ಮಾತಿನ ಭರದಲ್ಲಿ ಮಲಗಿದರೆ ನಿದ್ದೆ ಬರಲಿಕ್ಕಿಲ್ಲ ಎಂದುಕೊಂಡು, ಸಿನಿಮ ನೋಡಲು ಹೋಗಿಬಿಟ್ಟರು.

ಮೂವರಲ್ಲಿ ಹಿರಿಯರು ಸುಬ್ಬರಾಯರು. ಅವರೇ,

" ನಿಮ್ಮ ಮೈದುನನಿಗೇನೊ ಮದುವೆ ನಿಶ್ಚಯ ಮಾಡಿದ್ದೀರಂತಲ್ಲ, ಹಾಗೆ ಸುದ್ದಿಯಿತ್ತು, ಏನಾಯ್ತು ? " ಎಂದರು.

" ಹೌದು. ಅವನಿಗೆ ಈಗಾಗಲೆ ಮದನಪಲ್ಲಿಗೆ ವರ್ಗವಾಗಿಬಿಟ್ಟದ್ದರಿಂದ ಅದನ್ನು ಆರು ತಿಂಗಳು ಮುಂದೂಡಿದೆ. ಏನು ಮಾಡುವುದು ? ಈ ಸರಕಾರದ ಕೆಲಸವೇ ಹಾಗೆ. ಹೇಳಿದ ಕಡೆಗೆಲ್ಲಾ ನಾಯಿಯಂತೆ ಅಲೆಯಬೇಕು. ಏನಾಗಿ ಏನು ಪ್ರಯೋಜನ ? "

" ಅದು ಸರಿ ; ನಾನೊಂದು ಮಾತು ಕೇಳ್ಬೇಕಂತ........ತಮ್ಮ ಮನಸ್ಸಿಗೇನೂ ಬೇಸರವಿಲ್ಲಾಂತಾದಲ್ಲಿ........" ಎಂದು ಮಾಧವರಾಯರೆಂದರು.

" ಛೆ ! ಛೆ ! ಅದೇನೂ ಇಲ್ಲ. ಧಾರಾಳವಾಗಿ ಕೇಳಿ. ನನ್ನ ಹೃದಯ ಗೊತ್ತಿಲ್ಲವೆ ನಿಮಗೆ ? "

" ತೇಜಪಾಲನಿಗೆ ಹುಡುಗಿಯನ್ನು ಎಲ್ಲಿಂದ ಆರಿಸಿದ್ದೀರಿ ? "

" ಅದೇ—ನಮ್ಮ ಆಶ್ರಮದಲ್ಲಿ ಒಂದು ಹೆಣ್ಣು ಮಗು ಬೆಳೆಯುತ್ತಿದೆ. ಅವಳಿಗೆ ಲಗ್ನದ ವಯಸ್ಸಾಗಿದೆ. ಯೋಚಿಸಿ, ಅವಳನ್ನೇ ನಿಶ್ಚಯಿಸಿದೆ."

" ಅವಳು ನಮ್ಮ ಜಾತಿಯವಳೇ ಏನು ? "

" ನಿಮ್ಮ ಪ್ರಶ್ನೆ ಅರ್ಥವಾಗಲಿಲ್ಲವಲ್ಲಾ ! "

" ವರನಿಗೊಂದು ವಧು ನೋಡುವಾಗ ಅದರ ಕುಲಗೋತ್ರಗಳನ್ನು ನೋಡಬೇಕೆಂಬ ನೀತಿ, ನಿಯಮ ಇದೇಲ್ವೆ ? "

" ಅದೇನೂ ನಿಜವೆ. ಎಲ್ಲರೂ ಹಾಗೇ ಹೇಳುತ್ತಾರೆ. ಎಲ್ಲೋ ದಾರಿಯಲ್ಲಿ ಹೆಕ್ಕ ಸಿಕ್ಕಿದ ಮಗು, ಜಾತಿಯಿಲ್ಲ–ನೀತಿಯಿಲ್ಲ, ಕುಲವಿಲ್ಲ–ಗೋತ್ರವಿಲ್ಲ ಅಂತೆಲ್ಲಾ ಹೇಳ್ತಾರೆ. ನನಗೂ ಜಾತಿಮತಗಳಲ್ಲಿ ಹೆಚ್ಚಿನ ನಂಬಿಕೆಯಿಲ್ಲದಿದ್ದರೂ ನಮ್ಮ ಮನೆಯಲ್ಲಿ ಅವಳನ್ನು ತಂದಿರಿಸುವುದು ಹಿತವೆಂದು ಕಾಣುವುದಿಲ್ಲ ! ಆದರೆ ನನ್ನ ಮಾವನವರಿಗೆ ಅಂದರೆ ನಮ್ಮ ಮನೆಯವಳ ತಂದೆಯವರಿಗೆ ಇದರಲ್ಲಿ ಬಹಳ ಇಷ್ಟ. ಅವರಿಗೆ ಸಿಕ್ಕಿದ ಮಗುವದು. ಅದನ್ನು ಹೊರಗೆ ಕೊಡುವುದು ಅವರ ಮನಸ್ಸಿಗೆ ಬಹಳ ವೇದನೆಯಾಗುವಂತಿದೆ ! ಅವರ ಮನಸ್ಸನ್ನು ನೋಯಿಸುವುದೆಂದರೆ ಮಹಾಪರಾಧವಾಗಿ ಪರಿಣಮಿಸುತ್ತಿದೆ ! ಜಾತಿಮತಗಳಲ್ಲಿ ನಂಬಿಕೆಯೆಂದರೆ ಅವರಿಗೆ ಏನೆಂದು ಗೊತ್ತೇ ಇಲ್ಲ; ಆ ಮಟ್ಟಕ್ಕೆ ಮುಟ್ಟಿದ್ದಾರೆ ! ದೇವರ ದಯೆಯೊ ಎಂಬಂತೆ ತೇಜಪಾಲನೂ ವಧುವನ್ನು ನೋಡಿ ಸಮ್ಮತಿಸಿದ್ದಾನೆ " ಎಂದರು ಮಥುರಾನಾಥರಾಯರು.

" ಅವನು ಒಪ್ಪಬೇಕಾದರೆ.. .........ಅವನು ಒಪ್ಪಿಯಾದನೆಂದು ನಾವು ಕನಸಿನಲ್ಲೂ ನೆನಸಿರಲಿಲ್ಲ. ಏನೊ ಪುಣ್ಯಾತ್ಮ........ದೇವರೆ ಸಮಯದಲ್ಲಿ ಬುದ್ಧಿ ಕೊಟ್ಟನೆನ್ನಬೇಕು !........" ಎಂದು ತುಸು ಹಿಗ್ಗು ಹೆಮ್ಮೆಗಳಿಂದ ಕೂಡಿದವರಾಗಿ ತಮ್ಮ ಐ.ಸಿ.ಎಸ್. ಆದ ತಮ್ಮನ ಪ್ರಭಾವವನ್ನು ಅಲ್ಲಿ ಬಿಚ್ಚಿಡಲು ಒಳಗಿಂದಲೆ ಬಾಯಿಬಿಟ್ಟ ಪದ್ಮಮ್ಮ ಪ್ರಯತ್ನಿಸಿದರು.

" ವಿಲಾಯತಿಯಲ್ಲಿ ಸೂರ್ಯಬಿಂಬದಂಥ ನಿರಾಭರಣ ಸುಂದರಿಯರಾದ ಆಂಗ್ಲ ತರುಣಿಯರ ಮಧ್ಯೆ ಸುಳಿದಾಡುತ್ತಿದ್ದವನವ, ಮತ್ತೆ........" ಎಂದು ಸುಬ್ಬರಾಯರು ಅಲ್ಲಿಗೆ ನಿಲ್ಲಿಸಿದರು.

ಒಳಗೆ ಕಾವೇರಮ್ಮನೂ ಪದ್ಮಮ್ಮನೂ ಮುಖ ಮುಖ ನೋಡಿಕೊಂಡು ನಕ್ಕರು. ಕೆಲವು ಮುದುಕರು ಪ್ರಾಯವಾಗುತ್ತ ಹೋದ ಹಾಗೆ ಸದ್ಗುಣಿಗಳಾದಗುತ್ತಾರೆ ; ಇನ್ನು ಕೆಲವರು ಮುಂಗಮುಸುಡಿನ ಕ್ರೂರ ಸ್ವಭಾವಿಗಳಾಗುತ್ತಾರೆ. ಕಣ್ಣಿಗೆ ಕಂಡವರ ಮೇಲೆ ಹರಿಹಾಯ್ದು ಬೀಳುತ್ತಾರೆ. ಸುಬ್ಬರಾಯರು

ಮಥುರಾನಾಥರಿಂದ ತಟ್ಟೆ ಇಸುಕೊಂಡು ವೀಳ್ಯ ಹಾಕಿಕೊಂಡರು. ಮಾಧವ ರಾಯರು ಎದ್ದು ಬಂದು ಸುಬ್ಬರಾಯರ ಸಮೀಪವಿದ್ದುದನ್ನು ತಮ್ಮೆಡೆ ಒಯ್ದರು. ಆ ತಟ್ಟೆ ಬರಿದಾಗಿದ್ದುದನ್ನು ನೋಡಿದ ಹೆಂಗಸರಿಬ್ಬರೂ ಅದರ ಆಸೆಯನ್ನು ಬಿಟ್ಟುಬಿಟ್ಟರು.

" ದಾರಿಯಲ್ಲಿ ಸಿಕ್ಕಿದ ಮಗು ಎಂದು ಮಾತ್ರವೆ ಗೊತ್ತು—ನಮಗೆ. ಹೇಗೆ ? ಎಲ್ಲಿ ? ಅದರ ಕಥೆಯೇನು ? ಎಂಬುದೇನೂ ಗೊತ್ತಿಲ್ಲ. ಏನದು, ಸ್ವಲ್ಪ ಹೇಳಿ, ಕೇಳೋಣ ! " ಎಂದು ಮಾಧವರಾಯರು ಮಥುರಾನಾಥರ ಮುಖ ನೋಡಿದರು.

" ನಮ್ಮ ಮಾವನವರು ಮುಂಜಾನೆ ಎದ್ದು ಸ್ನಾನಕ್ಕೆ ಕೊಳಕ್ಕೆ ಹೋಗು ವುದು ವಾಡಿಕೆ. ಅಂತೆಯೆ ಅಂದೂ ಸ್ನಾನಾದಿಗಳನ್ನು ಮುಗಿಸಿಕೊಂಡು ಹಿಂದಿರುಗಿ ಬರುತ್ತಿರುವಾಗ ಒಂದು ಮಗುವಿನ ಅಳು ಕೇಳಿತಂತೆ. ಆ ಕಡೆ ಹೋಗಿ ನೋಡಿದಾಗ ಆ ಮಗುವನ್ನು ಚಿಗುರೆಲೆಗಳ ರಾಶಿಯ ಮಧ್ಯೆ ಮಲಗಿಸಿ ಅದರ ಎದೆಯ ಮೇಲೆ ಒಂದು ಪತ್ರವನ್ನಿಟ್ಟು, ಅದರ ಮೇಲೊಂದು ಉಂಗುರ ವನ್ನೂ ಇರಿಸಿತ್ತಂತೆ. ಅವರಿಗೆ ಇದನ್ನು ನೋಡಿ ಕನಿಕರವಾಗಿರಬೇಕು, ಎತ್ತಿ ಕೊಂಡು ಬಂದುಬಿಟ್ಟರು. ಹಾಗೆ, ನಮ್ಮ ಆಶ್ರಮದಲ್ಲೇ ಬೆಳೆಯುತ್ತ ಬಂತು. ಈಗಲೂ ಬೆಳೆಯುತ್ತಿದಾಳೆ........" ಎಂದು ಮಥುರಾನಾಥರು ವಿಷಯವನ್ನು ವಿಶದೀಕರಿಸಿದರು.

" ಆ ಪತ್ರದಲ್ಲಿ ಏನಿತ್ತೊ ? " ಎಂದು ಮಾಧವರಾಯರು ಕೇಳಬೇಕೆಂದು ಬಾಯಿ ತೆರೆಯುವಷ್ಟರಲ್ಲಿ ಕಾವೇರಮ್ಮ ಅದೇ ಪ್ರಶ್ನೆಯನ್ನು ಕುತೂಹಲದಿಂದ ಕೇಳಿದರು.

" ಏನೇನೋ ಬರೆದಿತ್ತು. ಮುಖ್ಯವಾಗಿ ಆ ಉಂಗುರದಲ್ಲಿದ್ದ ಅಕ್ಷರವೆ ಮಗುವಿಗೆ ಇಡುವ ಹೆಸರಿನ ಮೊದಲ ಅಕ್ಷರವಾಗಿರಬೇಕೆಂದು ಬರೆದಿತ್ತು. ಮತ್ತು ' ನನ್ನನ್ನು ಹುಡುಕುವ ಯತ್ನ ಮಾಡಬಾರದು ' ಅಂತ ಬರೆದಿತ್ತು."

" ಪತ್ರದಲ್ಲಿ ಹೆಸರು ಏನೂ ಇದ್ದಿಲ್ಲವೆ ? " ಎಂದು ಮಾಧವರಾಯರು ಕೇಳಿದರು.

" ಇಲ್ಲ. ' ಹತಭಾಗ್ಯೆ ! ' ಎಂದಿಷ್ಟು ಬರೆದಿತ್ತು, ಕೊನೆಯಲ್ಲಿ."

" ಆ ಉಂಗುರದಲ್ಲಿ ಯಾವ ಅಕ್ಷರ ಕೆತ್ತಿತ್ತು ? ಮತ್ತೆ ಆ ಉಂಗುರದ ವಿಷಯವಾಗಿ ಏನೂ ಬರೆದಿರಲಿಲ್ಲವೆ ? "

" ಉಂಗುರದ ವಿಷಯದಲ್ಲಿ........ಹಂ ಆ!........ಹೌದು, ' ಇದೇ ಮಗುವಿನ ತಂದೆಯ ಗುರುತು ' ಎಂದಿಷ್ಟೇ ಬರೆದಿತ್ತು. ಉಂಗುರದಲ್ಲಿ ' ವಿ ' ಎಂಬ ಅಕ್ಷರವನ್ನು ಕೊರೆದಿತ್ತು."

" ಮಗುವಿಗೆ ಹೆಸರೇನಿಟ್ಟಿದ್ದೀರಿ ? " ಎಂದು ಸುಬ್ಬರಾಯರ ಪ್ರಶ್ನೆ.

" ಅವರೆ, ನಮ್ಮ ಮಾವನವರೆ, ಸರಳನಾಮವೆ ಸಾಕೆಂದು ' ವಿಜಯ ಕುಮಾರಿ ' ಅಂತ ಇಟ್ಟರು."

" ಆ ಉಂಗುರವೂ ಪತ್ರವೂ ಇಲ್ಲಿದೆಯೆ ? " ಎಂದು ಕೇಳಿದರು ಸುಬ್ಬ ರಾಯರು.

" ಇಲ್ಲ, ಮನೆಯಲ್ಲಿದೆ. ಉಂಗುರ ಅವಳ ಬೆರಳಲ್ಲೆ ಇದೆ. ಏಕೆ ? "

ಸುಬ್ಬರಾಯರಿಗೆ ತಮ್ಮ ಹಿರಿಯ ಮಗನ ಜ್ಞಾಪಕವಾಗಿ ಮಥುರನಾಥರ ' ಏಕೆ ? ' ಎಂಬ ಪ್ರಶ್ನೆಗೆ ಯಾವ ಜವಾಬು ಕೊಡುವುದೆಂಬುದನ್ನರಿಯದೆ ಭ್ರಾಂತರಂತೆ ಕುಳಿತು ಯೋಚಿಸುತ್ತಿದ್ದರು. ಆದರೆ ಒಂದು ಶಂಕೆ! ವಿಜಯ ವಿವಾಹವಾಗಿ ಸುಖದ ಸಂಸಾರ ನಡೆಸುತ್ತಿದ್ದಾಗ ಒಂದು ಉಂಗುರ ಅವನ ಕೈಯಲ್ಲಿದ್ದುದು ಅವರಿಗೆ ಗೊತ್ತಿತ್ತು. ಆದರೆ ಅವನು ಹಸೆ ಹಿಡಿದ ತರುವಾಯ ಆ ಉಂಗುರವನ್ನು ಕಂಡಿರಲಿಲ್ಲ ಅವರು, ಅವನ ಕೈಯಲ್ಲಿ. ಪ್ರಾಯಶಃ ಈ ಉಂಗುರವು ಅವನದೆ ಆಗಿರಬಹುದೆ ? ಅಲ್ಲವೆ ?—ಎಂಬುದೆ ಅವರ ಶಂಕೆ. ನಿಜವೆ ? ' ಮನೆಯಿಂದ ಅಂದು ಸ್ವರ್ಣ ಮಾಯವಾದಾಗ ತುಂಬುಗರ್ಭಿಣಿ ಯಾಗಿದ್ದಳು ; ಈ ವಿಜಯಕುಮಾರಿ ನನ್ನ ಸೊಸೆ ಸ್ವರ್ಣಳ ಹೊಟ್ಟೆಯಲ್ಲಿ ಜನಿಸಿದ, ವಿಜಯನ ವಿಜಯಕುಮಾರಿಯಾಗಿರಬಹುದೆ ?........ಸ್ವರ್ಣ! ಎಂಥ ಹೆಸರದು! ಆ ಹೆಸರಿಗೆ ತಕ್ಕ ರೂಪ, ಗುಣ, ನಡತೆ! ಅವಳಿಂದು ಇರುತ್ತಿದ್ದರೆ ? ಹುಂ! ಹೇಳಿ ಏನು ಫಲ ? ನನ್ನನ್ನು ಇದ್ದಲ್ಲಿಂದೇಳಬಿಡದೆ ನೋಡಿಕೊಳ್ಳುತ್ತಿದ್ದಳು. ಪರರ ಹಿತವನ್ನು ಕೋರುವ ಅಂಥ ಸ್ವರ್ಣಮೂರ್ತಿ ಗಳನ್ನು ದೇವರು ಹೆಚ್ಚು ಕಾಲ ಲೋಕದಲ್ಲಿ ಇರಗೊಡದೆ ಬೇಗನೆ ತನ್ನೆಡೆಗೆ ಕರೆದುಕೊಳ್ಳುತ್ತಾನೆ! ನನ್ನಂಥ ಕಾಸಿಗುಪಯೋಗವಿಲ್ಲದ ಮುದಿಗೂಬೆಗಳ ನ್ನೇಕೆ ?........ ಅದು ನನ್ನ ಅಥವಾ ಅವರವರ ಕರ್ಮಫಲ! ಅದೆಂತಹ ಮಹಿಮೆ! ಈ ಹತ್ತು ಹದಿನ್ನೆದು ವರುಷಗಳೊಳಗಾದ ಮಾರ್ಪಾಡುಗಳೆಂತ ಹದು ? ಛೀ! ನಾನೇನನ್ನು ಯೋಚಿಸುತ್ತಿದ್ದೇನೆ ? ಎಲ್ಲಿಂದೆಲ್ಲಿಗೆ ಬಂದೆ ?

ವಿಜಯ........ಹೌದು, ವಿಜಯಕುಮಾರಿ. ವಿಜಯಕುಮಾರಿ ನನ್ನ ಮೊಮ್ಮಗಳಾಗಿರಬಹುದೆ? ಆಗಿರಬಾರದೇಕೆ? ನನ್ನ ವಿಜಯನ ಮಗಳು, ಹುಣಸೂರು ಗ್ರಾಮಕ್ಕೆ ಒಡೆಯಳಾಗುವ, ನನ್ನ ರಕ್ತಸಂಸರ್ಗಕ್ಕೆ ಸೇರಿದ, ವಂಶವರ್ಧಿನಿ ವಿಜಯಕುಮಾರಿಯಾಗಿರಬಾರದೇಕೆ? ಈ ಊಹೆಗಳೆಲ್ಲವೂ ನ ನ ಸಾ ಗಿ ಪರಿಣಮಿಸುವುದೆ? ಹಾಗಾಗದಿರಬಾರದೇಕೆ? ಹಾಗಿರಬಾರದೇಕೆ?'

ಮುಂತಾದ ಯೋಚನಾತರಂಗಗಳಲ್ಲಿ ಮುಳುಗಿದ್ದ ಸುಬ್ಬರಾಯರನ್ನು ನೋಡಿ ಎಲ್ಲರೂ ಅಚ್ಚರಿಗೊಂಡರು.

"ಭಾವ, ಏನದು?" ಎಂದು ಮಾಧವರಾಯರು ಸುಬ್ಬರಾಯರನ್ನು ಕೇಳಿದರು.

"ನಮ್ಮ ವಿಜಯನ ಕೈಯಲ್ಲೂ ಅಂತಹ ಒಂದು ಉಂಗುರವಿದ್ದುದು ನನ್ನ ಗಣನೆಗೆ ಬರುತ್ತಿದೆ."

"ಹೌದು, ನನಗೂ ನೆನಪಿದೆ. ಆದರೆ........"

"ನಿಜವಾಗಿರಬಾರದೇಕೆ? ನೋಡಿಬರಬೇಕೆಂಬ........"

"ನೋಡುವುದು—ಅದಕ್ಕೇನು?"

ಇವರ ಸಂಭಾಷಣೆಯನ್ನಾಲಿಸುತ್ತಿದ್ದ ಮಥುರಾನಾಥರಿಗೂ ಪದ್ಮಮ್ಮನಿಗೂ ಅದರ ಅರ್ಥವೇ ಆಗಲಿಲ್ಲ. ಒಬ್ಬರಿಗೊಬ್ಬರು ಪರಸ್ಪರ ನೋಡುತ್ತಿದ್ದರು. ಗಡಿಯಾರ ಹನ್ನೆರಡು ಹೊಡೆದು ತನ್ನ ಕರ್ತವ್ಯವನ್ನು ಮುಗಿಸಿಬಿಟ್ಟಿದ್ದಿತು. ಮಥುರಾನಾಥರನ್ನು ನಿದ್ದೆ ಕಾಡುತ್ತಿದ್ದಿತು. ಆದರೂ ಇವರ ಮಾತಿನ ಗೂಢವರಿಯಲು, "ಏನದು? ನಾವೂ ತಿಳಿಯಬಹುದೆ?" ಎಂದರು.

"ನೀವೇ ತಿಳಿಯಬೇಕಾಗಿದೆ. ನಿಮ್ಮಿಂದಲೆ ಎಲ್ಲ ಕಾರ್ಯವೂ ಆಗಬೇಕಾಗಿದೆ" ಎಂದು ಮಾಧವರಾಯರೆಂದರು.

"ನಿಮ್ಮಿಂದ ಕಾರ್ಯ ಸಾಧಿಸಿಕೊಳ್ಳಲು ನಾನು ಬಂದರೆ, ನೀವೇ ನನ್ನಿಂದ ಕಾರ್ಯ ಸಾಧಿಸಿಕೊಳ್ಳಲು ಹಾತೊರೆಯುತ್ತೀರಿ. ಸರಿ! ಅದರಲ್ಲೇನು? ಮನುಷ್ಯರಿಗೆ ಮನುಷ್ಯರಲ್ಲದೆ ಮತ್ಯಾರು ಸಹಾಯಮಾಡುವುದು? ವಿಷಯವೇನದು ಹೇಳಿ."

"ಇವರ—ಸುಬ್ಬರಾಯರ ಮಗನಿಗೆ ನನ್ನ ಮಗಳು ಸ್ವರ್ಣಳನ್ನು ಕೊಟ್ಟಿದ್ದೆವು........"

" ಹೌದು, ಗೊತ್ತಿದೆ. ಆದರೆ ನೋಡಲಿಲ್ಲ. ಆಗ ನಮ್ಮ ಸ್ಥಿತಿ ವಿಷಮ ವಾಗಿತ್ತು ! "

" ಅದರ ಅನಂತರ ನಡೆದುದೆಲ್ಲವೂ ನಿಮಗೆ ಗೊತ್ತಿದೆಯಲ್ಲವೆ ? ಅಂದರೆ ಸುಬ್ಬರಾಯರು ಹುಣಸೂರು ಗ್ರಾಮ ಬಿಟ್ಟು ಇಲ್ಲಿ ಬಂದು ವಾಸಿಸಲು ಕಾರಣ ? "

" ಸರಿಯಾದ, ಸ್ಪಷ್ಟವಾದ ಅರಿವೇನೂ ಇಲ್ಲ. ಅವರ ಮಡದಿ ಮಡಿದರು, ಉಳಿದ ವ್ಯವಹಾರಗಳಲ್ಲಿ ಇಲ್ಲಿಗೆ ಬಂದು ಹೋದುದು........ಮತ್ತು ಲೋಕದ ಜನರು ಏನೇನೋ ಹೇಳ್ತಾರೆ—ಅದನ್ನೆಲ್ಲಾ ನಂಬುವುದೂ ಇಲ್ಲ ! "

" ನಮ್ಮ ಅಳಿಯ, ಅಂದರೆ ಸುಬ್ಬರಾಯರ ಮಗ ತೀರಿಹೋದುದು ಗೊತ್ತಷ್ಟೆ ? "

" ಹೌದು. ಕಿರಿಯ ಮಗ ಒಬ್ಬ ಇದ್ದನಲ್ಲಾ........"

" ಹೇಳ್ತೀನೆ. ನಮ್ಮ ಮಗಳ ದುರದೃಷ್ಟವೆಂದೆ ಹೇಳಬೇಕು. ಜಾನಕೀ ಬಾಯಿಯವರ ಗುಣ ಸ್ವಲ್ಪ ಕಠಿಣ, ಸತ್ತು ದೈವವಾಗಿ ನಿಂತಿದ್ದಾರೆ, ಅವರ ವಿಷಯದಲ್ಲಿ ಇಲ್ಲದ್ದನ್ನು ಹೇಳಬಾರದು ! ಆದರೂ ನಿಮಗೋಸ್ಕರ ಇದ್ದದ್ದನ್ನೆಲ್ಲಾ ಹೇಳಬೇಕಾಗಿದೆ, ದೂರುವುದಲ್ಲ! ತನ್ನ ಗಂಡನ ಅನಾರೋಗ್ಯದ ಹೊತ್ತಿನಲ್ಲಿ ತಾನೇ ಡಾಕ್ಟರಲ್ಲಿಗೆ ಹೋಗಿ ಬರುತ್ತಿದ್ದಳು—ನಮ್ಮ ಮಗಳು. ಆಗ ಅವಳು ಬಿಟ್ಟರೆ ಬೇರೆ ಯಾರೂ ಇರಲಿಲ್ಲ ಮನೆಯಲ್ಲಿ........"

" ಸುಬ್ಬರಾಯರ ಕಿರಿಯ ಮಗನಿದ್ದಿರಲಿಲ್ಲವೆ ? "

" ಅವನು ಪರವೂರಲ್ಲಿ ವಿದ್ಯಾಭ್ಯಾಸ ಮಾಡ್ತಿದ್ದ. ದೇವರಿಗೆ ಗೊತ್ತು—ಸತ್ಯವನ್ನು, ಇದ್ದುದನ್ನು ಇದ್ದಂತೆ ಹೇಳಿಬಿಡುವೆ. ಸುಳ್ಳೊ ಸತ್ಯವೊ ನಾನರಿಯೆ. ಸುಳ್ಳಾಗಿದ್ದರೆ ಆ ಮಾತನ್ನು ಉಂಟುಮಾಡಿದವರ ಬಾಯಿಗೆ ಹುಳು ಬಿದ್ದೀತು ! ಸತ್ಯವಾಗಿದ್ದರೆ ಅದರ ಪಾಪಕರ್ಮ ಮಾಡಿದವರ ತಲೆಯ ಮೇಲೆ ! "

" ವಿಷಯವನ್ನು ಹೇಳಿರಿ."

" ಗಂಡನ ಮರಣ ಕಾಲದಲ್ಲಿ ನಮ್ಮ ಮಗಳು ಗರ್ಭಿಣಿಯಾಗಿದ್ದಳು. ಅವಳ ಮೇಲೆ ಸುಳ್ಳು ಅಪವಾದ ಹೊರಿಸಿದರು."

" ಏನೆಂದು ? ಸುಬ್ಬರಾಯರ ಕಿರಿಯ ಮಗನೂ ಮನೆಯಲ್ಲಿಲ್ಲವೆಂದಿರಿ ? "

" ಆ ಸಮಯಕ್ಕೆ ಬಂದುಬಿಟ್ಟಿದ್ದನು. ಆದರೆ ಅಪವಾದವು ಅವನಿಂದ

ಆಗಲಿಲ್ಲ. ಹೇಳಿದೆನಲ್ಲ....ಡಾಕ್ಟರ್ !........ಅದೇ ವ್ಯಥೆಯಿಂದಲೊ ಏನೊ, ಒಂದು ದಿನ ಹೇಳದೆ ಕೇಳದೆ ಮನೆಯಿಂದ ಹೊರಬಿದ್ದಳು—ನನ್ನ ಸ್ವರ್ಣ."

"ಯಾರಿಗೂ ತಿಳಿಯದೆ ?"

"ಅಂದೇ ಸುಬ್ಬರಾಯರ ಮಗ ಕಿಶೋರನೂ ಮಾಯವಾಗಿದ್ದ ! ಉಳಿದಿಬ್ಬರು ತಿಳೀಲಿಲ್ಲ."

"ಹಾಗಾದರೆ ?...."

"ಹೌದು ! ಲೋಕವೂ ಹಾಗೇ ಅನ್ನುತ್ತಿದೆ, ಈಗ ! ಆದರೆ ನೈಜವನ್ನು ದೇವರೇ ಬಲ್ಲ !"

"ಆಮೇಲೆ ನೀವವಳನ್ನು ಕಂಡದ್ದಾಗಲಿ ಕೇಳಿದ್ದಾಗಲಿ ಇಲ್ಲ ?"

"ಅಲ್ಲಿಂದ ಹೇಳದೆ-ಕೇಳದೆ ಹೊರಟವಳು ಇಲ್ಲಿಗೆ ಬಂದಳು. ಆದರೆ ನನ್ನ ಆತ್ಮಕ್ಕೆ ವಿರುದ್ಧವಾಗಿ ವರ್ತಿಸಲಾರದೆ ನಾವು ಅವಳನ್ನು ಒಳಗೆ ಬಿಡಲಿಲ್ಲ. ಆ ತರುವಾಯ ಸುದ್ದಿಯಿಲ್ಲ."

"ಕರೆದು ಕುಳ್ಳಿರಿಸದೆ, ಏನೆಂದು ವಿಚಾರಿಸದೆ, ಸತ್ಯಾಸತ್ಯವನ್ನರಿಯದೆ ಹಿಂದಕ್ಕಟ್ಟಿದುದು........ನೀವಿಬ್ಬರೂ ಹೆತ್ತ ತಾಯ್ತಂದೆಗಳಾಗಿ........"

"ಹೌದು ! ಈಗಷ್ಟೇ........" ಮುಂದೆ ಮಾಧವರಾಯರಿಗೆ ಮಾತಾಡುವುದಾಗಲಿಲ್ಲ.

ಅಷ್ಟರಲ್ಲೆ ಸಿನಿಮಾ ಪ್ರದರ್ಶನಕ್ಕೆ ತೆರಳಿದ್ದ ಅನಂತ ಪ್ರಕಾಶರು ಬಂದರು. ರಾತ್ರಿ ಒಂದು ಘಂಟೆ ಕಳೆದುಹೋಗಿದ್ದುದರಿಂದ ಮಥುರಾನಾಥರು ಊರಿಗೆ ಹಿಂದಿರುಗಿ ಹೋಗುನಾಗ ಅವರೊಂದಿಗೆ ಮಾಧವರಾಯರೂ ಹೋಗಿ ಎಲ್ಲವನ್ನೂ ಸ್ಪಷ್ಟೀಕರಿಸಿಕೊಂಡು ಬರುವುದಾಗಿ ನಿರ್ಣಯಿಸಿದರು.

ಮಥುರಾನಾಥರು ಮನೆ ಬಿಟ್ಟು ಮೂರು ದಿನವಾಗಿತ್ತು. ಅನಂತನನ್ನು ಬಿ.ಎ. ಕಾಲೇಜಿನಲ್ಲಿ ಜೂನಿಯರ್ ಬಿ.ಎ.ಗೆ ಸೇರಿಸಿಬಿಟ್ಟು, ಅನಂತರದ ಎಲ್ಲ ವ್ಯವಹಾರಗಳನ್ನೂ ಸರಿಪಡಿಸಿದುದೂ ಆಯಿತು. ಮರುದಿನ ಮುಂಜಾನೆ ಮಥುರಾನಾಥರಾಯರು ಮಗನನ್ನು ಬಿಟ್ಟು ಪತ್ನಿಯೊಂದಿಗೆ ಊರಿಗೆ ಹೊರಡುವವರು. ಮಾಧವರಾಯರೂ ಅವರೊಂದಿಗೆ ಹೊರಡಲು ಅನುವಾಗಿದ್ದಾರೆ. ಅಂದಿನ ರಾತ್ರಿ ನಿದ್ದೆಯೆ ಇಲ್ಲ !

೨೨

" ಎಂಥಾ ಶನಿಗಳಿವು ? ಎಲ್ಲಿ ಮುಖ ತಿರುಗಿಸಿದರೂ ಆ ಕಡೆ ತಿರುಗಿ ಕಣ್ಣಿಗೆ ಕಣ್ಣಿಟ್ಟು ನೋಡುತ್ತವೆ. ಬಾ. ನಾವು ಈ ಸ್ಥಳ ಬಿಡೋಣ."

" ಅವರು ನೋಡಿದ್ರೆ ನೋಡ್ಲಿ, ನೀನು ಮಾತ್ರ ನೋಡ್ಬೇಡ. ಅವರು ನೋಡೋದು ಅವರ ಕರ್ತವ್ಯ. ಅದೇ ಅವರ ಕಸಬು."

" ಹಾಂ ! ಹಂಗಾದ್ರೆ ಅವರು ವ್ಯಭಿಚಾರಿಣಿಯರೆ ? "

" ಸಂದೇಹವೆ ? "

" ನಿಮ್ಮಂತಹವರಿಗೆ ಇದೆಲ್ಲಾ ಗೊತ್ತು ! ಅವರ ಉಡುಪು ನೋಡಿದರೆ ದೊಡ್ಡವರ ಮನೆಯ ಹೆಣ್ಣುಮಕ್ಕಳಂತೆ ಕಾಣ್ತಾರಲ್ಲ."

" ನಿನಗೆ ಹಾಗೆ ಕಾಣಬಹುದು ! ಆದರೆ ಅವರ ಕಣ್ಣುಮನ, ಹಾವಭಾವ, ನೋಟ ಸಿಂಗಾರ ಎಲ್ಲಾ ಅವರ ಮುಖಲಕ್ಷಣದಿಂದಲೆ ತಿಳಿಯುವವರಿಗೆ ಹಾಗೆ ಕಾಣಲಾರದು. ವಿಷದ ಸರ್ಪವನ್ನಾದರೂ ನಂಬಿ ಅದರ ಹುತ್ತಕ್ಕೆ ಕೈಹಾಕ ಬಹುದು. ಆದರೆ...."

" ನಿನಗೆ ಇದೆಲ್ಲಾ ಹೇಗೆ ಗೊತ್ತು ? "

" ಈ ಪಟ್ಟಣದ ಬೀದಿಯ ' ದಿನಮಣಿ 'ಗಳಿವು. ಅಲ್ಲದೆ ಯಾರನ್ನು ನೋಡಿದರೂ ಅವರ ಕಣ್ಣುಗಳನ್ನು ನೋಡಿ ಇವನು ಇಂಥವ—ಇವಳು ಹೀಗೆ ಎಂಬುದನ್ನು ತಿಳಿದುಕೊಳ್ಳುವಷ್ಟು ಮಿದುಳು ಶಕ್ತಿ ನನಗಿದೆ. ನೀನೂ ಒಂದು ದಿನ ಆ ಪರೀಕ್ಷೆಗೆ ಒಳಪಡುವಿ ; ಆಗ ನಿನಗೂ ತಿಳಿದೀತು ! "

" ಹಾಗಾದ್ರೆ ನಿನ್ನ ಮತವೇನು, ಭಾವಯ್ಯ ? ಈ ಸ್ಥಳ ಬಿಡದೆ ಇಲ್ಲೇ ನಿಲ್ಲೋಣಾಂತಲೆ ? "

" ಹಾಂ ! ಆಗಬಾರದೇಕೆ ? ಈ ಸ್ಥಳ ಅವರ ಸೊತ್ತೇನು ? ಗಂಡಸರನ್ನು ನೋಡಿ ಮರ್ಯಾದೆಯಿಂದ ಅವರೇ ಇರ್‍ಬೇಕು ! ಅವರಿಗೆ ಅದಿಲ್ಲದಿದ್ರೆ ನಮ್ಮಿಂದ ಏನು ಮಾಡಲಾದೀತು ? ನಾವು ಗಂಡಸರಾಗಿ ಹೆಂಗಸರಿಗೆ ಹೆದರಿ ಓಡೋದೆ ? ಅವರು ನಮ್ಮನ್ನು ನೋಡಿದ ಮಾತ್ರದಲ್ಲಿ ಮಾಡೋದೇನಿದೆ ? ನಮ್ಮನ್ನು ಎಳೆ ದೊಯ್ಯೋದಂತೂ ಸಾಧ್ಯವಿಲ್ಲ ! ಅಲ್ಲದೆ ಈ ಜನಸಂದಣಿಯಲ್ಲಿ ನುಗ್ಗಿಕೊಂಡು ಹೋಗೋದಾದರೂ ಎಲ್ಲಿಗೆ ? ಇಂಥಾ ಸುರಕ್ಷಿತ ಜಾಗವನ್ನು ಬಿಟ್ಟುಬಿಟ್ಟು ? "

" ಅದಿರಲಿ. ಈಗ ಗಂಟೆ ಎಷ್ಟಾಯ್ತು ? "

" ಹನ್ನೆರಡಾಯ್ತು ? "

" ಇನ್ನೂ ಬಹಳ ಸಮಯವಿದೆಯೇನು, ತೇರು ಎಳೆಯಲಿಕ್ಕೆ ? "

" ಇಲ್ಲ, ಇಲ್ಲ. ಈಗ ಎಳೆದಾರು ? "

ಈ ಪ್ರಕಾರ ಅಂದು ಅನಂತ–ಪ್ರಕಾಶರು ರಥೋತ್ಸವಕ್ಕೆ ಹೋಗಿದ್ದಾಗ ಮಾತಾಡುತ್ತಿದ್ದರು. ಪ್ರಕಾಶನು ಹೊರನೋಟಕ್ಕೆ ಅವಿದ್ಯಾವಂತನಂತೆ ಕಂಡು ಬಂದರೂ ನಿಜವಾಗಿಯೂ ವಿದ್ಯಾವಂತನಾಗಿದ್ದನು. ಲೋಕವನ್ನು ಅರಿತಿದ್ದನು. ಸಮಾಜ ಹೇಗಿದೆ ಎಂಬುದನ್ನು ಅರಿತು, ಅದಕ್ಕನುಗುಣವಾಗಿ ನಡೆದುಕೊಂಡು ಹೋಗುತ್ತಿದ್ದನು. ಅನಂತ ಈಗಷ್ಟೇ ಸಮಾಜದ ಕಡೆಗೆ ಕಣ್ಣು ಬಿಡುತ್ತಿದ್ದಾನೆ. ಅವನಿಗಾಗ ಎಲ್ಲವೂ ವಿಚಿತ್ರವಾಗಿ ಕಾಣುತ್ತಿತ್ತು ! ನೋಟಕ್ಕೆ ಸಂಭಾವಿತ ಸ್ತ್ರೀಯರಂತೆ ಕಾಣುತ್ತಿರುವವರನ್ನು, ಪ್ರಕಾಶ, ಅವರು ಗಣಿಕೆಯರು, ಎಂದು ಹೇಳುವುದನ್ನು ಕೇಳುವಾಗ, ' ಅಬ್ಬಾ ! ಲೋಕ ಎಷ್ಟು ಭಯಂಕರವಾಗಿದೆ ಎಂದೆನಿಸುವುದು. ಈ ನಮ್ಮ ಸಮಾಜದ ಅಕ್ಕತಂಗಿಯರು ವ್ಯಭಿಚಾರಕ್ಕಿಳಿಯುವರೇಕೆ ? ಹೊಟ್ಟೆಗಿಲ್ಲದೆಯೆ ? ಅದಕ್ಕಾಗಿ ವ್ಯಭಿಚಾರವೇಕೆ ? ಒಬ್ಬರನ್ನೆ, ಅಂದರೆ ಇಚ್ಛಿತ ಪುರುಷನೊಬ್ಬನನ್ನೆ ಹೊಂದಿಕೊಂಡಿರಬಾರದೆ ? ಹಾಗೆ ಮಾಡಿದರೆ ಸ್ವತಂತ್ರ ಜೀವನಕ್ಕೆ ಧಕ್ಕೆ ತಾಗುವುದು ; ಈ ರೀತಿಯಾಗಿ ಯೋಚಿಸುತ್ತ ಮಲಗಿದ್ದ ಅನಂತ ಪ್ರಕಾಶನಿಗೆ ಒಂದು ಸವಾಲು ಹಾಕಿದ :

" ಭಾವಯ್ಯ, ನೀನೇ ಹೇಳಿದೆಯಲ್ಲ, ಅವರು ಸ್ವತಂತ್ರ ಜೀವಿಗಳಂತೆ. ಆದರೆ ಮಾನಗೆಟ್ಟು ಸಂಪಾದಿಸಿದ ಸ್ವತಂತ್ರ ಜೀವನ, ಅದು ಇಲಿಯ ಬಿಲದಂತೆ ಹಾಳು ಎಂಬುದನ್ನು ತಿಳಿದಿದ್ದೀಯಾ ? "

" ಅನಂತೂ, ನಿನ್ನ ಮಾತೇನೊ ಸಹಜವೆ ಆಗಿದೆ. ಆದರೆ.... ಅದಕ್ಕೊಂದು ಕಥೆ ಹೇಳ್ತೀನೆ ಕೇಳು. ನನ್ನ ಮಾವ ಜೀವಂತ ಇರುವಾಗ ಹೇಳಿದ ನಡೆದ ಒಂದು ಕಥೆಯಿದು. ಒಂದೂರಲ್ಲಿ—ಹಾಗೆಂದು ಬರೀ ಕಥೆ, ನಿಜ ಕಥೆಯ ಹಾಗೆ ಹೇಳ್ತಿದ್ದಾನೆ ಅಂತ ಭಾವಿಸಬೇಡ. ಯಾವ ಊರಂತ ಮರತುಹೋಗಿದೆ— ಯುವತಿಯೊಬ್ಬಳು, ಮಲ್ ಜಾತಿಯವಳಂತೆ. ಅವಳೊಬ್ಬ ಅಪಾರ ಸಿರಿವಂತ ಮುಸಲ್ಮಾನ ತರುಣನ ಮೇಲೆ ಆಸೆಯಿಟ್ಟಳು. ಅವನೂ ಅವಳಿಗೆ ಮರುಳಾದ. ಈ ಹುಡುಗಿಯ ತಂದೆತಾಯಿಗಳು ತೀರಿಕೊಂಡಿದ್ದರು.

ಚಿಕ್ಕಪ್ಪನ ಆಶ್ರಯದಲ್ಲಿ ಬೆಳೆದುಕೊಂಡು ಬರುತ್ತಿದ್ದಳು. ಮತ್ತೆ ಚಿಕ್ಕಮ್ಮನ ಹಿಂಸೆಯಂತೂ ಗೊತ್ತಿದೆಯಲ್ಲ! ಆಕೆ ಈ ಹುಡುಗಿಯನ್ನು ತಂದೆತಾಯಿಗಳು ಕೈಲಾಸಕ್ಕೆ ಸೇರಿದ್ದೇ ತಡ, ನಾಲ್ಕೋ ಐದರ ತರಗತಿಯಲ್ಲಿ ಕಲಿಯುತ್ತಿದ್ದವ ಳನ್ನು ಶಾಲೆಯಿಂದ ಬಿಡಿಸಿ ಮನೆಗೆಲಸಕ್ಕೂ—ಅಂಗಡಿಗೆ ಹೋಗಿ ಸಾಮಾನು ತರುವುದಕ್ಕೂ ನಿಲ್ಲಿಸಿಬಿಟ್ಟಳು. "ಸಾಕು, ಅಷ್ಟು ಕಲಿತದ್ದು, ಹೆಣ್ಣು ಎಷ್ಟು ಕಲಿತರೂ ಅಷ್ಟೇ; ಮಣ್ಣಿನ ಪಾತ್ರೆ ತೊಳೀಲಿಕ್ಕೆ ತಾನೆ ಕಡೆಗೆ? ನಾಳೆ ಒಬ್ಬನ ಮನೆಗೆ ಹೋಗುವ ಹುಡುಗಿ, ಮೊದಲು ಇದರಲ್ಲಿ ಪಾಸಾಗಬೇಕು!" ಎಂದು ಮುಂತಾಗಿ ಏನೇನೋ ಹೇಳಿದಳು. ಕಡೆಗೆ, ಅವರೊಳಗೆ ಮಾತಾಗಿ, ಆತ ಕರೆದುಕೊಂಡು ಹೋಗಿ ಆಕೆಯನ್ನು ರಿಜಿಸ್ಟರ್ ಮದುವೆ ಮಾಡಿಕೊಂಡ. ಈ ಗುಟ್ಟು ರಟ್ಟಾದಾಗ ಅವಳನ್ನು ಅವಳ ಕಕ್ಕ-ಕಕ್ಕಿಯರು ಹೊರಗೆ ಹಾಕಿ ಜಾತಿ ಯಿಂದ ಹೊರ ನೂಕಿದರಂತೆ. ಆಗರ್ಭ ಶ್ರೀಮಂತನಾದ ಆ ತರುಣ ಅವಳನ್ನು ತನ್ನ ಪಟ್ಟದ ರಾಣಿಯನ್ನಾಗಿ ಮಾಡಿಕೊಂಡನಂತೆ...."

"ಅವನಿಗೆ ಮೊದಲು ಮದುವೆಯಾಗಿರಲಿಲ್ಲವೆ?"

"ಇಲ್ಲ. ಕೇಳು, ಮಧ್ಯೆ ಮಾತಾಡಬೇಡ. ಆಮೇಲೆ ಅದೇ ಊರಲ್ಲಿ ಅವಳ ಹೆಸರಿನಲ್ಲಿ ಜಮೀನು ತೆಗೆದುಕೊಂಡು, ದೊಡ್ಡ ಬಂಗಲೆ ಕಟ್ಟಿಕೊಂಡು ಅದರಲ್ಲಿ ದಂಪತಿಗಳು ಜೀವನ ಮಾಡುತ್ತಾ ಸಂತೋಷದಿಂದ ಕಾಲ ಕಳೆಯು ತ್ತಿದ್ದರು. ಸಂಬಂಧಿಕರೆಲ್ಲರಿಗೂ ಅವಳ ಸ್ಥಿತಿ ನೋಡಿ ಹೊಟ್ಟೆಯುರಿ...."

"ಎಂಥಾ ಮನುಷ್ಯರು? ಈ ಜನರಿಗೆ ಒಬ್ಬರು ಸುಖಪಡುವುದನ್ನೂ ನೋಡಲಿಕ್ಕಾಗುವುದಿಲ್ಲ, ಕೆಟ್ಟದಾಗುವುದನ್ನೂ ನೋಡಲಿಕ್ಕಾಗುವುದಿಲ್ಲ! ಒಳ್ಳೆಯದಾದರೆ ಮಾತ್ರ, ತಾವು ಪುಣ್ಯ ಮಾಡಿದವರು, ಉಳಿದವರು ಪಾಪ ಮಾಡಿದವರು—ಎಂಥ ಹುಚ್ಚು ಕಲ್ಪನೆ! ಒಳ್ಳೆ ರೀತಿಯಲ್ಲೇ ಸತ್ಯದಿಂದಲೇ ಊರ್ಜಿತಾವಸ್ಥೆಗೆ ಬಂದಿದ್ದರೂ ಅದನ್ನು ತಿಳಿದಿದ್ದರೂ ಅನ್ಯಾಯದಲ್ಲೇ ಬಂದರು ಎಂದು ಊರೂರು ಹೇಳುತ್ತಾ ಬರುತ್ತಾರೆ ಹೊಟ್ಟೆಕಿಚ್ಚಿನಿಂದ! ಹಾಳಾಗಿ ಹೋದರೆ ಅದೂ ಕಷ್ಟ! ತಮ್ಮಲ್ಲಿಗೆ ಎಲ್ಲಿ ಏನಾದರೂ ಕೇಳಿಕೊಂಡು ಬಂದುಬಿಡುತ್ತಾರೊ ಎಂಬ ಹೆದರಿಕೆ ಅವರಿಗೆ!"

"ನಿನಗೂ ಸ್ವಲ್ಪ ಗೊತ್ತು ಸಮಾಜ ಎಂದರೆ ಏನೆಂದು? ಹೂಂ! ಇಲ್ಲಿ ಕೇಳು. ಎಲ್ಲಿ ನಿಲ್ಲಿಸಿದೆ?"

" ....ಹೊಟ್ಟೆಯುರಿ! "

" ಮಾಡುವುದೇನು? ಒಬ್ಬೊಬ್ಬರೆ ಗುಟ್ಟಾಗಿ ಕತ್ತಲೆಯಲ್ಲಿ, ಇಲ್ಲದಿದ್ದರೆ ನೆರೆಹೊರೆಯವರ ಕಣ್ಣು ತಪ್ಪಿಸಿ ಹಿಂಬಾಗಿಲಿನಿಂದ ಅವಳ ಮನೆಗೆ ಹೋಗಿ ಅವಳನ್ನು ಹೊಗಳಿ, ಬಾಯಲ್ಲೆ ಕೊಂಡಾಡಿ ಚೆಂಡಾಡಿ ಸ್ವರ್ಗಕ್ಕೆತ್ತಿ, ಅವಳು ಕೊಟ್ಟದ್ದನ್ನು ಉಂಡು ತಿಂದು ತೇಗಿ, ಉಳಿದುದನ್ನು ಕಟ್ಟಿಕೊಂಡು ಬಂದು ಮನೆಯಲ್ಲಿ ಮಕ್ಕಳು ಮರಿಗಳಿಗೆ ಕತ್ತಲೆಯಲ್ಲಿ ಅಡಗಿಸಿ ಕರೆದು ಕೊಡುತ್ತಿದ್ದರಂತೆ!...."

" ಅದೇಕೆ? "

" ನೀನಿಲ್ಲಿ ಕೇಳು ಮಾರಾಯ! ಪೂರ್ತಿ ಹೇಳುವುದಕ್ಕೆ ಮೊದಲು ಪ್ರಶ್ನೆ ಕೇಳ್ತೀಯಲ್ಲ."

" ಹೇಳು."

" ಅದು ಹೊರಗೆ ಯಾರಿಗಾದರೂ ತಿಳಿದರೆ ಅವರ ಜಾತಿಗೆ ಧಕ್ಕೆಯಲ್ಲವೆ? ಇದು ಅವಳ ಗಂಡನಿಗೂ ತಿಳಿದಿರಲಿಲ್ಲವಂತೆ. ಎಂದಿದ್ದರೂ ಒಂದು ದಿನ ಸತ್ಯ ಹೊರಗೆ ಬಂದೇ ಬರಬೇಕಲ್ಲವೆ? ಅವನೂ ಕತ್ತಲೆ ಹೋಗಿ ಬೆಳಗಾಗಲೆಂದೆ ಕಾಯುತ್ತಿದ್ದಿರಬೇಕು! ಹೀಗಿರುತ್ತ ಒಂದು ದಿನ, ಅಂದು ಅವಳನ್ನು ಹೊರದೂಡಲು ಮುಖ್ಯ ಕಾರಣರಾದ ಮಾತ್ರವಲ್ಲ, ದೂಡಿದ ಚಿಕ್ಕಪ್ಪ ಮಕ್ಕಳು ಮರಿಗಳೊಂದಿಗೆ ಹೆಂಡತಿ ಸಮೇತನಾಗಿ ಹಿಂಬಾಗಿಲಿನಿಂದ ಬಂದು ಅಡಿಗೆಕೋಣೆಯಲ್ಲಿ ಸಂಭ್ರಮದೂಟ ಮಾಡುತ್ತಿದ್ದರಂತೆ. ಅವಳೂ ಅವರ ಸಮೀಪದಲ್ಲಿ ಒಂದು ಕುರ್ಚಿ ಹಾಕಿ ಕುಳಿತು ಆಳುಮಗಳು ಬಡಿಸುವುದನ್ನು ನೋಡುತ್ತಿದ್ದಳಂತೆ. ಆಗಲೆ ಅವಳ ಗಂಡನೂ ಬಂದನಂತೆ. ಹೆಂಡತಿಯ ಹಿಂದೆ ನಿಂತು ಈ ಸಮಾರಂಭ ನೋಡಿ ನಕ್ಕು, ಹೆಂಡತಿಯ ಕಡೆಗೆ ನೋಡಿ ಒಂದು ಪ್ರಶ್ನೆ ಹಾಕಿದನಂತೆ. ಅದ್ಯಾವುದು ಗೊತ್ತೆ? "

" ನಂಗೇನು ಗೊತ್ತು? ಕಥೆ ಹೇಳುತ್ತಿ ನೀನು, ಅದರ ಕಡೆಯೇನಂತ ನನ್ನನ್ನು ಕೇಳಿದರೆ? ಪ್ರಾಯಶಃ 'ಅವರಿಗೀಗ ಜಾತಿ ಹೋಯಿತಲ್ವೆ?' ಅಂತ ಕೇಳಿರಬಹುದು."

" ಅಲ್ಲ. 'ನಿನಗೀಗ ಜಾತಿ ಬಂತೆ?' ಅಂತ ಗಟ್ಟಿಯಾಗಿ ತನ್ನ ಹೆಂಡತಿಯನ್ನೆ ಅವರಿಗೆ ಕೇಳಿಸುವ ಹಾಗೆ ಪ್ರಶ್ನಿಸಿದಾಂತೆ. ಅವರು ಆಗ

ಮುಖ ಕೆಳಗೆ ಹಾಕಿದರೆಂಬುದನ್ನು ನಾನು ಹೇಳಬೇಕಾಗಿಲ್ಲಷ್ಟೆ! ಆಗವಳು ಗಂಡನಿಗೆ ಸರಿಯಾದೊಂದು ಬದಲು ಉತ್ತರ ಕೊಟ್ಟಳಂತೆ. 'ಮಾನಗೆಟ್ಟು ಧನ ಸಂಪಾದಿಸಿದರೆ ಅದು ಮಾನವನ್ನು ಸಂಪಾದಿಸುತ್ತದೆ! ಇದು ಗೊತ್ತಿಲ್ವೆ ನಿಮಗೆ, ಇದರಲ್ಲಿ ವಿಚಿತ್ರವೇನಿದೆ?' ಎಂದಳಂತೆ. ಈಗ ತಿಳಿದೆಯಾ, ಮಾನಗೆಟ್ಟು ಸಂಪಾದಿಸಿದ ಸ್ವತಂತ್ರ ಜೀವನದ ಸಾರವನ್ನು?"

"ಹೌದು, ಆದರೆ ನಾನು ಕೇಳಿದ ಪ್ರಶ್ನೆಗೂ ನಿನ್ನ ಈ ಕಥೆಗೂ ಸಂಬಂಧ ವಿಲ್ಲವಲ್ಲ!"

"ನನಗ್ಗೊತ್ತು, ನಾನು ಈ ಕಥೆಯನ್ನು ನಿನಗೆ ಹೇಳಿದ್ದು ಅವಳ ಆ ವಾಕ್ಯವನ್ನು ನಿನಗೆ ವಿಶದಪಡಿಸಲಿಕ್ಕಾಗಿ. ಹುಡುಕಿದರೆ ಸಂಬಂಧವೂ ಇದೆ! ಹುಡುಕು, ನೋಡೋಣ."

"ಹಾಂ! ಹೌದು, ನೀನು ಹೇಳಿದ ಕಥೆಯ ಕಥಾನಾಯಕಿಯಂತೆ ಈ ದುಸ್ಥಿತಿಯಲ್ಲಿರುವ ಗಣಿಕೆಯರೂ ಇಚ್ಛಿತ ಪುರುಷನೊಬ್ಬನನ್ನು ಆರಿಸಿಕೊಂಡು ಏಕಪತಿಯೊಂದಿಗೆ ಜೀವನ ಮಾಡಿಕೊಂಡಿರಬಾರದೇಕೆ?"

"ಎಲ್ಲರಿಗೂ ಅಂಥ ಯೋಗ್ಯ ಪುರುಷರು, ಶ್ರೀ ಕುಮಾರರು ಸಿಗುತ್ತಾರೇಂತ ಭಾವಿಸಿಕೊಂಡಿದೀಯ? ಬ್ರಹ್ಮನು ಅವಳ ಹಣೆಯಲ್ಲಿ ಹಾಗೆ ಬರೆದನೆಂದೇ ಹೇಳಬೇಕು. ಅವಳು ಹೇಳಿದಂತೆ ಮಾನಗೆಟ್ಟರೂ, ಅಂದರೆ ಹಲ ಪುರುಷ ಸಹವಾಸ ಮಾಡಿದಳೆಂದರ್ಥವಲ್ಲ, ಧನ ಅವಳಿಗೆ ಮಾನ ಸಂಪಾದಿಸಿ ಕೊಟ್ಟಿತು!.... ನೋಡು, ಅವಳು ಒಬ್ಬ ಬಡವನನ್ನು ಪ್ರೀತಿಸಿ ಹಾಗೆ ಅವನೊಂದಿಗೆ ಕೂಡಿಕೊಂಡೇನಾದರೂ ಇದ್ದಿರಲಿ! ಜನ ಅವಳನ್ನು, ಏಕೆ ಅವನನ್ನೂ ಕೂಡ ಹಸಿ ಹಸಿ ಕೊಂದು ತಿಂದುಬಿಡುತ್ತಿತ್ತೇನೊ! ಏನೊ? ಅವಳ ಪುಣ್ಯಕ್ಕೆ ಯೋಗ್ಯ ಶ್ರೀಮಂತ ಸಿಕ್ಕಿದ, ಹಿಂದೆ ಅವಳನ್ನು ಜರಿದ, ಗೋಣು ಮುರಿದ ಜನಗಳೇ ಅವಳ ಕಾಲ ಅಡಿಗೆ ಹೋಗುತ್ತಿವೆ!...."

"ಹಾಗಾದರೆ ಲೋಕದಲ್ಲಿ ಮೋಸ ಮಾಡುವ ಗಂಡಸರೇ ಹೆಚ್ಚು ಅಂತ ಅಲ್ವೆ? ಒಳ್ಳೆಯವರು ಸಿಕ್ಕುವುದು ದುರ್ಲಭ?"

"ಹೌದು! ಇಲ್ಲದಿದ್ದರೆ ಲೋಕದಲ್ಲಿ ಹೀಗೆ ಸೂಳೆಯರು ಹೆಚ್ಚುತ್ತಿದ್ದರೆ?"

"ನಿಜ. ನೋಡ್ಲಿಕ್ಕೆ ಹೋದರೆ!"

"ಮತ್ತೊಂದು ನೋಡು, ಸ್ತ್ರೀಯರನ್ನೇ ಏಕೆ, ಪುರುಷರನ್ನೂ ಹೇಳುವ! ಅವರೇಕೆ ಅಂಥ ಗಣಿಕೆಯರ ಕಡೆಗೆ ಹೋಗ್ತಾರೆ?"

" ಅದೂ ಹೌದು."

" ನೀನು ಹುಚ್ಚ, ಅನಂತು! ಅವರು ಅವರೆಡೆಗೆ ಹೋಗದಿದ್ದರೆ ಅವರ ಜೀವನ ಸಾಗಬೇಡವೆ?"

" ಯಾರ ಜೀವನ ?"

" ಗಣಿಕೆಯರ ಜೀವನ ! "

" ಅವರು ತಮ್ಮ ಸಿಂಗಾರದ ಒನಪು ಒಯ್ಯಾರಗಳಿಗಾಗಿ ವೆಚ್ಚ ಮಾಡುವುದನ್ನು ಕಮ್ಮಿ ಮಾಡಬೇಕು. ಅವೆಲ್ಲಾ ಅನಾವಶ್ಯಕ ಖರ್ಚುಗಳಲ್ಲವೆ? ಆಗ ಜೀವನ ಸಾಂಗವಾಗಿ ನಡೆದೀತು. ಆಗ ಬರುವವರ ಸಂಖ್ಯೆ ಕಮ್ಮಿಯಾದೀತು ! "

" ಒಬ್ಬನೂ ಉಳಿಯಲಾರನೆ ? "

" ಅದೇನು ಹುಂಡಿ (Hundi) ಅಂತ ಭಾವಿಸಿದೆಯಾ ? ಒಬ್ಬನಾದರೂ ಕಡೆಗೆ ಉಳಿದಾನು ಅನ್ನಲಿಕ್ಕೆ, ಖಂಡಿತವಾಗಿ. ರಕ್ತ ಬಿಸಿಯಾಗಿ, ಉಷ್ಣ ನೆತ್ತಿಗೇರಿ, ಬುದ್ಧಿ ಭ್ರಮಿಸಿದಾಗ ಒಮ್ಮೆಗೆ ಅವರಲ್ಲಿ ಓಡುವರು ಈ ಕಾಮಾಂಧ ಪ್ರಾಣಿಗಳು ! ಆಗ ಅವರು ಹಣವನ್ನು ನೋಡುವುದಿಲ್ಲ ; ಹೆಣ್ಣು ಸ್ವಲ್ಪ ಹೆಚ್ಚು ಸುಂದರವಾಗಿದ್ದರೆ ಹಣವನ್ನು ಎಸೆದುಬಿಡ್ತಾರೆ; ಹಾಗೆ ಸಿಕ್ಕಿದರೇನೆ ಅವರಿಗೆ ಹಣ. ಇಲ್ಲದಿದ್ದರೆ ಪ್ರಾಣ ಬಿಡಬೇಕು—ಹಸಿದು ! "

" ಸರಕಾರ ಈ ವಿಷಯದಲ್ಲಿ ಎಚ್ಚರಿಕೆ ವಹಿಸಬಾರದೆ ? "

" ಅದೆಲ್ಲ ಆಯ್ತಪ್ಪಾ. ಈ ವ್ಯಾಪಾರ ಮಾಡುವವರು ಪಟ್ಟಣದಿಂದ ಹೊರಗೆ ಮೂರು ಮೈಲು ಬಿಟ್ಟು ದೂರ ಇರ್ಬೇಕು—ಎಂಬ ನಿಯಮ ಕಾನೂನು ಕೂಡ ಪಾಸಾಯ್ತು. ಒಬ್ಬಿಬ್ಬರು ಹೆದರಿ ಓಡಿದರೊ ಏನೊ. ಉಳಿದವರು ಎಂದರೆ ಕೆಲವು ಕೆಚ್ಚೆದೆಯವರು, ಭೀಮ ಬಂದರೂ ' ಹೂಂ ! ' ಅನ್ನುವವರು, ಕದಲಲಿಲ್ಲ. ಅವರಿಗೆ ಸರಕಾರದ ಉದ್ಯೋಗಸ್ಥರ ಕೈಯಿದೆ. ಮತ್ತೆ ಯಾರಿಗೆ ಹೆದರಬೇಕು ? ರಾತ್ರಿ ತಿರುಗುವ ಪೊಲೀಸರೆಲ್ಲಾ ಅವರ ಕೈಯೊಳಗೆ. ಧರ್ಮಕ್ಕೆ ಕೆಲಸ ಸಾಗಿಸಿಕೊಂಡು ಹೋಗುವ ಒಳ್ಳೆ ಮಕ್ಕಳ ಹಾಗೆ ಹೊರಗೆ ಮುಖ ತೋರುವ ನರಿಗಳವರು ! ಇದು ಮಾತ್ರವಲ್ಲ ಇವರದು. ಇಲ್ಲಿ ಈ ಅಕೃತ್ಯ, ಅಲ್ಲಿ ಪಾಪದವರನ್ನು ಪೀಡಿಸಿ ಲಂಚ ತಿನ್ನುವುದು ! ಹೀಗೆ ಉಂಡ ಮನೆಯ ಗಳ

ಎಣಿಸಿದಂತೆ ಸರಕಾರದ ಅನ್ನ ತಿಂದು ಸರಕಾರಕ್ಕೆ ಎರಡು ಬಗೆಯುವುದು !.... 'ಉತ್ತಮರಿಗೆ ಹುಲ್ಲು, ಅಧಮರಿಗೆ ಅನ್ನ' ಎಂಬಂತಿದೆ ಈ ಮಂಗಳೂರಿನ ಪರಿಸ್ಥಿತಿ. ಬಗೆಹರಿಯದ ಸಮಸ್ಯೆ !"

"ಮಂಗಳೂರನ್ನೇ ಏಕೆ ಹೇಳ್ತಿ, ಭಾವಯ್ಯ ? ಎಲ್ಲಾ ಕಡೆಯಲ್ಲೂ ಹಾಗೇ ಇದೆ. ಮುಂಬಯಿಯ ಗತಿಯನ್ನು ನೋಡಿದರೆ ನೀನು ಮಂಗಳೂರು ಸ್ವರ್ಗ ಎಂದು ಅನ್ನಬಹುದು !"

"ಅದೂ ನಿಜವೆ."

"ಹಾಗಾದರೆ ಇದಕ್ಕೆ ನಿವಾರಣೆ ಇಲ್ಲ, ನಿವಾರಣೆ ದಾರಿಯೆ ಕಾಣೋದಿಲ್ಲ ಅಂತಿ ಅಲ್ವೆ ?"

"ನನಗಂತೂ ಹಾಗೆ ಕಾಣುತ್ತೆ. ಸರಿ, ಎಲ್ಲಕ್ಕೂ ದೇವರಿದ್ದಾನೆ. ಅವನೆ ನೋಡಿಕೊಳ್ಳಲಿ. ನಾವು ಮಲಗೋಣ."

"ಹಾಗನ್ಬೇಡ ಭಾವಯ್ಯ. ನಾವು ಅರ್ಧ, ದೇವರು ಅರ್ಧ ಅನ್ನಬೇಕು. ದೇವರ ಮೇಲೆ ಭಾರ ಹಾಕಿದ್ರೆ ಅವನು ಬಂದು ಮಾಡ್ತಾನೆಯೆ ? ನಮ್ಮ ಮೂಲಕವೆ ಮಾಡಬೇಕಲ್ಲವೆ ? ಎಲ್ಲವೂ ಮನುಷ್ಯನ ಕೈಯಲ್ಲಿದೆ. ಅವನ್ನು ಕೈಗೂಡಿಸುವುದು ಮಾತ್ರ ಪರಮಾತ್ಮನ ಕೈಯಲ್ಲಿದೆ !"

"ಆಯ್ತು ಮಹಾಶಯ, ನೀನಂದಂತೆ ಆಗ್ಲಿ, ಈಗ ಘಂಟೆ ಎರಡಾಯ್ತು. ಒಂದು ನಾಲ್ಕು ತಾಸಿನ ನಿದ್ದೆಯಿದೆ. ಅದನ್ನೂ ಬಿಟ್ಟುಬಿಟ್ರೆ ನಾಳೆ ಆಫೀಸಿನಲ್ಲಿ ನಾನು ಬೆಲ್ಲಾ ತೂಗಬೇಕು !"

ಪ್ರಕಾಶ ನಿದ್ದೆಹೋಗಲು, ಹೃದಯಭಾರದಿಂದ ಅನಂತ ತಾನೂ ನಿದ್ದೆ ಹೋದ. ಅಂದಿನ ನಿದ್ದೆ ಸುಖದ ನಿದ್ದೆಯಾಗಿರಲಿಲ್ಲ, ಅನಂತನಿಗೆ. ಆ ರಾತ್ರಿಯಲ್ಲಿ ನೋಡಿ ಬಂದು ಮಲಗಿದ್ದ ಆತನೆದುರು, ಅದೇ ಆ ವಾರನಾರಿಯರ ತಂಡ ಅವನ ಮುಂದೆ ಬಂದು ನಿಂತು ಎಳೆನಗೆ ನಕ್ಕು ಕಡೆಗಣ್ಣ ನೋಟದಿಂದ ನೋಡಿ ಕಣ್ಣು ಮಿಟಕಿಸಿ, ಬೇಡಬೇಡವೆಂದರೂ ಬರಸೆಳೆದು ಕರೆದೊಯ್ದಂತೆ ಒಂದು ದೃಶ್ಯ ಕಂಡು ಮಾಯವಾಯಿತು, ಕನಸಿನ ರೂಪದಲ್ಲಿ. ಆದರೆ ಅದರಲ್ಲಿ ಅನಂತ ಅವರ ಕೃತ್ರಿಮ ಪ್ರೇಮಕ್ಕೆ ಒಳಪಟ್ಟಿರಲಿಲ್ಲ. ಅನಂತನ ಮಾತುಗಳನ್ನು ಕೇಳಿ ನಾಚಿ ತೆರಳಿದ್ದರವರು !

೨೩

ಶಾಲೆಯ ವಿಳಾಸದಲ್ಲಿ ತಲಪಿದ್ದ ತನ್ನ ಪತ್ರವನ್ನು ಒಡೆದು ಓದುತ್ತ ನಿಂತಿದ್ದಳು ವಿಜಯ—ಮಧ್ಯಾಹ್ನದ ಬಿಡುವಾದಾಗ. ಪತ್ರ ಅನಂತನದು. ಓದುತ್ತಿದ್ದಂತೆ ಅವಳ ಮುಖಭಾವಗಳು ಅನೇಕ ವಿಧವಾಗಿ ಮಾರ್ಪಾಡು ಹೊಂದುತ್ತಿದ್ದವು. ಏಕೋ ಆ ಪತ್ರವನ್ನು ಬಹು ಜಾಗ್ರತೆಯಿಂದ ಯಾರ ಕಣ್ಣಿಗೂ ಬೀಳದಂತೆ ಯಾರೂ ಇಲ್ಲದ ಆ ಜಾಗದಲ್ಲಿ ನಿಂತು ಓದುತ್ತಿದ್ದಳು. ಯಾವಾಗಲೂ ಶಾಲೆ ಬಿಟ್ಟೊಡನೆ ಒಟ್ಟಾಗಿ ಹೋಗುತ್ತಿದ್ದ ಹುಡುಗಿಯರ ತಂಡ ಆ ದಿನ ವಿಜಯಳನ್ನು ಕಾಣದೆ ಹುಡುಕುತ್ತಿದ್ದಿತು. ವಿಜಯಳಿಗೆ ಆ ಕರೆ ಕೇಳುತ್ತಿದ್ದಿತೊ ಇಲ್ಲವೊ ಹೇಳಲಾಗದು. ಆದರೆ ಅವರ ಕರೆಗೆ ಅವಳ 'ಓ'ಕಾರವೇನೂ ಕೇಳಿಬರಲಿಲ್ಲ. ಅವರೆಲ್ಲರೂ ನಿರಾಶರಾಗಿ ಕಾಲವಿಳಂಬ ಮಾಡಿದರೆ ಶಾಲೆಗೆ ಹಿಂತಿರುಗುವಾಗ ತಡವಾದೀತೆಂದು ಹೊರಟುಹೋದರು. ಪ್ರಾಣಸ್ನೇಹಿತೆ ಸರಸ್ವತಿ ಮಾತ್ರ ವಿಜಯಳನ್ನು ಕಾಣದೆ ಹೋಗುವುದಿಲ್ಲವೆಂದು ಪ್ರತಿಜ್ಞೆ ಮಾಡಿದವಳಂತೆ ಹಟ ತೊಟ್ಟು ಅರಸುತ್ತಿದ್ದಳು. ಸರಸ್ವತಿಗೆ ವಿಜಯಳು ಸಿಕ್ಕಿದಳು. ಆದರೆ ಅನಂತನ ಕಾಗದದಲ್ಲಿ ಮಗ್ನಳಾಗಿದ್ದ ವಿಜಯಳಿಗೆ ಸರಸ್ವತಿ ಬಂದುದು ಗೊತ್ತಾಗಲಿಲ್ಲ. ಅವಳ ಚಿತ್ತ, ಬುದ್ಧಿ, ಜೀವ ಎಲ್ಲವೂ ಅನಂತನಲ್ಲಿಗೆ ತೆರಳಿದ್ದವು. ಸಿಡಲು ಬಡಿದರೂ ಅವಳ ಕಿವಿಗೆ ಕೇಳುವಂತಿರಲಿಲ್ಲ. ಪತ್ರವನ್ನು ಓದಿ ಮುಗಿಸಿ ಒಂದು ಬಿಸಿಯುಸಿರು ಬಿಟ್ಟಳು. ಅದಕ್ಕಿಂತಲೂ ಹಿರಿದಾದ ನಿಟ್ಟುಸಿರು ಬಿಡುತ್ತ, "ಅಯ್ಯೊ, ಭಗವಂತಾ ಸಾಕು ಈ ಪ್ರಪಂಚದ ಬಾಳು!" ಎನ್ನುತ್ತ ವಿಜಯಳಿಗೆ ತಾಗಿ ಕುಳಿತಳು, ಸರಸ್ವತಿ.

"ಹಂ! ಸರಸ್ವತಿ! ಯಾವಾಗ ಬಂದೆ?"

"ಯಾವಾಗಲೊ ಬಂದೇಮ್ಮ; ಯಾರಿಗೆ ನೆನಪು ಸಮಯದ್ದು? ಅದನ್ನು ಕಟ್ಟಿಕೊಂಡಾದರೂ ನನಗೇನಾಗಬೇಕಾಗಿದೆ? ಎಲ್ಲಾ ಅವನಿಗೇ ಗೊತ್ತು! ದೇವರಿಗೆ!"

"ಸರಸೂ, ಏನಿದು?"

"ಏನೆಂದು ಹೇಳಲಿ, ವಿಜಯಾ! ಏನೆಂದು ಹೇಳಲಿ! ನನಗೆ ಈ ಪ್ರಪಂಚವೆ ಬೇಡವಾಗಿದೆ!"

" ಸರಸೂ, ಹೇಳು ! ನಿನ್ನ ಹಾವಭಾವಗಳು ವಿಚಿತ್ರವಾಗಿವೆ ಇಂದು. ಏನದು, ಏನಾಯ್ತು ? ಹೇಳು, ಹೂಂ ! ಬೇಗ ಹೇಳು ! "

" ಏನು ಹೇಳಲಿ, ವಿಜಯಾ ? ನನ್ನನ್ನು....ನನ್ನನ್ನು....ಕಲೆ...."

" ಮಾತೇಕೆ ತಡೆತಡೆದು ಹೇಳುವೆ, ಸರಸೂ ? ಬೇಗ ಹೇಳು."

" ಹೇಳಿದರೆ ನಿನಗೆಲ್ಲಿ ಬೇಸರವಾಗುತ್ತದೊ ಎಂದು ಭಯವಾಗ್ತಿದೆ, ವಿಜಯಾ ! "

" ಇಲ್ಲ, ಇಲ್ಲ ! ಬೇಗ ಹೇಳು. ನನಗೆ ಬೇಸರವೇನೂ ಆಗೋದಿಲ್ಲ."

" ನನ್ನನ್ನು....ಹೇಳಲೆ ? "

" ಹೇಳು ಸರಸೂ....ಮಧ್ಯೆ ನಿಲ್ಲಿಸ್ತಿ ಯಾಕೆ ? "

" ನನ್ನನ್ನು ಕಲೆಕ್ಟರ್ ತೇಜಪಾಲರಾಯರಿಗೆ ಮದುವೆ ಮಾಡಿ ಕೊಡ್ತಾರಂತೆ ! "

" ಹಾಂ ! ನಿಜವೆ ? ಸರಸೂ, ಇದು ನಿಜವೆ ? ಹಾಗಾದರೆ ನನಗೆ ಸಂತೋಷವೇ ಸರಸೂ, ಬೇಸರವಿಲ್ಲ !...."

" ಆದರೆ ವಿಜಯಾ, ನನಗೆ....ನನಗೆ ಬೇಸರವಾಗುವುದಲ್ಲಾ ! "

" ಏಕೆ ? ನೀನು ಯಾರನ್ನು ಪ್ರೀತಿಸುತ್ತೀ ? "

" ನಾ....ನಾನು ಪ್ರೀತಿಸುವವರನ್ನು ನಿನಗೆ....ನಿನ್ನೊಡನೆ ಹೇಳುವುದೆ ?"

" ಹೇಳು ಸರಸೂ, ನೀನು ಸಂಕೋಚ ಪಡಬೇಡ. ಮನುಷ್ಯ ಹುಟ್ಟಿದ ಮೇಲೆ ಅವನ ಇಚ್ಛೆ ಫಲಿಸದಿದ್ದರೆ, ಅವನ ಜನ್ಮ ಹಾಳು ! ಅವನು ಬದುಕಿದ್ದರೂ ಸತ್ತಂತೆಯೆ ! ನನ್ನೊಡನೆ ಹೇಳುವುದಕ್ಕೆ...."

" ಹೇಗೆ ಹೇಳಲಿ, ವಿಜಯಾ ? ನನಗೆ ಭಯವಾಗುತ್ತಿದೆ—ನೀನು ಯಾರೊಂದಿಗಾದರೂ ಹೇಳಿಬಿಟ್ಟರೆ...."

" ಪರವಾ ಇಲ್ಲ, ಹೇಳು !....ಓ !....ಕ್ಷಮಿಸು, ಕ್ಷಮಿಸು ! ನನ್ನನ್ನು ನಂಬುವುದಿಲ್ಲವೆ ? ಹೇಳು."

" ನಾನೊಬ್ಬ...."

" ಹೂಂ, ಹೇಳು. ನಾನೊಬ್ಬ...."

" ನಾನೊಬ್ಬ ಸಾಮಾನ್ಯ....ಸರಳ....ಮಹಾ ಸದ್ಗುಣಿಯನ್ನು ಪ್ರೀತಿಸುತ್ತೀನೆ !...."

"ಹುಚ್ಚಿ, ಅದಕ್ಕೇಕೆ ಅತ್ತಿ? ಎಲ್ಲ ಹೇಳದೆ ಮಾತನ್ನು ಅಲ್ಲಲ್ಲಿ ನಿಲ್ಲಿಸುತ್ತಿ ಯಾಕೆ? ಹೇಳು, ಹೆಸರೇನು ಹೇಳು?"

"ಹೇಳಲೆ? ನೀನು ಯಾರೊಂ...."

"ಅಳಬೇಡ ಸರಸೂ, ಹೇಳು. ನಾನು ಯಾರೊಂದಿಗೂ ಹೇಳೋದಿಲ್ಲ."

"ಅನಂತ!"

"ಹಾಂ! ಮಥುರಾನಾಥರಾಯರ ಮಗನನ್ನೆ?"

"ಹೌದು! ಏಕೆ? ಅವರು ಒಳ್ಳೆಯವರಲ್ಲವೆ?

"ಅಲ್ಲಲ್ಲ!...."

"ಕೆಟ್ಟವರೆ?"

"ಉಂಹುಂ! ಒಳ್ಳೆಯವರೆ, ಬಹಳ ಒಳ್ಳೆಯವರು!"

"ಮತ್ತೇನು? ನಾನವರಿಗೆ ಸರಿಯಾದ ಪತ್ನಿಯಾಗುವುದಿಲ್ಲವೆ?"

"ಆಗ್ತಿ, ಆಗ್ತಿ! ಸಂದೇಹವಿಲ್ಲದೆ ಆಗ್ತಿ, ಸರಸೂ. ಆದರೆ?...."

"ಆದರೇನು?"

"ಏನಿಲ್ಲ....ನೀನು....ಅವರನ್ನು ನೋಡಿರುವೆಯಾ?"

"ನೋಡದೆ ಯಾರಾದರೂ ಪ್ರೀತಿಸುವರೆ? ಒಂದು ವೇಳೆ ನೋಡದಿದ್ದರೆ ತಾನೆ ಏನಾಯ್ತು? ಅವರ ಭಾವಚಿತ್ರವಿದೆ ನನ್ನಲ್ಲಿ!"

"ಎಲ್ಲಿಂದ? ನಿಮ್ಮ ಮನೆಗೆ....ಅಲ್ಲಲ್ಲ...."

"ಎಲ್ಲಿಂದಲಾದರೂ ಆಗಲಿ! ಅದನ್ನೆಲ್ಲಾ ಕೇಳಲು ನೀನ್ಯಾರು? ನನ್ನ ಪ್ರೇಮಕ್ಕೆ ಅವರೇ ಪಾತ್ರರಾಗಿದ್ದಾರೆ. ಇನ್ನು ವರಿಸುವುದಾದರೂ ಅವರನ್ನೇ ನಾನು! ಆ ಮೂರ್ತಿ ನನಗೆ ಲಭಿಸದೆ ಹೋದಲ್ಲಿ ನಾನು ಈ ಜೀವವನ್ನೆ ಇಡಲಾರೆ! ನನ್ನ....ಮತ್ತೆ ಯಾಕೆ ಈ ಜನ್ಮ, ಇದು ಖಂಡಿತ!"

"ಸರಸೂ! ನಾನು ಕಾಣುವುದು ಕನಸೊ ನೆನಸೊ?"

"ಕನಸೂ ಅಲ್ಲ, ನೆನಸೂ ಅಲ್ಲ! ಎರಡೂ ಸೇರಿದ ಸುರಸವಾದ ಸರಸ ವನ್ನೆ ಕಾಣುತ್ತಿರುವಿ. ನಿನ್ನಂಥ ಹುಚ್ಚಿಯರು ಈ ಲೋಕದಲ್ಲೆ ಇಲ್ಲವೆನ್ನ ಬಹುದು, ಹುಡುಕಿದರೂ—ವಿಜಯಾ! ಕೇಳು. ನಿನ್ನ ಅನಂತರಾಯರು ನನಗೆ ಬೇಕಾಗಿಲ್ಲ; ನೀನೇ ಇಟ್ಟುಕೊ! ನಿನ್ನ ಅನಂತರಾಯರು ನಿನ್ನಿಂದ ಮೊನ್ನೆ ನಾನು ಕೊಂಡುಹೋಗಿದ್ದ ನೋಟ್ ಪುಸ್ತಕದೊಳಗೆ ಭಾವಚಿತ್ರ

ರೂಪದಲ್ಲಿ ಅಡಗಿ ಕುಳಿತಿದ್ದರು. 'ಇದರೊಳಗೆ ಹೇಗೆ ಬಂದಿರಿ ನೀವು?' ಎಂದು ಅವರನ್ನು ನಾನು ಕೇಳಿದಾಗ, 'ಆಶ್ರಮಕ್ಕೆ ಹೊರಟಾಗ್ಗೆ ಆ ವಿಜಯಾ ನನ್ನನ್ನು ನೋಡಿ ಮರುಳಾಗಿ ಪ್ರೇಮ, ಪ್ರೇಮ ಅಂತೇನೊ ಹೇಳಿತು; ಆಗ ನಾನದನ್ನು ಕಿವಿಗೆ ಹಾಕಿಕೊಳ್ಳದೆ, ಕೇಳದೆ, ಹಾಗೆಯೆ ಹೋದೆನಾದ ಕಾರಣ ಆ ಹುಡುಗಿ ತನ್ನ ಮಾಯಾಶಕ್ತಿಯಿಂದ ನನಗೆ ಈ ರೂಪವಿತ್ತು ಈ ಪುಸ್ತಕ ದೆಡೆಯಲ್ಲಿ ಇಟ್ಟಿದ್ದಾಳೆ. ಇನ್ನೇನಾಗ್ತದೊ ನೋಡಬೇಕು' ಅಂತ ಹೇಳಿದರು. ಮತ್ತೊಂದು ದಿನ ನಿನ್ನ ದರ್ಶನಕ್ಕಾಗಿ ನಾನು ಬರ್‍ತಿದ್ದಾಗ ಆಶ್ರಮದ ಕಡೆಗೆ, ಅನಂತ-ವಿಜಯರ ಸುಖಾಲಾಪನೆಗಳಾಗುತ್ತಿದ್ದುದನ್ನು ದಾರಿಯಲ್ಲೆ ಕಿವಿಯಾರ ಕೇಳಿದೆ. ಮತ್ತು ಅವರಿಬ್ಬರನ್ನೂ ಕಣ್ಣಾರ ನೋಡಿದೆ. ಆ ಕೂಡಲೆ —ಇದೇನಿದು 'ಲೈಸೆನ್ಸ್' ಇಲ್ಲದೆ ಏನೇನೊ ನಡೀತಿದೆಯಲ್ಲ, ಪೋಲೀಸಿಗೆ ರಿಪೋರ್ಟ್ ಕೊಡಲೆ ಅಂತ ಯೋಚಿಸಿದೆ. ಆದರೆ ಸಾಧ್ಯವಾಗಲಿಲ್ಲ. ಕಾರಣ ಇದನ್ನು ನೋಡಿದ ನನ್ನ ಫಾಪವನ್ನು ತೊಳೀಲಿಕ್ಕೆ ಆ ಕೂಡಲೆ ತೀರ್ಥಯಾತ್ರೆಗೆಂದು ಹೊರಟುಬಿಟ್ಟೆ!—ಎಲ್ಲಿ ನೋಡೋಣ, ನಿನ್ನ ಪ್ರೇಮಪಾತ್ರನ ಪತ್ರ! —ನಾನು ನೋಡಬಹುದಾದರೆ ಮಾತ್ರ."

"ನನ್ನ ಇಡೀ ರಾಮಾಯಣವನ್ನು ಬಾಯಿಪಾಠ ಮಾಡಿರುವ ನಿನಗೆ ಈ ಪತ್ರದಲ್ಲೇನಿದೆ? ಇಗೊ, ನೋಡು!"

ಮಂಗಳೂರು

ನನ್ನ ವಿಜಯಾ,

ವಿಜಯಾ! ಎಂದು ನಾನು ನಿನ್ನನ್ನು ಬಿಟ್ಟು ಮಂಗಳೂರು ಸೇರಿದೆನೊ ಅಂದಿನಿಂದ ನಿನ್ನದೆ ನೆನಪು; ನನ್ನ ಹೃದಯ ನಿನ್ನ ದರ್ಶನಕ್ಕಾಗಿ ಸದಾ ಹಾತೊರೆಯುತ್ತಿದೆ. ನಿನ್ನ ಮನೋಹರ ಕಾಯದೊಳಗೆ ಅಡಗಿರುವ ಸಪ್ರೇಮವು ಅಳಿಯಲಾರದಷ್ಟೆ? ನೋಯಬೇಡ. ನಿನ್ನೊಡನೆ ಆಶ್ರಮದ ವೃಂದಾವನದಲ್ಲಿ ಅದೆಷ್ಟೊ ಬಾರಿ ಕುಳಿತು ನಕ್ಕು ಆಡಿದ ಮಾತುಗಳಲ್ಲಿ ಇದೂ ಒಂದೆಂದು ಭಾವಿಸಿ ಕೃತ್ರಿಮ ಕೋಪವನ್ನು ತಾಳು. ಈ ಕಾಗದವನ್ನು ನಾನೆಂದೇ ತಿಳಿ. ಆದರೆ ನನ್ನನ್ನು ಮರೆಯಬೇಡ. ನಾನಿಲ್ಲಿ ನಿನ್ನೊಂದು ವಿಚಾರ ಹೊರತು ಸಕಲ ವಿಧಗಳಲ್ಲಿಯೂ ಸೌಖ್ಯವಾಗಿಯೆ ಇದ್ದೇನೆ.

ನೀನು ? ಇಲ್ಲ ! ನೀನು ಎಷ್ಟು ಮಾತ್ರಕ್ಕೂ ಸುಖವಾಗಿರಲಾರೆ ಯೆಂದು ನನಗೆ ಗೊತ್ತು. ಆದರೆ ನಾನು ಹೇಳುವ ಮಾತನ್ನು ಕೇಳು. ಯಾವಾಗಲೂ ನೀನು ನನ್ನ ಜ್ಞಾಪಕದಲ್ಲಿಯೆ ಇದ್ದು ಕೊಂಗುತ್ತಿದ್ದರೆ ಒಳಿತಾಗದು. ಮತ್ತು ನನಗೂ ಇಲ್ಲಿ ಅಪಶಕುನಗಳು ಕಂಡುಬಂದು ಸುಖವೆನಿಸದು. ಆದ್ದರಿಂದ ಮರೆಯದೆ ಇದ್ದರೆ ಸಾಕು. ಆಗುವುದೆಲ್ಲ ದೈವವಿದ್ದಂತೆ. ಮನುಷ್ಯನಿಂದೇನು ಸಾಧ್ಯ ?

ಇಂತಿ ನಿನ್ನ

**ಅನಂತ**

ಸರಸ್ವತಿ ಅದನ್ನು ಓದಿ ಹಿಂತಿರುಗಿ ಕೊಟ್ಟಳು. ಹೊತ್ತು ಮೀರಿತ್ತು. ಊಟಕ್ಕೆ ಧಾವಿಸಿದರು. ಉಂಡು ಬರುವಾಗ ತಡವಾಗಿತ್ತಾದ್ದರಿಂದ ಸರಸ್ವತಿ ವಿಜಯಳಿಗೆ ಧೈರ್ಯದ ಮಾತು ಹೇಳಿ, ತಾನು ಮಾಡಿದ್ದ ಹೂಟವನ್ನು ಅವಳಿಗೆ ವಿಸ್ತರಿಸಿ ಹೇಳಿದಳು. ಸರಸ್ವತಿ ಕಾಲ ಹೆಬ್ಬೆರಳಿಗೊಂದು ಗಾಯ ಮಾಡಿಕೊಂಡು ಅದಕ್ಕೆ ಬಟ್ಟೆ ಸುತ್ತಿದಳು.

" ಅಧ್ಯಾಪಕರು ಕೇಳಿದರೆ ನನಗಂತೂ ಗಾಯವಾಗಿರುವುದರಿಂದ ಕ್ಷಮೆ ಯಿದೆ, ನೀನೇನು ಹೇಳಬೇಕು ಗೊತ್ತಿದೆಯೆ ? ನನ್ನ ಕಾಲಿಗೆ ಡಾಕ್ಟರ್ ಕೆಲಸ ಮಾಡಿದ್ದು ನೀನೇಂತ ಹೇಳಿಬಿಡು. ನಿನಗೆ ಧೈರ್ಯವಿಲ್ಲಾಂತಾದರೆ ತೆಪ್ಪ ಗಿದ್ದುಬಿಡು, ಬೇಕಾದರೆ ನಾನೇ ಹೇಳಿ ಬಿಡ್ತೇನೆ, ನಿನ್ನ ಪಕ್ಷವಹಿಸಿ " ಎಂದು ತಾನು ಸಿದ್ಧಪಡಿಸಿದ್ದ ಉಪಾಯವನ್ನು ಹೇಗೆ ಪ್ರಯೋಗಿಸಬೇಕೆಂಬುದನ್ನು ವಿಜಯಳಿಗೆ ವಿಶದೀಕರಿಸಿದಳು.

* * * *

ಪಾರಮ್ಮನ ಮರಣ ವಾರ್ತೆಯನ್ನು ಮಥುರಾನಾಥರು ದಾರಿಯಲ್ಲೇ ಅರಿತುಕೊಂಡರು. ಬಡವಳ ಮರಣ ! ಅತ್ತಿಯ ಹಣ್ಣೊಳಗಿನ ಒಂದು ಹುಳು ಸತ್ತಂತೆ ! ಆದರೆ ಹೆಣ್ಣಿನ ಹೃದಯವಲ್ಲವೆ ! ಪದ್ಮಮ್ಮನಿಗೆ ತುಸು ವೇದನೆಯಾಯಿತು. ಅನಂತನ ಪ್ರಸವ ಕಾಲದಲ್ಲಿ ಪದ್ಮಮ್ಮನಿಗೆ ಸೂಲಗಿತ್ತಿಯ ಉದ್ಯೋಗವನ್ನು ಪಾರಮ್ಮನೇ ಕೈಗೊಂಡಿದ್ದಳು. ಅನಂತನೇ ಸೀಮಂತ ಪುತ್ರ ನಾದ್ದರಿಂದ ಬಹು ಕಷ್ಟವಾಗಿದ್ದಿತಾಗ. ಪಾರಮ್ಮನಂತಹ ಧೈರ್ಯ ಹೇಳುವ ಧೀರಮುಖಿಯೊಬ್ಬಳು ಆಗ ಇರದಿರುತ್ತಿದ್ದರೆ ಪದ್ಮಮ್ಮನ ಗತಿ ಏನಾಗುತ್ತಿತ್ತು ?

ಅಂತೂ ಅರ್ಧ ಅವಳಿಂದಲೂ ಅರ್ಧ ದೈವಸಹಾಯದಿಂದಲೂ ಪದ್ಮಮ್ಮ ಚೇತರಿಸಿಕೊಂಡರು. ಅಂತೂ ಕಷ್ಟಕ್ಕೊದಗಿದ್ದಳು ಪಾರಮ್ಮ.

ಗತಿವಿಹೀನಳಾದ ರಂಗಮ್ಮನ ಪಾಡು ವಿಷಮಸ್ಥಿತಿಗೆ ಬಂದಿದೆ. ಕೇಳುವವರಿಲ್ಲ! ಹೇಳುವವರು ಮೊದಲೇ ಇಲ್ಲ! ಇರಲೊಪ್ಪತ್ತು ಸ್ಥಳವೂ ಇಲ್ಲ. ಒಡೆಯೊಡತಿಯರ ಪಾದಗಳೇ ಗತಿಯೆಂದು ನಂಬಿ ಅವರೆಡೆಯಲ್ಲಿಯೇ ದಿನ ನೂಕುವ ಸಮಯ ಸಮಾಪಿಸಿದೆ—ಎಂದು ಮುಂತಾಗಿ ಯೋಚಿಸುವಷ್ಟರಲ್ಲಿ ಯಜಮಾನರ ಮೋಟಾರುಗಾಡಿ ಗೇಟಿನ ಮುಂದೆ ಬಂದು ನಿಂತಿತು. ಎಲ್ಲರೂ ಹೊರಗಿಳಿದು ಮನೆಯ ಕಡೆ ಬರುತ್ತಿದ್ದರು. ಯಜಮಾನರೊಂದಿಗೆ ಇನ್ನೊಬ್ಬರಾರೋ ಮೋಟಾರಿನೊಳಗಿಂದ ಹೊರಗಿಳಿದುದನ್ನು ನೋಡಿ ರಂಗಮ್ಮ ತೊಳೆದಿಟ್ಟಿದ್ದ ಚೆಂಬೊಂದರಲ್ಲಿ ಕೈಕಾಲು ತೊಳೆಯಲು ನೀರು ತಂದಿಟ್ಟು, ಹಿಂಬಾಗಿಲಿಗೆ ತೆರಳಿದಳು.

ಮಾಧವರಾಯರು ಮಧುನಾಥರೊಂದಿಗೆ ಹೊರಟು ಬರುತ್ತಿದ್ದರು. ಇಬ್ಬರೂ ಕಾಲಿಗೆ ನೀರು ಹಾಕಿಕೊಂಡು ಮೇಲೇರಿದರು. ಪದ್ಮಮ್ಮ ಬಚ್ಚಲಿಗೆ ಹೋಗಿ ಕೈಕಾಲು ತೊಳೆದುಕೊಂಡು ರಂಗಮ್ಮನನ್ನು ನೋಡಿ, " ದಾರಿಯಲ್ಲೆ ತಿಳಿದೆ, ರಂಗಮ್ಮ. ಹೂಂ! ಇಷ್ಟು ಕಾಲ ನಮ್ಮೆಡೆಯಲ್ಲಿದ್ದುದಕ್ಕೆ ಈ ಮನೆಯಲ್ಲೇ ಸಾಯುವ ಪುಣ್ಯವನ್ನು ಕಟ್ಟಿಕೊಂಡಳು!" ಎಂದೆನ್ನುತ್ತ ಒಳಗೆ ನಡೆದರು.

ಬೆಳಿಗ್ಗೆ ಆಗಬೇಕಾಗಿದ್ದ ಉಪಾಹಾರಾದಿಗಳನ್ನು ಶೀಘ್ರದಲ್ಲಿ ರಂಗಮ್ಮ ಮಾಡಿ ಮುಗಿಸಿದಳು. ಮಧುರಾನಾಥರೂ ಮಾಧವರಾಯರೂ ಕುಳಿತೆಡೆ ಪದ್ಮಮ್ಮನೆ ಉಪಾಹಾರ ತಂದಿಟ್ಟರು. ರಂಗಮ್ಮ ಮಾಧವರಾಯರ ದರ್ಶನಕ್ಕೆ ಬೀಳದಿರಲು ಆದಷ್ಟು ಜಾಗ್ರತೆ ವಹಿಸುತ್ತಿದ್ದಳು. ಎಷ್ಟೆಂದರೂ ಅಪರಿಚಿತ ವ್ಯಕ್ತಿಯಲ್ಲವೆ? ಆದರೆ ಮಾಧವರಾಯರು ಬಂದುದರ ಕಾರಣವನ್ನು ಮಾತ್ರ ತಿಳಿದುಕೊಳ್ಳಲು ರಂಗಮ್ಮ ಆತುರ ಪಡುತ್ತಿದ್ದಳು. ಪದ್ಮಮ್ಮನನ್ನು ಕೇಳಲು ಧೈರ್ಯ ಸಾಲದು. ಕೇಳೋಣವೆಂದು ಹೋಗಿ ಅರ್ಧದಲ್ಲೆ ಹಿಂದೆ ಬರುತ್ತಿದ್ದಾಳೆ. ಮಧುರಾನಾಥರು ಅತಿಥಿ ಸಮೇತರಾಗಿ ಉಪಾಹಾರ ತೀರಿಸಿ, ಮೋಟಾರಿನಲ್ಲಿ ಕುಳಿತು ಆಶ್ರಮದ ಕಡೆಗೆ ತೆರಳಿದರು.

ರಮಾನಂದರು ವಂದಿಸಿ ಅತ್ಯಾದರದಿಂದ ಮಾಧವರಾಯರನ್ನು ಬರಮಾಡಿ

ಕೊಂಡರು. ಮಥುರಾನಾಥರೂ ಅಲ್ಲೇ ಆಸನದಲ್ಲಿ ಮಂಡಿಸಿದರು. ಮಾಧವ ರಾಯರು ಬಂದ ಕಾರಣವನ್ನು ಮಥುರಾನಾಥರು ಮಾಧವನೆದುರು ಒಡೆದು ಹೇಳಿದರು. ರಮಾನಂದರಿಗೂ ಅದೇ ಕಾರಣವಿರಬಹುದೆಂದು ತೋರಿತು! ಅಂದು ಭಾನುವಾರವಾದ್ದರಿಂದ ವಿಜಯ ಶಾಲೆಗೆ ಹೋಗಿರಲಿಲ್ಲ. ಆಶ್ರಮದ ಮಕ್ಕಳ ಮಧ್ಯೆ ಕುಳಿತು ಅವರಿಗೆ ಕೈಗಾರಿಕೆಯನ್ನು ಕುರಿತು ಉಪದೇಶ ಕೊಡುತ್ತಿದ್ದಳು. ವಿಜಯಳಿಗೆ ಕರೆ ಬರಲು ಅಲ್ಲಿಂದೆದ್ದು ಧಾವಿಸಿದಳು. ಆದರೆ ಮಥುರಾನಾಥರೂ ಮತ್ತಿತರ ಅತಿಥಿಗಳಾರೊ ಇರುವರೆಂಬುದನ್ನು ತಿಳಿದೊಡನೆ ತಡೆದು, ನಯನಮ್ರತೆಗಳಿಂದ, ಭಯಭಕ್ತಿಗಳಿಂದ ಆ ಕೋಣೆ ಯನ್ನು ಪ್ರವೇಶಿಸಿದಳು.

ರಮಾನಂದರು ವಿಜಯಳನ್ನು ಕುಳಿತುಕೊಳ್ಳಲು ಹೇಳಿದರೂ ವಿಜಯ ಕುಳಿತುಕೊಳ್ಳದೆ ಅಲ್ಲಿಯೆ ಸಮೀಪ ತಲೆಬಾಗಿ ನಿಂತಳು.

ವಿಜಯಳನ್ನು ಕಂಡೊಡನೆ ಮಾಧವರಾಯರಿಗೆ ತಮ್ಮನ್ನು ಆಕಾಶದಲ್ಲಿ ಎತ್ತಿ ಬಿಸಾಡಿದಂತಾಯಿತು. ಕಣ್ಣಿಗೆ ಬಲೆ ಕಟ್ಟಿದಂತಾಯಿತು. ಸರ್ವಾಂಗವೂ ಒಮ್ಮೆ ಬೆವರಿತು. ತಮ್ಮ ಕಣ್ಣುಗಳನ್ನು ತಾವೇ ನಂಬದಾದರು. ಅಂತೂ ಸ್ವಪ್ನ ಪ್ರಪಂಚದಲ್ಲಿ ಮುಳುಗಿದಂತೆ ಮಾಧವರಾಯರು ದಿಗ್ಭ್ರಾಂತರಾಗಿ ಮರದ ಬೊಂಬೆಯಂತಾದರು. ಮಾಧವರಾಯರ ಅವಸ್ಥೆ ನೋಡಿ ಮಥುರಾನಾಥರು ಅಚ್ಚರಿಗೊಂಡು ಅವರನ್ನು ಮೈತಟ್ಟಿ ಕರೆದರು. ನಿದ್ದೆಯಿಂದೆಚ್ಚತ್ತವರಂತೆ ಮಾಧವರಾಯರು ಬೆಚ್ಚಿಬಿದ್ದರು. ವಿಜಯಳ ಬೆರಳಲ್ಲಿದ್ದ ಉಂಗುರವನ್ನು ಇಸುಕೊಂಡು ಪರೀಕ್ಷಿಸಿದುದಾಯಿತು. ಮೂವರಿಂದಲೂ ಅಪ್ಪಣೆ ಪಡೆದು ವಿಜಯ ತನ್ನ ಸ್ಥಾನವನ್ನು ಸೇರಿದಳು.

"ಮಥುರಾನಾಥರೆ, ನೀವಿತ್ತ ಈ ಪತ್ರ ನಿಜವಾಗಿಯೂ ಸ್ವರ್ಣಳದೆ ಹಸ್ತಾಕ್ಷರವಾಗಿದೆ. ಅದರಲ್ಲಿ ವಿಶದೀಕರಿಸಿರುವ ವಿಷಯಗಳಂತೂ ನನ್ನ ಮಗಳನ್ನೇ ಹೊಂದಿಕೊಡಿವೆ. ನಾನು ವಿಜಯಳನ್ನು ಕಂಡಾಗಲಂತೂ ಸ್ವರ್ಣ ಳನ್ನೇ ಪ್ರತ್ಯಕ್ಷ ಕಂಡಂತಾಯಿತು. ವಿಜಯಳ ಸರ್ವಾಂಗವೂ ಸ್ವರ್ಣಳನ್ನೆ ಸುಲಿದಿಟ್ಟಂತಿದೆ. ಈ ಉಂಗುರವನ್ನು ನಮ್ಮ ಮನೆಯವಳು ಅಥವಾ ಸುಬ್ಬರಾಯರು ನೋಡಿ ಎಲ್ಲ ವಿಷಯವನ್ನೂ ನಿರ್ಧರಿಸಬೇಕಾಗಿದೆ. ಇದು ನಮ್ಮ ಅಳಿಯನದ್ದೇ ಆಗಿರುವುದರಲ್ಲಿ ಏನೂ ಸಂಶಯವಿಲ್ಲ.

"ಮಥುರಾ, ವಿಷಯವೇನು? ನನಗೆ ಎಲ್ಲವನ್ನೂ ಚೆನ್ನಾಗಿ ತಿಳಿಯು ವಂತೆ ಹೇಳು."

"ಹುಣಸೂರು ಸುಬ್ಬರಾಯರ ಸೊಸೆಯಾದ ಸ್ವರ್ಣಳೆಂಬ ಹುಡುಗಿ ಕಣ್ಣುಮರೆಯಾದುದು ತಮಗೆ ಗೊತ್ತಷ್ಟೆ. ಈವಳು ಇವರ ಮಗಳು...."

"ಹೌದು, ಗೊತ್ತು. ಹೆಸರಿನಂತೆ ಬಂಗಾರದಂಥಾ ಹುಡುಗಿ ಅದು. ಗುಣನಡತೆಗಳು ಅಸಾಮಾನ್ಯ. ಅವಳ ಮದುವೆಗೆ ನಾನೂ ಹೋಗಿದ್ದೆ. ನಿನಗೆ ನೆನಪಿದೆಯೆ?"

"ಇದೆ. ಆದರೆ?...."

"ಆದರೇನು? ಅದರ ಹಣೆಬರಹ ಹಾಗಿದ್ದರೆ ಯಾರೇನು ಮಾಡಲು ಸಾಧ್ಯ?" ಎಂದು ರಮಾನಂದರು ಮಾಧವರಾಯರ ಮನಸ್ಸಿಗೆ ನೋವಾಗ ದಂತೆ ನುಡಿದರು.

"ನಿಮ್ಮಿಬ್ಬರಲ್ಲಿಯೂ ಒಂದು ಅರಿಕೆಯಿದೆ, ನನ್ನದು. ಅದನ್ನು ತಾವು ದಯವಿಟ್ಟು ನಡೆಸಿಕೊಡಬೇಕೆಂದು ಬೇಡಿಕೊಳ್ಳುವೆ" ಎಂದರು ಮಾಧವ ರಾಯರು.

"ಅದರಲ್ಲೇನು? ನಿಮಗೇನು ಬೇಕಾದರೂ ಮಾಡಿಕೊಡಲು ಸಿದ್ಧ ರಿದ್ದೇವೆ. ಯಾವುದನ್ನೂ ಮನಸ್ಸಿನೊಳಗಿಡದೆ ಬಿಚ್ಚಿ ಹೇಳಬಹುದು" ಎಂದು ಮಥುರಾನಾಥರು ಮಾಧವರಾಯರಿಗೆ ಧೈರ್ಯವಿತ್ತರು.

"ತಮ್ಮ ಸಹಾಯವೂ ಬೇಕಾಗಿದೆ" ಎಂದರು ಮಾಧವರಾಯರು ರಮಾನಂದರಿಗೆ.

ರಮಾನಂದರು, "ನಮ್ಮಿಂದಾಗುವುದು ಯಾವುದಿದೆ? ಎಲ್ಲವನ್ನೂ ನಮ್ಮ ಅಳಿಯನೆ ನಿಮ್ಮ ಕೈಗೂಡಿಸಿಕೊಡುವರು. ನಿಮ್ಮಿಚ್ಛೆ ಯಾವುದೊ ಹೇಳಿರಿ" ಎಂದರು.

"ವಿಜಯಕುಮಾರಿಯನ್ನು ಮಂಗಳೂರಿಗೆ ನಮ್ಮ ಮನೆಗೆ ಕರೆ ದೊಯ್ಯಲು ಅಪ್ಪಣೆ ದೊರೆಯಬೇಕು" ಎಂದು ಮಾಧವರಾಯರು ನಯವಾಗಿ ನುಡಿದರು.

ಮಥುರಾನಾಥರೊಮ್ಮೆ ಮಾವನ ಮುಖವನ್ನು ನೋಡಿದರು. ಆದರೆ ಆಗ ರಮಾನಂದರು ಮಾಧವರಾಯರ ಕಡೆ ಮುಖ ಮಾಡಿದ್ದರು.

ಮಥುರಾನಾಥರು ಮಾಧವರಾಯರೊಂದಿಗೆ ವಿಜಯಳನ್ನೂ ಸಂಗಡ ಕರೆದುಕೊಂಡು ಮನೆ ತಲಪಿದರು. ವಿಜಯಳನ್ನು ಕಂಡ ರಂಗಮ್ಮನಿಗೆ ಅಂದು ಅತ್ಯಾನಂದವಾಯಿತು. ವಿಜಯಳನ್ನೊಮ್ಮೆ ಅಪ್ಪಿಕೊಂಡು ಕಂಗಳಿಂದ ನೀರು ಸುರಿಸಿದಳು.

"ವಿಜಯಾ! ನಿನ್ನನ್ನೇಕೆ ಇಲ್ಲಿಗೆ ಕರೆತಂದರಮ್ಮಾ?"

"ನನಗೆ ಗೊತ್ತಿಲ್ಲ."

"ನಿನ್ನೊಡನೆ ಏನಾದರೂ ಪ್ರಶ್ನೆ ಕೇಳಿದರೆ?"

"ಇಲ್ಲ. ನನ್ನನ್ನು ಕರೆದು, ನನ್ನ ಕೈಯಲ್ಲಿನ ಉಂಗುರವನ್ನು ತೆಗೆದು ಕೊಂಡು ಪರೀಕ್ಷಿಸಿದರು. ಹಿಂದಕ್ಕೆ ಕೊಟ್ಟು, ಹೋಗಲು ಅಪ್ಪಣೆಯಿತ್ತರು."

"ಆಮೇಲೆ ಮಾತೇನೂ ಆಗಲಿಲ್ಲವೆ?"

"ಇಲ್ಲ. ನಾನು ಕೇಳಲಿಲ್ಲ. ಅವರೇನೊ ಬಹಳ ಸಮಯದ ತನಕ ಮಾತಾಡ್ತಿದ್ದರು. ಆಮೇಲೆ ನನ್ನನ್ನೂ ಕರ್ಕೊಂಡು ಬಂದರು."

ಆಗಲೆ ನೆರಮನೆಯ ಶಾರದಮ್ಮನೊಂದಿಗೆ ಮಾತಾಡುತ್ತಿದ್ದ ಪದ್ಮಮ್ಮ ನವರು ಬಂದಿದ್ದರಿಂದ ವಿಜಯ–ರಂಗಮ್ಮರ ಮಾತು ಅಲ್ಲಿಗೇ ನಿಂತಿತು. ಪದ್ಮಮ್ಮ ವಿಜಯಳನ್ನು ನೋಡಿ, "ವಿಜಯಾ!" ಎಂದರು. ವಿಜಯ ಕೈಜೋಡಿಸಿ ಪದ್ಮಮ್ಮನಿಗೆ ವಂದಿಸಿದಳು. 'ಮಂಗಳವಾಗಲಿ' ಎಂಬುದರ ಗುರುತಾಗಿ ಪದ್ಮಮ್ಮ ವಿಜಯಳ ಶಿರದಡವಿ, ವಸ್ತ್ರಗಳನ್ನು ಕಳಚಲು ಒಳಹೊಕ್ಕ ಗಂಡನನ್ನು ಪ್ರಶ್ನಾತುರ ದೃಷ್ಟಿಯಿಂದ ನೋಡುತ್ತ ಅಲ್ಲಿಗೆ ಬಂದರು.

"ಶೇಕಡಾ ತೊಂಬತ್ತೊಂಬತ್ತರಷ್ಟು ಅವರ ಊಹೆ ನಿಜವಾಗುವಂತಿದೆ."

"ಏನು?" ಎಂದು ಕೇಳಿದರು ಪದ್ಮಮ್ಮ.

"ಹಾಂ!"

"ವಿಜಯಳನ್ನು ಇಲ್ಲಿಗೆ ಕರೆತರಲು ಕಾರಣ?"

"ಮಾಧವರಾಯರು ಕರೆದೊಯ್ಯಲಿದ್ದಾರೆ."

"ಎಲ್ಲಿಗೆ?"

"ಆಕಾಶಕ್ಕೆ!"

"ಮಂಗಳೂರಿಗೇನು?"

"ಮತ್ತೆಲ್ಲಿಗೆ?"

ಗೋಡೆಗೆ ಕಿವಿಗೊಟ್ಟು ನಿಂತಿದ್ದ ರಂಗಮ್ಮ ಈ ಮಾತುಗಳನ್ನು ಕೇಳಿ ವಿಜಯಳಿದ್ದೆಡೆಗೆ ಧಾವಿಸಿದಳು.

" ಮಗೂ, ವಿಜಯಾ! ನೀನು ಮಂಗಳೂರಿಗೆ ಹೋಗಲಿರುವಿ! "

" ಹಾಂ! "

" ಹೌದಮ್ಮಾ! "

" ಅನಂತರಾಯರು ಅಲ್ಲೇ ಇರುವುದಲ್ಲವೆ? "

" ಹೌದು! "

' ಎಂದು ನಾನು ನಿನ್ನಿಂದ ದೂರಾಗಿ ಮಂಗಳೂರು ಸೇರಿದೆನೊ ಅಂದಿನಿಂದ ನಿನ್ನದೆ ನೆನಪು; ನನ್ನ ಹೃದಯ ನಿನ್ನ ದರ್ಶನಕ್ಕಾಗಿ ಸದಾ ಹಾತೊರೆಯುತ್ತಿದೆ! ' ಎಂದು ಅನಂತ ಬರೆದಿದ್ದ ಪತ್ರದೊಳಗಿನ ವಾಕ್ಯವನ್ನು ವಿಜಯ ನೆನೆದುಕೊಂಡು ನವಿದಳು, ಮನದೊಳಗೆ. ಆ ರಾತ್ರಿ ಕಳೆದು ಬೆಳಗಾದರೆ ಅನಂತ–ವಿಜಯರ ಪರಸ್ಪರ ದರ್ಶನವಾಗುವುದು. ಆದರೆ ಅಂದಿನ ರಾತ್ರಿಯನ್ನು ಕಳೆಯಬೇಕಲ್ಲ? ಅದು ಹೇಗೆ? ಅದು ಒಂದು ಯುಗವಾಗಿ ಪರಿಣಮಿಸಿದೆ, ವಿಜಯಳಿಗೆ. ಆದರೆ ತನ್ನ ಆಶ್ರಮದ ಜೀವನವನ್ನು ಅವಳು ಮರೆಯಲಿಲ್ಲ. ಅದನ್ನು ನೆನೆದಾಗ ಅವಳಿಗೆ ದುಃಖವಾಗುತ್ತಿದೆ. ತನ್ನ ಪ್ರಾಣಪ್ರಿಯನೊಡನೆ ಕುಳಿತು ಸರಸಸಲ್ಲಾಪಗಳನ್ನಾಡಿದ ಆ ಮಧುರ ಮನೋಹರವಾದ ಆಶ್ರಮದ ವೃಂದಾವನವನ್ನು ವಿಜಯ ಮರೆಯುವುದಾದರೂ ಹೇಗೆ? ಕಣ್ವಾಶ್ರಮವನ್ನು ಬಿಟ್ಟು ತೆರಳಲನುವಾದ ಶಕುಂತಳೆಗೆ ಆಗ ಎಷ್ಟು ದುಃಖವಾಯಿತೋ ಈಗ ಅಷ್ಟೇ ದುಃಖ ವಿಜಯಳಿಗೂ.

ಮನುಷ್ಯಪ್ರಪಂಚ ಮಾಂಸದ ಮುದ್ದೆಗಾಗಿ ಎಷ್ಟೊಂದು ಚಿಂತೆಯನ್ನನುಭವಿಸುತ್ತಿದೆ! ಹೆಣ್ಣಿಗಾಗಿ ಗಂಡು, ಗಂಡಿಗಾಗಿ ಹೆಣ್ಣು ತೊಳಲಾಡುತ್ತಿದೆ! ಮನುಷ್ಯ ಅದಕ್ಕೆ ಪ್ರೇಮವೆಂಬ ಹೆಸರಿತ್ತು ಪಾವನ ಮಾಡಿದ್ದಾನೆ. ಅದರ ಮಧ್ಯೆ ಎಡರುತೊಡರುಗಳೆಷ್ಟು? ಸಮರವೆ ಆಗಿ ಬಿಡುತ್ತಿದೆ. ಗಂಡು–ಹೆಣ್ಣು ಸಾಮಿಪ್ಯವನ್ನು ಬಯಸಿದರೆ ದೈವ ಅವರನ್ನು ಅಗಲಿಸಿ ದೂರವಿರಿಸುತ್ತದೆ.

ಮಾನವಪ್ರೇಮವು ಲೋಕದಲ್ಲಿ ಉದ್ಭವಿಸದಿರುತ್ತಿದ್ದರೆ ಈ ಬೆಳವಣಿಗೆ ಹೇಗಾಗುತ್ತಿತ್ತು? ಪವಿತ್ರ ಪ್ರೇಮವು ಹೆಚ್ಚಬೇಕಾದರೆ ಮಾನವಕೋಟಿಯ ಹೃದಯ ನಿರ್ಮಲವಾಗಬೇಕು. ಸ್ತ್ರೀ ಅಥವಾ ಪುರುಷನ ಹೃದಯದಲ್ಲಿ

ಪರಸ್ಪರ ಅಕಳಂಕಿತ ಪರಿಶುದ್ಧವಾದ ಮೂರ್ತಿ ಮೂಡಬೇಕು. ಇದೇ ಪ್ರಪಂಚದ ಪವಿತ್ರ ಪ್ರೇಮ! ಕಣ್ಣಿಗೆ ಕಂಡ ಹೆಣ್ಣನ್ನು ಬಯಸಿ ಬೆನ್ನು ಹತ್ತುವ ದುರಾಚಾರಿಗಳಿಂದ ಸಮಾಜಾಭಿವೃದ್ಧಿಯಾಗುವುದಿಲ್ಲ. ಕೀಳು ರುಚಿಗಳನ್ನೆ ಹೆಚ್ಚುಹೆಚ್ಚಾಗಿ ಜನತೆಯ ಕಣ್ಣಿಗೆ ಹಿಡಿದು ತೋರಿಸಿ ಅವರನ್ನು ಹಾಳುಗೆಡಹುತ್ತಿರುವ ಇಂದಿನ ಚಲನಚಿತ್ರಗಳೂ ಸಮಾಜಕ್ಕೆ ಒಂದು ದೊಡ್ಡ ಕೊಡಲಿಯಾಗಿದೆ ಎಂದು ಹೇಳಬಹುದು! ಈ ಚಲನಚಿತ್ರಗಳು ಅಧೋಗತಿಗೆ ಇಳಿಯುತ್ತಿರುವ ಜನತೆಯನ್ನು ಮೇಲೆತ್ತಿ ತರುವುದರ ಬದಲು ಇನ್ನೂ ಕೆಳಕ್ಕೇ ಇಳಿಸುತ್ತಿವೆ!

ವಿಜಯ ನಿದ್ರಾವಶಳಾಗಿದ್ದರೂ ಅವಳ ಮನೋನಯನಗಳು ತೆರೆದೇ ಇದ್ದವು. ಅವುಗಳು ಅವಳ ಭವಿಷ್ಯತ್ತನ್ನು ಕುರಿತು ಹಲವಾರು ಸವಿನುಡಿಗಳ ನ್ನಾಡಿರಬೇಕು. ಅವಳು ಆ ಗಾಢ ನಿದ್ರೆಯಲ್ಲೂ ಕಲಕಲ ರವ ಮಾಡಿ ನಕ್ಕಳು. ವಿಜಯ ರಂಗಮ್ಮನೊಟ್ಟಿಗೆ ಮಲಗಿದ್ದಳು; ರಂಗಮ್ಮ ಈ ದನಿ ಕೇಳಿ ವಿಜಯಳನ್ನು ತಟ್ಟಿ ಎಬ್ಬಿಸಿದಳು. ವಿಜಯ ಎಚ್ಚರಗೊಂಡು ಕಂಬನಿ ಯನ್ನು ಒರಸಿಕೊಂಡಳು.

"ವಿಜಯಾ! ನಿದ್ದೆಯಲ್ಲಿ ನಕ್ಕಿಯೇಕೆ?"

"ಅದ್ಯಾರೊ ಸ್ತ್ರೀಯೊಬ್ಬಳು ಪೀತಾಂಬರವನ್ನುಟ್ಟು ವಿಭೂತಿಯಿಂದ ಅಲಂಕೃತಳಾಗಿ ಕೈಯಲ್ಲಿ ಬಂಗಾರದ ಶೂಲ ಹಿಡಿದು ಬಂದು, ನನ್ನ ಸಮೀಪದಲ್ಲಿ ಕುಳಿತು ಹಣೆಯ ಮೇಲೆ ಕೈಯ್ಯಾಡಿಸುತ್ತಾ ಅನೇಕ ಹಿತನುಡಿಗಳನ್ನಾಡಿ ಕಡೆಗೆ, 'ಇದು ನಿನ್ನ ಸುಖಚಿಹ್ನೆ!' ಎಂದಂತಾಯಿತು. ಆಗಲೆ ನಾನು ನಕ್ಕದ್ದು."

ವಿಜಯ ನಿದ್ರಿಸುತ್ತಿದ್ದಾಗ ರಂಗಮ್ಮ ಅವಳ ಹಣೆಯನ್ನು ಸವರುತ್ತ, 'ನಿನ್ನಿಂದ ಅನಂತನನ್ನು ದೂರವಾಗಿಸಿದ ದೇವರೆ ಇಂದು ನಿನ್ನನ್ನು ಆತ ನಿದ್ದಲ್ಲಿಗೆ ಕರೆದೊಯ್ಯುತ್ತಿದ್ದಾನೆ! ಇದು ನಿನ್ನ ಭವಿಷ್ಯತ್ತಿನ ಆದಿಯ ಸುಖ ಚಿಹ್ನೆ' ಎಂದಿದ್ದಳು.

ರಂಗಮ್ಮನೆ ಕನಸಿನಲ್ಲಿ ವಿಜಯಳಿಗೆ ಲೋಕಮಾತೆಯಾದಳು. ಅವಳ ಅಂತಃಕರಣಪೂರ್ವಕವಾದ ಹೊನ್ನುಡಿಯೆ ವಿಜಯಳಿಗೆ ಲೋಕಮಾತೆಯ ಮುಖದಿಂದ ಹೊರಟ ವಾಣಿಯಾಯಿತು. ವಿಜಯಳ ಕನಸಿಗೂ ರಂಗಮ್ಮ

ನಿಗೂ ಎಷ್ಟೊಂದು ಸಂಬಂಧ! ರಂಗಮ್ಮನಿಗೆ ವಿಜಯಳ ಮಾತು ಕೇಳಿ ಆಶ್ಚರ್ಯ ವಾಯಿತು! ಆದರೆ ಅವಳು ಅದನ್ನು ತೋರಗೊಡಲಿಲ್ಲ.

ರಂಗಮ್ಮ ವಿಜಯಳನ್ನು ತನ್ನ ಹೊಟ್ಟೆಯ ಮಗಳಂತೆ ಭಾವಿಸಿ ನಿದ್ದೆ ಯಲ್ಲಿದ್ದವಳನ್ನು ತನ್ನೆದೆಗಪ್ಪಿಕೊಂಡು ಅವಳ ಹಣೆಗೊಂದು ಮುತ್ತಿಟ್ಟಳು. ಗಾಢನಿದ್ದೆಯಲ್ಲಿದ್ದವಳ ಕೋಮಲ ಕಾಯವನ್ನು ನೋಡಿ ಹಿರಿಹಿರಿ ಹಿಗ್ಗಿದಳು ರಂಗಮ್ಮ—ಆ ರಾತ್ರಿ.

೨೪

ಇತರರನ್ನು ಅಧಮರೆಂದೆನಬೇಕಾದರೆ ತಾನು ಉತ್ತಮನಾಗಿ ಒಳ್ಳೆಯ ದಾರಿಯಲ್ಲಾದರೂ ನಡೆಯುತ್ತಿರಬೇಕು. ಹಾಗಾದರೆ ಮಾತ್ರ ವೈರಿಗಳ ಮಧ್ಯೆ ತಲೆಯೆತ್ತಿ ನಡೆಯಬಹುದು! ಯಾವೊಂದು ಸದ್ಗುಣವೂ ಇಲ್ಲದವನಿದ್ದರೆ ಅವನು ಅಮಾನುಷ ಪಶುವಿಗಿಂತಲೂ ಕಡೆ. ಎಲ್ಲ ವಿಧಗಳಲ್ಲಿಯೂ ಮನುಷ್ಯ ಉತ್ತಮನೆನಿಸಿಕೊಳ್ಳಲು ಸಾಧ್ಯವಿಲ್ಲವೇನೊ ನಿಜ, ಈ ಪ್ರಪಂಚದಲ್ಲಿ. ಹಾಗೆಂದು ತನ್ನಿಂದಾದಷ್ಟು ಅನ್ಯಾಯಗಳನ್ನು ಮಾಡುತ್ತ ಹೋಗುವುದೆ? ಅತ್ತೆ ಯಿಲ್ಲದೆ ಸೊಸೆ ಉತ್ತಮಳು, ಸೊಸೆಯಿಲ್ಲದ ಅತ್ತೆ ಗುಣವಂತಳು ಎಂಬಂತಾ ಗದೆ, ಅತ್ತೆಯಿದ್ದು ಸೊಸೆ ಉತ್ತಮಳಾಗಬೇಕು ಮತ್ತು ಸೊಸೆಯಿದ್ದು ಅತ್ತೆ ಗುಣವಂತಳಾಗಬೇಕು. ವೈರಿಯಾದವನು ಸದಾ ತನ್ನ ವೈರಿಯನ್ನು—ಬೇಟೆ ಗಾರನು ಬಡಪ್ರಾಣಿಗಳ ಬೆನ್ನು ಹತ್ತುವಂತೆ—ಬೆನ್ನು ಹತ್ತುತ್ತಿರುವನು. ನಮ್ಮ ವೈರಿಯಾದವನು ನಾವು ತಪ್ಪು ಮಾಡುವುದನ್ನೇ ಕಾಯುತ್ತಿರುತ್ತಾನೆ. ಸದಾ ತನ್ನ ಸೇಡನ್ನು ತೀರಿಸಿಕೊಳ್ಳಲು ಹಂಚಿಕೆ ಹಾಕುತ್ತಿರುತ್ತಾನೆ. ಇಂಥ ಸಂದರ್ಭಗಳು ಸಂಭವಿಸುವುದೆಲ್ಲಿ—ಹಣವಂತರಲ್ಲಿ ಮತ್ತು ಅತಿ ದೊಡ್ಡ ಬುದ್ಧಿ ವಂತರಲ್ಲಿ! ಹಣವಂತನಾದವನು ದರ್ಪದಿಂದ ಅಕೃತ್ಯಗಳನ್ನು ಮಾಡಲು ಹಿಂದೆ ಮುಂದೆ ನೋಡುವುದು ಕಡಿಮೆ. ಸಿರಿಯು ಇರುವವರೆಗೆ ಮಾತ್ರ ಅವನು ಈ ಮಟ್ಟದಲ್ಲಿ ಇರುತ್ತಾನೆ!

ಅತಿ ದೊಡ್ಡ ಬುದ್ಧಿವಂತರಿಗೆ ಒಮ್ಮೊಮ್ಮೆ 'ಬುದ್ಧಿವಂತರಿಗೆ ಮೂರು ಕಡೆಯಲ್ಲಿ' ಎಂಬಂತಾಗಿ ಬಿಡುವುದು! ಹೇಳುವುದು ಶಾಸ್ತ್ರ, ಇಕ್ಕುವುದು ಗಾಳ—ಎಂದಾಗಿ ಬಿಡುವುದು.

* * * *

ಮದನಪಲ್ಲಿ

ಶ್ರೀರ್ಘರೂಪ ಸಮಾನರಾನ ಭಾವನವರ ಸನ್ನಿಧಾನಕ್ಕೆ, ಮೈದುನ ತೇಜಪಾಲನು ಬೇಡುವ ಆಶೀರ್ವಾದಗಳು.

ಮನೆ ಬಿಟ್ಟು ತಿಂಗಳೆರಡು ಕಳೆದು ಹೋಯಿತು. ಇಲ್ಲಿ ಜೀವನ ತೆಗೆಯುವುದೆ ಬಹಳ ಕಷ್ಟ. ಒಂದು ಒಂದೂವರೆ ತಿಂಗಳ ತನಕ ಹೋಟಲಿನ ಊಟವನ್ನೆ ನಾಯಿಗೂ ಬೇಡ ಎಂಬಂತಿದ್ದರೂ ಉಪಾಯ ವಿಲ್ಲದೆ ಊಟ ಮಾಡಿದೆ. ಈಗ ಊಟಕ್ಕೆ ಬೇರೆ ಒಬ್ಬ ಹೆಂಗಸಿನ ಮನೆ ಯಲ್ಲಿ ಏರ್ಪಡಿಸಿದ್ದೇನೆ. ಆದ್ದರಿಂದ ಆರೋಗ್ಯದ ಮಟ್ಟಿಗೆ ಏನೂ ತೊಂದರೆಯಿಲ್ಲ. ಆ ಹೆಂಗಸು ಸದ್ಯದಲ್ಲೆ ಸ್ವದೇಶಕ್ಕೆ ತೆರಳಲಿದ್ದಾಳೆ. ಹಿಂತಿರುಗಿ ಬರುವ ತನಕ ಅವಳ ಮನೆ ನನ್ನ ವಶದಲ್ಲೆ ಇರುತ್ತೆ. ಅಡಿಗೆ ಮಾಡುವುದಕ್ಕೆ ಜನವಿಲ್ಲದೆ ತೊಂದರೆಗಿಟ್ಟಿದೆ. ಹೇಗೂ ಇನ್ನು ಮೂರು ಮೂರೂವರೆ ತಿಂಗಳಷ್ಟೆ ಉಳಿದಿದೆ ಮದುವೆಗೆ. ಅದುವರೆಗೆ ನಮ್ಮ ಮನೆಯ ಊಳಿಗದವಳನ್ನಾದರೂ ದಯಮಾಡಿ ಕಳುಹಿಸಿಕೊಡುವಿರೆಂದು ನಂಬುತ್ತೇನೆ. ಯಾವ ಬಸ್ಸಿಗೆ ಕಳುಹಿಸಿ ಕೊಡುತ್ತೀರೆಂಬುದನ್ನು ದಿನ ನಿರ್ಧರಿಸಿ ತಿಳಿಸಿದರೆ ಸಂತೋಷ. ಕೂಡಲೆ ಆದರೆ ಉತ್ತಮ.

ಇತಿ,

ಬೇಡಿಕೊಳ್ಳುವ ಆಶೀರ್ವಾದಗಳು,

ತೇಜಪಾಲ

ಮಥುರಾನಾಥರಾಯರು ಪತ್ರವನ್ನು ಓದುತ್ತ ಕುಳಿತಿದ್ದರು. ತೇಜ ಪಾಲನಿಗೆ ಊಟಕ್ಕೆ ತೊಂದರೆಯಾಗಿದೆ, ಈಗ ಯಾರನ್ನು ಕಳುಹಿಸಿಕೊಡು ವುದು? ರಂಗಮ್ಮನನ್ನು ಕಳಿಸಿಕೊಡುವುದು ತೇಜಪಾಲನಿಗೆ ಗೌರವಾಸ್ಪದ ವಾದುದು! ಆದರೆ ಹೇಗೆ? ಪದ್ಮಮ್ಮನನ್ನು ಕಳಿಸಿಕೊಡೋಣವೆಂದರೆ ತಮಗೆ ಊಟಕ್ಕೇನೂ ತೊಂದರೆಯಾಗದು, ನಿಜ. ರಂಗಮ್ಮ ರುಚಿಯಾದ ಅಡಿಗೆ ಮಾಡುತ್ತಿದ್ದಳು. ಏನು ಮಾಡುವುದು? ಮಥುರಾನಾಥರಿಗೆ ಎರಡು ದೋಣಿ ಗಳಲ್ಲಿ ಕಾಲಿಟ್ಟಂತಾಗಿದೆ.

"ಪದ್ಮಾ?" ಎಂದು ಹೆಂಡತಿಯನ್ನು ಕೂಗಿದರು.

" ಯಾರ್ದೂ ಅಂದ್ರೆ ಪತ್ರ ? ಅನಂತನ್ದೆ ? "

" ಊಹುಂ ! ತೇಜಪಾಲನಿಂದ."

" ಏನಂತೆ ? "

" ಎರಡು ಮೂರು ತಿಂಗಳು ಹೊಟೇಲಿನ ಪರೀಕ್ಷೆ ಆದ ತರುವಾಯ ಯಾರೋ ಹೆಂಗಸೊಬ್ಬಳ ಮನೆಯಲ್ಲಿ ಊಟದ ವ್ಯವಸ್ಥೆ ಮಾಡಿದ್ದನಂತೆ. ತೃಪ್ತಿಯಾಗಿದ್ದಿತಂತೆ. ಈಗ ಅವಳು ಸ್ವದೇಶಕ್ಕೆ ಹೋಗಲಿದ್ದಾಳೆ. ಇನ್ನು ಹೇಗೂ ತನ್ನ ಮದುವೆಗೆ ಮೂರು ಮೂರೂವರೆ ತಿಂಗಳಷ್ಟೆ ಉಳಿದಿರುವುದರಿಂದ ನೀನಾಗಲಿ ರಂಗಮ್ಮನಾಗಲಿ ಅಲ್ಲಿ, ಆ ಮನೆಯಲ್ಲಿ ಹೋಗಿ ನಿಲ್ಲಬೇಕಂತೆ. ಆ ಹೆಂಗಸು ಹೋದರೂ ಮನೆ ಇವನ ಕೈಯಲ್ಲೆ ಇರುವುದಂತೆ."

" ಊಟಕ್ಕೆ ತೊಂದರೆಯಾಗಿದೆಯೊ ಏನೊ ? "

" ಆ 'ಏನೊ' ಎಂಬ ಪ್ರಶ್ನೆಯೇಕೆ ? ಊಟಕ್ಕೇನೆ ! ನಾನು ನಿನ್ನೊಡನೆ ಹೇಳಿದುದೇನು ಇಂಗ್ಲೀಷಿನಲ್ಲೆ ? ಅಚ್ಚ ಕನ್ನಡದಲ್ಲೆ ಹೇಳಿದೆ.?

" ಹೌದು, ಈಗ ಹೋಗೋರ್ಯಾರು ? "

" ಅದೇ ನನಗೂ ಯೋಚನೆಗಿಟ್ಟಿದೆ ! "

" ಯಾವ ಜಾತಿ ಹೆಂಗ್ಸೊ ಏನೊ ಅವಳು ? ಯಾರು ? ಯಾರ ಮನೆ " ಆಂಗ್ಲ ಸ್ನೇಹಿತಳ ಮನೆಯೊ ಏನೊ ! ಹಾಗಲ್ಲದೆ ಸಾಧಾರಣದವರ ಮನೇಲಿ ಅವನು ಇರ್ತಾನೆಯೆ........ವಿಷಯ ಹೀಗಿರೋವಾಗ........ಇಲ್ಲಾದ್ರೆ ನಾನೇ ಹೋಗ್ತಿದ್ದೆ ! ರಂಗಮ್ಮನನ್ನೆ ಕಳಿಸೋಣಾಂದ್ರೆ—ಅವನಿಗೆ ಹಿಡಿಯುತ್ತೊ ಇಲ್ವೊ ? "

" ಪರವಾಯಿಲ್ಲ, ಅವಳನ್ನಾದರೂ ಕಳಿಸೀಂತ ಬರೆದಿದ್ದಾನೆ."

" ನಾನು ಅಡಿಗೆ ಮಾಡಿದರೆ ನಿಮಗೆ ಹಿಡಿಯೋಲ್ಲ ; ಮತ್ತೆ ಅವಳನ್ನು ಕಳಿಸಿ ಕೊಟ್ಟರೆ ಇಲ್ಲಿ ಏನು ಮಾಡೋದು ? "

" ಅದೇ........"

" ವಿಷಯ ಹೀಗಂತ ಒಂದು ಕಾಗದ ಹಾಕಿ ; ಅದಕ್ಕೆ ಉತ್ತರ ಏನು ಬರುತ್ತೆ ನೋಡೋಣ. ಬೇರೆ ಉಪಾಯ ಇಲ್ಲಾಂತಾದ್ರೆ ರಂಗಮ್ಮನನ್ನೆ ಕಳಿಸಿ ಕೊಡೋಣ."

" ಹಾಗೇ ಮಾಡೋಣ."

ರಂಗಮ್ಮನಿಗೆ ಪದಾರ್ಥ ಮಾಡ ಹೇಳಲು ಪದ್ಮಮ್ಮ ಅಡಿಗೆಮನೆಗೆ ಹೋದರು. ಮಥುರಾನಾಥರು ಕೈಯಲ್ಲಿದ್ದ ಪತ್ರವನ್ನು ಮಡಚಿ ಮೇಜಿನ ಮೇಲಿಟ್ಟು ಕುರ್ಚಿಯಿಂದ ಏಳುತ್ತಿರುವಷ್ಟರಲ್ಲಿ "ನಮಸ್ಕಾರ, ಸ್ವಾಮಿ" ಎಂದು ಯಾರೊ ಕೂಗಿದ್ದನ್ನು ಕೇಳಿ ಹಿಂತಿರುಗಿ ನೋಡಿ ಬಂದವರಿಗೆ ಸ್ವಾಗತ ನೀಡಿ ಕುಳಿತರು.

"ಏನು ಸೆಟ್ರೇ, ಬಹಳ ಅಪರೂಪ........ಅತ್ತಿ ಹೂವಾಗಿ ಬಿಟ್ಟಿರಲ್ಲ."

"ಹಂಹಹ!........ಸಾಯೋ ತನಕ ಭೂಮಿ ಮೇಲೆ ಹೊರಳಾಡುವ ಮಾಂಸದ ಗೊಂಬೆಗಳು ನಾವು; ನಮ್ಮಂಥವರಿಗೆ ಅದೆಲ್ಲ ಎಲ್ಲಿ ಸ್ವಾಮಿ? ಜೀವ ಹೋಗೋ ಹಾಂಗೆ ಹೆಣಗಾಡೋದು ನಾವು. ಆದರೆ ಏನಾದರೂ ಪ್ರಯೋಜನ ಇದೆಯೆ?"

"ಏನದು?"

"ಎಲ್ಲಾ ಆ ಕೆಂಪುಟೋಪಿಯವರ ಬಾಯಿಗೇ ಆಯ್ತಲ್ಲ. ಒಬ್ಬಿಬ್ಬರಿಗೆ ಕೊಟ್ರೆ ಸಾಕೆ? ಅವನಿಗೆ ಕೊಟ್ಟರೆ ಇವ ಹಿಡೀತಾನೆ, ಇವನಿಗೆ ಕೊಟ್ಟರೆ ಅವ ಹಿಡೀತಾನೆ. ಲಂಚಕ್ಕೂ ಒಂದು ಲೆಕ್ಕ ಮಿತಿ ಬೇಡವೆ? ಹಿಂದೆಲ್ಲಾ ನಾವಾಗಿ ಕಾಫಿ ಕುಡಿಲಿಕ್ಕೇಂತ ಏನಾದರೂ ಕೊಡೋದು ವಾಡಿಕೆ. ಈಗ ನಾಚಿಕೆಯಿಲ್ಲದೆ ಬಾಯಿಬಿಟ್ಟು ಕೇಳ್ತಾರೆ! ಮನುಷ್ಯನನ್ನು ಹಸಿ ಹಸಿ ತಿನ್ನುತ್ತಾರೆ! ಮೇಲೆ ಬ್ಲ್ಯಾಕ್ ಮಾರ್ಕೆಟ್ಟಿನಲ್ಲಿ ಒಳ್ಳೆ ಲಾಭ ಅಂತ ಹೇಳ್ತಾರೆ! ಏನೂ ಸುಖ ಇಲ್ಲ, ಸ್ವಾಮಿ."

"ಸರಿ! ಅದು ಯಾವಾಗಲೂ ಇದ್ದದ್ದೆ! ಪ್ರಪಂಚದಲ್ಲಿ ಮನುಷ್ಯ ತಾನು ಸುಖೀಂತ ತೋರ್ಪಡಿಸಿಕೊಳ್ತಾನೆ ವಿನಾ ಅವನನ್ನು 'ಸೌಖ್ಯವೆ' ಅಂತ ಕೇಳಿದರೆ ತಿಳಿದೀತು. 'ಹಾಂ! ಸಾಧಾರಣ ಮಟ್ಟಿಗೆ' ಅನ್ನುವ. ಹಾಗೆ ಹೇಳದಿದ್ದರೂ ಅವನ ಮುಖಚಿಹ್ನೆಯಿಂದ ತಿಳೀಬಹುದು.....ಅಷ್ಟೆಲ್ಲ ಏಕೆ ಸೆಟ್ರೆ! ಈಗ ನನ್ನನ್ನೆ ಉದಾಹರಣೆಗಾಗಿ ತೊಗೊಳ್ಳಿ. ನೀವೀಗ ನನ್ನನ್ನು ನೋಡಿದರೆ ಏನೆಂತೀರಿ?"

"ನಿಮಗೇನು?"

"ನೋಡಿ! ನಿಮ್ಮ ಮುಖದಿಂದ ಅದೇ ವಾಕ್ಯ ಹೊರಡುತ್ತಿದೆ. ನನ್ನ ತಲೆ ಮೇಲಿರುವ ತಾಪತ್ರಯಗಳು ನನಗೇ ಗೊತ್ತು!"

" ಸರಿ ! "

" ಹಾಂ ! ವಿಷಯ ತಿಳೀಲಿಲ್ವಲ್ಲ."

" ಇಲ್ಲ ರಾಯರೆ, ನಾನಾಗಿ ಬರ್ಲಿಲ್ಲ. ನೀವೇ ಏಕೋ ಕರೆದಿರೀಂತ ನಮ್ಮ ಗಣೇಶ ಶಾಸ್ತ್ರಿಗಳು ಹೇಳಿದರು."

" ಹೊ ! ಹೌದು. ನೋಡಿ, ಹೇಗಿದೆ ನೋಡಿ, ನಮ್ಮ ಕಥೆ. ಹೇಳಿದ್ದು ಕೇಳಿದ್ದು ಅಲ್ಲಿಂದಲ್ಲಿಗೆ ಮರ್ತು ಹೋಗಿಬಿಡುತ್ತೆ."

" ಸಹಸ್ರಾರು ವಿಚಾರ ತಲೆಯೊಳಗಿದ್ರೆ ಹಾಗೇ."

" ನಮಗೊಂದು ಜನ ಬೇಕಾಗಿದೆ ಅಡಿಗೆಗೆ...."

" ಏಕೆ ? "

" ಇಲ್ಲಿಗಲ್ಲ ! ನಮ್ಮ ತೇಜಪಾಲನಿಗೆ. ಗಂಡಸಾದ್ರು ಪರವಾ ಇಲ್ಲ. ಬ್ರಾಹ್ಮಣರೆ ಆಗಬೇಕೂಂತ ಏನೂ ಇಲ್ಲ. ಅವನು ಹೇಳಿದ್ದೆಲ್ಲಾ ಮಾಡಬೇಕು, ಅಷ್ಟೆ ! ಏಕೇಂದ್ರೆ, ನಿಮಗ್ಗೊತ್ತಿರಬಹುದು—ಅವನು ಮಾಂಸಾಹಾರಿ ! "

" ಗೊತ್ತಿದೆ ! ಆದರೆ...."

" ಆದರೇನು ? "

" ಏನಿಲ್ಲ ; ನೋಡ್ತೇನೆ ! "

" ನೋಡ್ತೇನೆ ಅಂದ್ರೆ ಸಾಲದು. ಆ ಕಾರ್ಯ ನೀವು ಸಾಧಿಸಲೇ ಬೇಕು."

" ಆಗಲಿ, ದೇವ್ರಿದ್ದಾನೆ. ನಮ್ಮ ಲೇವಾದೇವೀಲಿ ಏನೋ ಸ್ವಲ್ಪ ಬಾಕಿ ಇದೇಂತ ಕಾಣುತ್ತೆ ; ಅದರೊಂದಿಗೆ ಒಂದು ಐವತ್ತು ಸೇರಿಸಿ ಕೊಟ್ಟರೆ.... ಉಪಕಾರವಾಗಿತ್ತು ! "

" ಅಹಾ ! ಅದಕ್ಕೇನು ? "

ಇದೇ ಉಚಿತ ಸಮಯವೆಂದರಿತ ಸೋಮಪ್ಪಸೆಟ್ಟರು ಬಾಣವನ್ನು ಗುರಿಯಿಟ್ಟು ಹೊಡೆದರು ; ಸೋಮಪ್ಪ ಸೆಟ್ಟರೆಂದರೆ ಹಿಂದಿನ ಬ್ರಹ್ಮಾವರದ ಬಿ. ಎಮ್. ಸೋಮಪ್ಪ ಸೆಟ್ಟರೆ !

ಬಡವನಾದವನು ಹಣವಂತರಿಂದ ಹಣ ಹೊಡೆಯಬೇಕಾದರೆ ಹಿಡಿಯ ಬೇಕಾದ ಉಪಾಯ ಇದೇ ! ನಮ್ಮಿಂದ ಏನಾದರೂ ಅವರಿಗೆ ಕಾರ್ಯವಾಗ ಬೇಕಾಗಿದೆ ಎಂದಾಗ ನಾವು ನಮ್ಮ ' ಉಪಾಯ 'ದ ತಿಜೋರಿಯನ್ನು ತೆರೆಯ

ಬೇಕು! ಇನ್ನೊಂದು ಉಪಾಯವೂ ಇದೆ. ಅದು, ತಮ್ಮನ್ನು ಎಲ್ಲರೂ ಹೊಗಳಬೇಕು, ಹೊಗಳಿಸಿಕೊಳ್ಳಬೇಕು. ಇತರರು ತನ್ನನ್ನೊಬ್ಬ ಕೊಡುಗೈಯವನೆಂದು ತಿಳಿದುಕೊಳ್ಳಬೇಕು, ಲೋಭಿಯೆಂದು ತಿಳಿದುಕೊಳ್ಳಬಾರದು—ಎಂಬ ವಿಧವಿಧವಾದ ಒಂದು ತರದ ಅಭಿಮಾನ, ಹೆಮ್ಮೆ ಉಳ್ಳವರ ಮೇಲೆ ಪ್ರಯೋಗಿಸಬಹುದಾದದ್ದು! ಇಂಥವರು ಯಾರೊಡನೆಯಾದರು ಬಹು ವಿಜೃಂಭಣೆಯಿಂದ ಆನಂದತುಂದಿಲರಾಗಿ ಪ್ರಪಂಚವನ್ನೆ ಮರೆತು ದೊಡ್ಡದೊಡ್ಡ ಮಾತುಗಳನ್ನಾಡುತ್ತ ಸಂಭಾಷಣೆಯಲ್ಲೆ ಮೈಮರೆತಿರುವ ವೇಳೆಯಲ್ಲಿ, ಸಂದರ್ಭವರಿತು, ಯಾರಾದರೂ ಏನಾದರೂ ಕೇಳಿದರೆ ಕೇಳಿದಷ್ಟಲ್ಲದಿದ್ದರೂ ಅದರ ಅರ್ಧ ಅಥವಾ ಆಗ ಅವರಲ್ಲಿ ಇದ್ದಷ್ಟನ್ನಾದರೂ ತೆಗೆದು ಕೊಟ್ಟು ಬಿಡುತ್ತಾರೆ!

* * * *

ಸುಂದರ ಭವನ—ತೋಟದಲ್ಲೊಂದೇ ಮನೆ. ವಿದ್ಯುದ್ದೀಪಗಳು ಎಡೆಬಿಡದೆ ಪ್ರತಿಯೊಂದು ಕೋಣೆಗಳೊಳಗೂ ಹೊಳೆದು ಉರಿಯುತ್ತಿವೆ. ಚಿತ್ರವಿಚಿತ್ರಗಳಿಂದ ಗೋಡೆಗಳು ಸಾರಣೆ ಮಾಡಲ್ಪಟ್ಟಿದ್ದುದರಿಂದ ಆ ಬೆಳಕಿಗೆ ಸ್ವರ್ಗವೆಂದೇ ಹೇಳಬೇಕಾಗಿತ್ತು—ಆ ಮನೆಯನ್ನು. ಆದರೆ ಗೋಡೆಗಳ ಮೇಲೆ ತೂಗುತ್ತಿದ್ದ ವಿದೇಶೀ ಲಲನೆಯರ ನಗ್ನ ಚಿತ್ರಗಳೂ ಅನೇಕ ಸ್ವದೇಶೀ ಮತ್ತು ಪರದೇಶೀ ಸಿನಿಮಾ ನಟಿಯರ ಚಿತ್ರಗಳೂ ಒಬ್ಬೊಬ್ಬರಲ್ಲಿ ಒಂದೊಂದು ಭಾವನೆಯನ್ನು ಸೃಷ್ಟಿಸುತ್ತಿತ್ತು. ಹೊರಮಂಟಪದಲ್ಲಿ ಒಂದು ತೈಲಚಿತ್ರವಿದೆ. ಮನೆಯೊಳಗೆ ಯಾವ ಆತಂಕವೂ ಇಲ್ಲದೆ ವಾಯುಸಂಚಾರ ನಡೆಯುತ್ತಿದ್ದಿತು. ನೆಲದ ಮೇಲೆ ಬೇಕಾದಷ್ಟು ಕುರ್ಚಿ, ಮೇಜುಗಳು, ಆರಾಮಾಸನಗಳು ತುಂಬಿದ್ದವು. ಒಳಗಿನಿಂದ ಹೊರಡುವ ಹಾಡು ಬಹಳ ದೂರದವರೆಗೆ ಕೇಳಿ ಬರುತ್ತಿದೆ.

ತೇಜಪಾಲ ಸೋಫಾವೊಂದರ ಮೇಲೆ ಬಿದ್ದುಕೊಂಡಿದ್ದನು. ಗಾನಾಮೃತವನ್ನೀಯುತ್ತಿದ್ದ ರೇಡಿಯೋವನ್ನೇಕೊ ನಿಲ್ಲಿಸಿಬಿಟ್ಟನು. ಯಾರದೊ ಒಂದು ಛಾಯಾಚಿತ್ರವನ್ನು ಕೈಯಲ್ಲಿ ಹಿಡಿದು ನೋಡುತ್ತ ಸಿಗರೇಟನ್ನೆಳೆದು ಹೊಗೆಯ ರಾಶಿಯನ್ನೆ ಹೊರಡಿಸುತ್ತಿದ್ದಾನೆ—ಉಗೆಬಂಡಿಯ ಕೊಳವೆಯಿಂದ ಹೊರಡುವಂತೆ.

" ರೇಡಿಯೋವನ್ನೇಕೆ ಕ್ಲೋಸ್ ಮಾಡಿದಿರಿ ? " ಎಂದಳು ಮೋಹಿನಿ.

" ಮತ್ತೇಕೆ ಸನಿದಪ್ಪ ಅಂತ ! "

" ಆ ಕೀರ್ತನೆಯನ್ನು ಕಿವಿಯಾರೆ ಕೇಳಿದರೇನೆ ಎಷ್ಟೋ ಪುಣ್ಯವಿದೆ! ಯಾರ ಕೀರ್ತನೇಂತ ತಿಳಿದೀರಿ ಅದನ್ನ ? ಪೂಜ್ಯರಾದ ತ್ಯಾಗರಾಜ ಸ್ವಾಮಿಗಳದ್ದು."

" ಇರಬಹುದು. ಆದರೆ ನನಗೇಕೊ ಅದು ಹಿಡಿಸದು."

" ಸರಿ. ನಮ್ಮ ಪತ್ರಕ್ಕೇನೂ ರಿಪ್ಲೈ ಬರ್ಲಿಲ್ವೆ ? "

" ಹಾಂ ! ಅದನ್ನು ಮರತೆ ಬಿಟ್ಟೆ, ಇಗೊ " ಎಂದು ತೇಜಪಾಲ ಪಾಯಿಜಾಮದ ಜೇಬಿನೊಳಗಿಂದ ಒಂದು ಪತ್ರವನ್ನು ತೆಗೆದು ಮೋಹಿನಿಯ ಕೈಗಿತ್ತನು. " ಹಂ ! ಅದಲ್ಲ, ಅದಲ್ಲ. ಬಿಡಿಸಿದೆಯಾ ? " ಎಂದವನೆ ಧಾವಿಸಿ ಬಂದು ಮೋಹಿನಿಯ ಕೈಯಲ್ಲಿದ್ದ ಆ ಪತ್ರಕ್ಕೆ ಹತ್ತಿದ್ದ ಕಾಗದವನ್ನು ತೆಗೆದು ಉಳಿದುದನ್ನು ಮೋಹಿನಿಯ ಕೈಗಿತ್ತನು. ಅವಳು ತೆರೆದು ಓದಲಾರಂಭಿಸಿದಳು.

" ಇದರಲ್ಲೇನಿದೆ ? ಎರಡು ವಾರ ತಡೆ, ಯೋಚಿಸಿ ಮಾಡ್ತೇನೆ ಎಂದಿದೆ."

" ಹೌದು. ಬೆಂದಷ್ಟು ತಡೀ ಬೇಡವೆ ? "

" ಇದೆಲ್ಲಿಂದ ಕನ್ನಡ ಗಾದೇ ಕಲಿತಿರಿ ? "

ಎಂದು ನಕ್ಕಳು ಮೋಹಿನಿ. ಅವನನ್ನು ಪರಿಹಾಸ್ಯ ಮಾಡಿ ನಕ್ಕ ಮುಖದ ಸೌಂದರ್ಯ ನೋಡಿದಾಗ ತೇಜಪಾಲನಿಗೆ ತಡೆಯುವುದಾಗಲಿಲ್ಲ. ವೇಗವಾಗಿ ಹೋಗಿ ಮೋಹಿನಿಯನ್ನಪ್ಪಿಕೊಂಡು ಕುರುಳು ಸರಿಪಡಿಸುತ್ತ ಅವಳ ಹಣೆಗೊಂದು ಮುತ್ತಿಟ್ಟನು. ಮೋಹಿನಿ " ಬಿಡೀಂದ್ರೆ ! " ಎನ್ನುತ್ತ ತೇಜಪಾಲನ ಬಿಗಿಯಾಲಿಂಗನದಿಂದ ಬಿಡಿಸಿಕೊಂಡಳಾದರೂ ಅವನನ್ನು ತಾಗಿಯೆ ಕುಳಿತಳು.

" ನನ್ನ ಕೈಯಿಂದ ಕಸಿದುಕೊಂಡ ಆ ಪತ್ರ ಯಾರದ್ದು ? ನಾನು ನೋಡಬಾರದೆ ? "

" ಅದು ನನ್ನ ಆಫೀಸಿನ ಹೆಡ್‌ಕ್ಲಾರ್ಕನಿಗೆ ಬಂದ ಪತ್ರ ! ಬೆಳಿಗ್ಗೆ ಬಂದಿತ್ತು, ನನಗೆ ನೆನಪೇ ಆಗ್ಲಿಲ್ಲ ಕೊಡಲಿಕ್ಕೆ. ರೆಕಾರ್ಡ್‌ಬಾಕ್ಸ್ ತರೋವಾಗ ಕೊಡೋಣಾಂತ ಇದ್ದೆ. ಅವನು ಬರಲೇ ಇಲ್ಲ. ಹಾಗೇ ಉಳಿಯಿತು. ಇನ್ನು ನಾಳೆ."

" ಎಲ್ಲಿ, ನೋಡೋಣ ? "

" ಇನ್ನೊಬ್ಬರ ಪತ್ರ ನಮಗೇಕೆ ? ನೋಡೋದು ತಪ್ಪು."

ಮೋಹಿನಿ ಮಾತು ಮುಂದರಿಸದೆ ಎದ್ದು ಹೋಗಿ ಹಾಸಿಗೆ ಬಿಡಿಸಿದಳು. ಮೋಹಿನಿಯ ಮಿದುಳು ಯಾವ ರೀತಿಯಲ್ಲಿ ಕೆಲಸ ಮಾಡುತ್ತಿದೆ ಹೇಳುವುದು ಅಸಾಧ್ಯ. ತೇಜಪಾಲ ಮದುವೆಯ ಮಂಟಪದಲ್ಲಿ ಕೂಡುವ ಕಾಲ ಅತಿ ಸಮೀಪವಾಗುತ್ತ ಬರುತ್ತಿದೆ. ' ಹೇಗೆ ? ಇವನನ್ನು ಮದುವೆಮಾಡ ಗೊಡುವುದೆ ? ಮದುವೆ ಮಾಡಿಕೊಳ್ಳಲು ಬಿಟ್ಟರೆ ಮುಂದೆ ನನ್ನನ್ನು ನೋಡಿಯಾನೆ ? ಪ್ರಪಂಚದಲ್ಲಿ ಎಂತಹ ಜನರಿರುವರು ! ದೊಡ್ಡ ದೊಡ್ಡ ಆಫೀಸುಗಳಲ್ಲಿ ಉದ್ಯೋಗ ನೋಡುತ್ತಾರೆ. ಬಹಿರಂಗಕ್ಕೆ ಗೌರವದ ಗಂಟು ಮೋರೆ ಹಾಕಿಕೊಂಡು ಎಲ್ಲರಿಂದಲೂ ಮನ್ನಣೆ ಪಡೆಯುತ್ತಾರೆ. ಎಲ್ಲರಿಂದಲೂ ವಂದಿಸಿಕೊಳ್ಳುತ್ತಾರೆ. ಮರ್ಯಾದೆಯ ಮೂರ್ತಿಗಳಂತೆ ಇದ್ದುಕೊಂಡು ತಮ್ಮನ್ನು ತಾವೇ ಬಾಯಿಬಿಟ್ಟು ಹೊಗಳದಿದ್ದರೂ ಬಾಯಿ ಮುಚ್ಚಿಕೊಂಡೆ ಹೊಗಳಿಕೊಳ್ಳುತ್ತಾರೆ, ಇತರರಿಂದ ಹೊಗಳಿಸಿಕೊಳ್ಳುತ್ತಾರೆ ! ಆದರೆ ಸಮಾಜದ ಕಡೆಗೆ ಅವರು ಗೋಮುಖವ್ಯಾಘ್ರಗಳು ! ಯಾರು ಹಾಳಾಗಿ ಹೋದರೂ ಸತ್ತರೂ ಅವರ ಗಣನೆಗೆ ಬಾರದು. ಆದರೆ ಬಹಿರಂಗದಲ್ಲಿ ಅವರೇ ಸಮಾಜದ ಹಿತಸಾಧಕರು ! ಬಡವರ ಬಾಯಿ ಹೊಟ್ಟೆ ಹೊಡೆದು ತಾವು ಬದುಕುತ್ತಾ ರೇನೊ ನಿಜ ! ಅದೂ ಸಾಲದೆ, ಇಂತಹ ಅನ್ಯಾಯಗಳನ್ನೂ ಮಾಡುತ್ತಾರೆ ! ತೇಜಪಾಲನು ವಿವಾಹವಾದರೆ ಮುಂದೆ ನನ್ನ ಗತಿಯೇನು ?.... ಹೊರದೂಡಿ ದರೆ ? ನಡೆಯಲೇಬೇಕು ! ಹೋಗದೆ ಉಳಿದರೆ ಅವರಿಬ್ಬರ ಅಡಿಯಾಳಾಗಿ ಬಾಳಬೇಕು. ಇದು ಸಾಧ್ಯವೆ ? ಹಾಗೆ ಹೊರದೂಡುವನೆ ? ಹಾಗೆ ಮಾಡಿದರೆ ಯಾರಿಗೆ ಅಗೌರವ ? ಯಾರ ಮರ್ಯಾದೆಗೆ ಕುಂದು ? ಅವನಿಗೆ ! ಕೇಳಲು ಸರಕಾರವಿದೆ !....'

ಎಂದು ಮುಂತಾಗಿ ಯೋಚಿಸಿ ಮೋಹಿನಿ ತನ್ನ ಮತ್ತು ತೇಜಪಾಲನ ಕುರಿತು ಚಿಂತಿಸುತ್ತಿದ್ದಳಾದರೂ ತೇಜಪಾಲ ತನ್ನಿಂದ ಕಸಿದುಕೊಂಡು ತೆಗೆದಿರಿಸಿಕೊಂಡ ಆ ಪತ್ರ ಯಾವುದು, ಯಾರದ್ದಾಗಿರಬಹುದು—ಎಂಬ ಆಲೋಚನೆ ಅವಳ ತಲೆಯನ್ನು ಕೊರೆಯುತ್ತಿತ್ತು.

ಮೋಹಿನಿ ವಿದ್ಯಾವಂತಳು. ಆದ್ದರಿಂದಲೇ ತೇಜಪಾಲನು ಕಸಿದು

ಕೊಂಡ ಕಾಗದದ ಕುರಿತು ವಿಶೇಷವಾಗಿ ಯೋಚಿಸುತ್ತಿದ್ದಳು. ಮೋಹಿನಿ ತೇಜಪಾಲನನ್ನು ಪ್ರೀತಿ ಆದರಗಳಿಂದ ಮನಃಪೂರ್ವಕವಾಗಿ ಪತಿಯನ್ನಾಗಿ ಸ್ವೀಕರಿಸಿದ್ದಳು. ಇಬ್ಬರೂ ಒಬ್ಬರಿಗೊಬ್ಬರು ಒಲಿದಿದ್ದರು. ಈಗಲೂ ಅವರೊಳಗಿನ ಪರಸ್ಪರ ಪ್ರೇಮ ಕಡಿದಿಲ್ಲ, ಕಡಿಮೆಯಾಗಿಲ್ಲ. ಭವಿಷ್ಯತ್ತಿನಲ್ಲಿ ಒಡೆಯುವ ಚಿಹ್ನೆ ಕಂಡುಬರುತ್ತಿದೆ. ಮೋಹಿನಿ ಈಗ ಗರ್ಭಿಣಿ! ಪ್ರಸವವನ್ನು ಆಸ್ಪತ್ರೆಯಲ್ಲಿಯೇ ನಡೆಸುವ್ರದು ಉಚಿತವೆಂದು ಅವನ ಮತ. ಅದೇ ಸಮಯಕ್ಕೆ ಸರಿಯಾಗಿ ವಿವಾಹ ಮುಹೂರ್ತವೂ ಕೂಡಿ ಬರುತ್ತಿದೆ. ಇದೇ ಮೋಹಿನಿಯ ತಲೆಯನ್ನು ಈಗ ತಿನ್ನುತ್ತಿರುವುದು!

ಮಾತ್ರವಲ್ಲ—ಇನ್ನೂ ಒಂದು ಚಿಂತೆ ಮೋಹಿನಿಯನ್ನು ಬಾಧಿಸುತ್ತಿತ್ತು. ಬಡಹುಡುಗಿಯೊಬ್ಬಳನ್ನು ಮೋಹಿನಿ ತನ್ನ ಹೊರಗಿನ ಕೆಲಸಗಳಿಗೆಂದು ನಿಯಮಿಸಿದ್ದಳು. ದಾರಿದ್ರ್ಯದೇವತೆಯೆ ಆ ಹುಡುಗಿಯ ಮನೆಯ ಐಶ್ವರ್ಯವಾಗಿದ್ದುದರಿಂದ ಲಗ್ನದ ಭಾಗ್ಯ ಅವಳಿಂದ ಬಹು ದೂರವಾಗಿತ್ತು. ಹುಡುಗಿ ಬಡ ಮನೆತನದವಳಾದರೂ, ಚಿಂದಿಬಟ್ಟೆಯೆ ಅವಳ ವಸ್ತ್ರಾಲಂಕಾರಗಳಾಗಿದ್ದರೂ ಅವಳ ರೂಪಸೌಂದರ್ಯಕ್ಕೆ ಏನೂ ಕಡಿಮೆಯಿರಲಿಲ್ಲ. ಅದರಲ್ಲೂ ಮೋಹಿನಿಯದೊಂದು ಹಳೆಯ ಸೀರೆ ಅವಳ ಮೈಮುಚ್ಚಿತೆಂದಾಗ ಇನ್ನೇನಾಗಬೇಕಾಗಿದೆ! ತುಂಬಿದ ಮೈ, ಉಬ್ಬಿದೆದೆ, ಅರಳಿದ ಮುಖಕಮಲ, ಎಳೆಯ ಬಾಳೆ ದಿಂಡಿನಂತಿದ್ದ ಅವಳ ಕೋಮಲ ಹಸ್ತಗಳು, ಯಾವಾಗಲೂ ಮೆಲುನಗೆ ನಲಿದಾಡುತ್ತಿದ್ದ ಅವಳ ಚೆಂದುಟಿ—ಆಕೆಯನ್ನು ತೇಜಪಾಲ ಒಮ್ಮೊಮ್ಮೆ ಒಂದೊಂದು ರೀತಿ ದೃಷ್ಟಿಯಿಟ್ಟು ನೋಡುತ್ತಿದ್ದು, ತಾನು ಆತನಿಗೆ ಎದುರಾದಾಗ ಆತ ತಬ್ಬಿಬ್ಬಾದುದನ್ನು ಅನೇಕ ಸಾರಿ ಗಮನಿಸಿದ್ದಳು—ಮೋಹಿನಿ. ಇದನ್ನು ಮನಸ್ಸಿಗೆ ತಂದುಕೊಂಡು ಬೆಂದು ಬೇಗುದಿಗೊಳ್ಳುತ್ತಿದ್ದಾಳೆ. ಅಲ್ಲದೆ ತಾನಿನ್ನು ಹೆರಿಗೆಗೆ ಆಸ್ಪತ್ರೆ ಸೇರಿದರೆ? ಎಂಬ ಚಿಂತೆ ಬೇರೆ. ತಾನು ಆಸ್ಪತ್ರೆ ಸೇರಿದರೆ ಮನೆಯಲ್ಲಿ ಅಡಿಗೆ ಮಾಡಲು ಒಂದು ಆಳು ಇಟ್ಟುಕೊಳ್ಳಬೇಕೆಂದಿದ್ದಾನೆ ತೇಜಪಾಲ. ಅದಕ್ಕೇ ಭಾವನಿಗೆ ಪತ್ರ ಬರೆದಿದ್ದು. ಸಮಯಕ್ಕೆ ಸರಿಯಾಗಿ ಜನ ಬರುತ್ತೆ ಎಂದಿದ್ದಾನೆ. ಅದು ಯಾರಾಗಿರಬಹುದು?

ವಿಚಾರಸಾಗರದಲ್ಲಿ ಮುಳುಗಿದ್ದ ಮೋಹಿನಿಗೆ ಆ ರಾತ್ರಿ ನಿದ್ರೆ ಬರಲಿಲ್ಲ.

* * * *

ಬಿ. ಎಮ್. ಸೋಮಪ್ಪಸೆಟ್ಟರಿಗೂ ಮಥುನಾಥರಿಗೂ ಇರುವ ಲೇವಾದೇವಿ ಯಾವುದೆಂದರೆ, ಮಥುರಾನಾಥರು ಆಶ್ರಮದ ಮತ್ತು ಸ್ವಂತ ಉಪಯೋಗಕ್ಕೆ ಬೇಕಾದ ಅಕ್ಕಿ ಬೇಳೆ ಸಕ್ಕರೆ ಮುಂತಾದ ಎಲ್ಲಾ ಸಾಮಗ್ರಿಗಳನ್ನು ಸೋಮಪ್ಪಸೆಟ್ಟರ ಮೂಲಕನಾಗಿ ತರಿಸಿಕೊಳ್ಳುತ್ತಿದ್ದರು. ಯಾವಾಗಲಾದರೂ ಒಮ್ಮೊಮ್ಮೆ ಒಂದೆರಡು ಸಲ ಸುಳ್ಳು ಹೇಳಿ ಎರಡು ಕಾಸು ಹೆಚ್ಚು ತಿನ್ನುತ್ತಿದ್ದರಾದರೂ ಊರೊಳಗೆಲ್ಲೂ ಸಿಕ್ಕದ ವಸ್ತುವೇ ಆಗಿದ್ದರೂ ಅವರಿಗೆ ಬೇಕಾಗಿದೆ ಎಂದರೆ, ಚಿಂತೆಯಿಲ್ಲ, ಸೆಟ್ಟರು ಎಲ್ಲಿಂದಾದರೂ ಹೇಗಾದರೂ ಮಾಡಿ ಆ ಕೂಡಲೆ ಮಥುರಾನಾಥರಿಗೆ ತಂದುಕೊಡುತ್ತಿದ್ದರು. ಎಲ್ಲಿಂದ ಎಂದು ಕೇಳಿದರೆ ಆ ಸ್ಥಳವನ್ನು ಮಾತ್ರ ಅವರ ಕೊರಳು ಕುಯ್ದರೂ ಹೇಳಲಿಕ್ಕಿಲ್ಲ. ಮಾತ್ರವಲ್ಲ, ಆಶ್ರಮದಲ್ಲಿ ಅನೇಕ ಬಡ ರೋಗಿಗಳ ಔಷಧೋಪಚಾರಗಳಿಗೆ ಬೇಕಾದ, ಆಯುರ್ವೇದ ಚಿಕಿತ್ಸೆಗೆ ಸಂಬಂಧವಾದ ಕಂದಫಲಮೂಲಾದಿಗಳನ್ನು ಸೆಟ್ಟರು ತಂದುಕೊಡುತ್ತಿದ್ದರು. ಹಣದ ಲೆಕ್ಕಾಚಾರಗಳಲ್ಲಿ ಒಮ್ಮೊಮ್ಮೆ ಹೆಚ್ಚುಕಡಿಮೆಯಾಗಿ ಹೋಗುವುದೂ ಉಂಟು. ಆಗ ಸ್ವತಃ ಸೆಟ್ಟರೇ ರಾಯರಲ್ಲಿಗೆ ಹೋಗಿ ಅವರೊಡನೆ ಮಾತಾಡಿ ಹೋಗುವ ವೇಳೆಗೆ ವ್ಯಾಪಾರಕ್ಕೆ ಹಣ ದೊರಕಿಸಿಕೊಳ್ಳುತ್ತಿದ್ದರು. ಸೆಟ್ಟರೆಂದರೆ ಅಷ್ಟು ನಂಬಿಕೆ ವಿಶ್ವಾಸ ಮಥುರಾನಾಥರಿಗೆ. ಹೀಗೆಂದರಿತ ತರುವಾಯ ತೇಜಪಾಲ ಸೆಟ್ಟರು ಕಳ್ಳಸಂತೆಯಲ್ಲಿ ಪ್ರವೇಶಿಸಿದರೂ ಅಷ್ಟೊಂದು ಜಾಗ್ರತೆ ವಹಿಸುತ್ತಿರಲಿಲ್ಲ! ಸೆಟ್ಟರಿಗೆ ಧೈರ್ಯ ಬಂದುದೂ ಆಗಲೇನೆ! ತೇಜಪಾಲ ಕಾರಿನಲ್ಲಿ ಅಥವಾ ಜಟಕಾದಲ್ಲಿ ಆಫೀಸಿಗೆ ಹೋಗುವಾಗ, ಇಲ್ಲವೆ ಎಲ್ಲಿಗಾದರೂ ಹೋಗುವಾಗ ಬರುವಾಗ ಸೆಟ್ಟರು ದಾರಿಯಲ್ಲಿ ಕಾದು ನಿಂತು ಕಲೆಕ್ಟರರಿಗೆ ವಂದನೆಗಳನ್ನು ಅರ್ಪಿಸದೆ ಮುಂದೆ ಹೆಜ್ಜೆ ಇಡುತ್ತಲೆ ಇರಲಿಲ್ಲ.

ಲೋಕವ್ಯವಹಾರವೆ ಹೀಗೆ. ಮನುಷ್ಯ ತನಗೆ ಅಥವಾ ತನ್ನ ಇಷ್ಟ ಬಂಧುಮಿತ್ರಸಂಬಂಧಿಕರಿಗೆ ಯಾವನಾದರೂ ಇನ್ನೊಬ್ಬನು ಅನ್ಯಾಯಮಾಡಿಯಾದರೂ ಸಹಾಯಮಾಡುವಾಗ ಬಹು ಆನಂದದಿಂದ ಸ್ವೀಕಾರ ಮಾಡುತ್ತಾನೆ! ಆಗ ಆತನಲ್ಲಿ ಯಾವ ತಪ್ಪನ್ನೂ ಅವರು ಕಾಣರು, ಹುಡುಕಲೂ ಹವಣಿಸರು. ಆದರೆ ಅದೇ ಉಪಕಾರವನ್ನು ಅವನು ಇತರರಿಗೆ ಮಾಡುವನೆಂದರಿತಾಗ ಅವನ ಮೇಲೆ ತಪ್ಪನ್ನು ಬಹು ಜಾಣ್ಮೆಯಿಂದ ಎತ್ತಿ ಹಿಡಿದು ಮಾತಾ

ಡಲು ಬೇಸರಿಸರು. ಇದರಲ್ಲಿ ಮನುಷ್ಯನ ಸ್ವಾರ್ಥತೆ ಎಷ್ಟಿದೆಯೆಂಬುದು ತಿಳಿದು ಬರುತ್ತದೆ. ತನಗಾಗಿ ಇತರರು ಅಥವಾ ತಾನು ಯಾವ ಪಂಥವನ್ನು ಬೇಕಾದರೂ ಅಡ್ಡಿಯಿಲ್ಲದೆ ಹಿಡಿಯಬಹುದು. ಅಂತೂ ತಾನು, ತನ್ನನ್ನು ಸೇರಿದವರು ಸುಖವಾಗಿರಬೇಕು. ಇತರರಿಗೆ ಅಥವಾ ತನಗನಿಷ್ಟವೆಂದು ಕಾಣುವವರಿಗೆ ಒಬ್ಬನು ಯಾವ ರೀತಿಯಲ್ಲಾದರೂ ಒಂದು ಸಹಾಯ ಮಾಡುವನೆಂದರಿತಾಗ ಅದರಲ್ಲಿ ತಪ್ಪಿಲ್ಲದಿದ್ದರೂ ಅಥವಾ ಅಧಿಕ ತಪ್ಪು ಕಂಡು ಬರದಿದ್ದರೂ, ತಪ್ಪರಸಿ ಅದನ್ನು ವಿಸ್ತರಿಸಿ ಮಾತಾಡುವುದರಲ್ಲಿ ಮನುಷ್ಯನು ಅದೆಷ್ಟು ಜಾಣ್ಮೆಯನ್ನು ವಹಿಸುತ್ತಾನೆ!

ಹೊತ್ತು ನೆತ್ತಿಗೇರಲು ಇನ್ನೊಂದು ತಾಸಿದೆ. ಅಂತರಿಕ್ಷವನ್ನೇರಲು ದಿನಕರನು ವೇಗವಾಗಿ ನಡೆಯುತ್ತಿದ್ದಾನೆ. ಮನುಷ್ಯನನ್ನೇ ಬಾಡಿಸುತ್ತಿದೆ ಬಿಸಿಲಿನ ತಾಪ; ಅಂದಮೇಲೆ ಗಿಡಬಳ್ಳಿಗಳ ಪಾಡೇನು? ಆರಾಮಾಸನಲ್ಲಿ ಬಿದ್ದುಕೊಂಡು ಬೀಸಣಿಗೆಯಿಂದ ಗಾಳಿ ಹಾಕಿಕೊಳ್ಳುತ್ತ ಕರವಸ್ತ್ರದಿಂದ ಬೆವರೊರಸಿಕೊಳ್ಳುತ್ತ ಬಿಸಿಯುಸಿರು ಬಿಡುತ್ತಿದ್ದಳು ಮೋಹಿನಿ. ಯಾವುದೊ ಜ್ಞಾಪಕವಾಗಿ ಅವಳು ತೇಜಪಾಲನ ಪೋಷಾಕು ಧರಿಸುವ ಕೋಣೆ(Dressing room)ಗೆ ನಡೆದಳು. ಕಳೆದ ರಾತ್ರಿ ಮೋಹಿನಿಯು ಕೈಗಿತ್ತ ಪತ್ರವನ್ನು ಹಿಂದೆ ತೆಗೆದುಕೊಂಡು ಅದರಿಂದ ಬೇರೆಯಾಗಿರಿಸಿದ್ದ ಕಾಗದವನ್ನು ತೇಜಪಾಲ ಮರೆತು ಪೈಜಾಮುದ ಜೇಬಿನಲ್ಲೆ ಬಿಟ್ಟು ತೆರಳಿದ್ದನು. ಮೋಹಿನಿ ಅದನ್ನು ಅತ್ಯಾನಂದದಿಂದ ತೆಗೆದುಕೊಂಡು ತನ್ನ ಸ್ಥಾನಕ್ಕೆ ಹಿಂದಿರುಗಿದಳು. ಬಿಡಿಸಿ ನೋಡಿದಳು. ಅದೇನು! ಅದು ಪತ್ರವಾಗಿರದೆ ಯಾವದೊ ಹೆಂಗಸಿನ ಭಾವ ಚಿತ್ರವಾಗಿತ್ತು. ಬಹಳ ಸಮಯದವರೆಗೆ ನೋಡುತ್ತ ಕುಳಿತಳು. ಆ ಚಿತ್ರವನ್ನು. ಆ ಮುಖ ಗುರುತಿನದಾಗಿದೆ—ಮೋಹಿನಿಗೆ. ಹಿಂದೆ ಅವಳ ಒಡನಾಡಿಯಾಗಿದ್ದ ಹುಡುಗಿಯೊಬ್ಬಳ ಚಿತ್ರವದು. ಹೆಸರು ಮರೆತುಹೋಗಿದೆ. ಬಂಗಾರದಂಥ ಹೆಸರು. ಹೆಸರು ಅದೇ ಅರ್ಥವನ್ನು ಕೊಡುವಂತಹುದು. ಆದರೆ ಹೊಟ್ಟೆಯಲ್ಲಿದೆ, ಬಾಯಿಗೆ ಬರಲೊಲ್ಲದು. ಸ್ಮರಣೆಗೆ ಬರಲು ತಲೆಗೆ ಬಡಿದುಕೊಂಡಳು. ಮೌನವಾಗಿ ಕುಳಿತು ಚಿತ್ರವನ್ನೆ ನೋಡಲಾರಂಭಿಸಿದಳು. ತಾನು ವಿದ್ಯಾರ್ಥಿನಿಯಾಗಿದ್ದ ಕಾಲದಲ್ಲಿ ತನ್ನ ಒಡನಾಡಿಯಾಗಿದ್ದಳೆಂಬುದೇನೊ ನಿಜ. ಮೋಹಿನಿ ಆ ಚಿತ್ರವನ್ನು ಭದ್ರಪಡಿಸಿ ಕಾರ್ಯದಲ್ಲಿ ನಿರತಳಾದಳು.

ಆಧುನಿಕ ನಾಗರಿಕನಲ್ಲಿ ಆಂಗ್ಲವಿದ್ಯೆ ಹೆಚ್ಚಿ, ಮನುಷ್ಯನು ಧರಿಸುವ ಪೋಷಾಕು ನಡೆನುಡಿಗಳಲ್ಲಿ ಅದಲುಬದಲಾಗುವುದಲ್ಲದೆ ತಲೆ ದುರ್ಬುದ್ಧಿಯ ಬೀಡಾಗುತ್ತಿದೆ. ಹೆಂಗಸರ ಮೇಲೆಸೆವ ತನ್ನ ಕಡೆಗಣ್ಣ ನೋಟ—ಜೀವನದ ಗುರಿಯೆಂಬ ಮೂಢ ನಂಬಿಕೆಗೆ ಒಳಪಟ್ಟು, ಕಡೆಗೆ ಸಮಾಜದ ಮುಖದಿಂದ ಪಾಪಿಯೆಂಬ ಹೆಸರನ್ನು ಹೊತ್ತು ತನ್ನ ಜೀವನದ ಅಂತ್ಯವನ್ನು ಬಹು ದುಃಖ ದಿಂದ ಕೊನೆಗಾಣಿಸುತ್ತಾನೆ. ಸಿರಿ ಸಂಪತ್ತುಗಳಿಂದ ಕೂಡಿದ್ದು ಬಹಿರಂಗಕ್ಕೆ ಸುಖವೆಂದು ಕಂಡುಬಂದರೂ ಅವನ ಅಂತರಾತ್ಮ ಅವನನ್ನು ಕೆಣಕದಿರದು!

ಕಾಮಲೋಲುಪತೆಯಿಂದ ಹೆಂಗಸರನ್ನು ಗೆಲ್ಲುವುದು ಬಹು ದೊಡ್ಡ ಪುರುಷಾರ್ಥವೆಂದು ಅನೇಕರ ಮತ. ನಾಗರಿಕತೆ ಮತ್ತು ಆಂಗ್ಲವಿದ್ಯೆ ಅಂದರೆ ಇದೇ ಎಂದು ಭಾವಿಸಿದ್ದಾರೆ. ಆದರೆ ಸಮಾಜವನ್ನು ಕಣ್ಣಿದ್ದೂ ಕಣ್ಣು ಮುಚ್ಚಿ ನೋಡುತ್ತಿರುವೆವೆಂಬ ಅರಿವೇ ಅವರಿಗಿಲ್ಲ!

೨೫

ಅಂದು ಶಾಲೆಗೆ ರಜೆ. ಬೆಳಗಿನ ಉಪಾಹಾರವಾಗಿ ಅನಂತ-ಪ್ರಕಾಶರು ಯಾವದೋ ವಿಷಯವಾಗಿ ಸಂಭಾಷಣೆಯಲ್ಲಿ ಮಗ್ನರಾಗಿದ್ದರು.

" ಭಾವಯ್ಯ, ನಿನಗೆ ಆಫೀಸಿಲ್ವೆ ? "

" ಆಫೀಸಿಲ್ಲದೆ ಎಲ್ಲಿ ಹೋಗಿದೆ, ಕೆಲಸವಿಲ್ಲ."

ಅನಂತ ಭಾವನ ವಿನೋದ ವಾಕ್ಯಕ್ಕೆ ನಕ್ಕು,

" ಮುಂಜಾನೆ ಒಂದು ಕನಸು ಬಿತ್ತು ಭಾವಯ್ಯ, ನನಗೆ; ಬಹಳ ಸೊಗ ಸಾಗಿತ್ತು." ಎಂದ.

" ಯಾವುದಪ್ಪ ಅದು. ರೇಖಾ ಏನಾದರೂ ಬಂದಿದ್ದಳೂಂತ ತೋರುತ್ತೆ, ಕನಸಿನಲ್ಲಿ! "

" ಛೆ! ಎಂಥಾ ಮಾತಾಡ್ತಿ, ಭಾವಯ್ಯ ? "

" ಮತ್ತಷ್ಟೊಂದು ಸೊಗಸು ಬರ್ಲಿಕ್ಕೇನು ಕಾರಣ, ಆ ಕನಸಿನಲ್ಲಿ ? "

" ಅದಿರಲಿ, ನೀನು ರೇಖಾದೇವಿಯ ವಿಷಯವಾಗಿ ಹಾಗನ್ನಲು ಕಾರಣ ? "

" ನೀನು ನಿನ್ನೆ ಅವಳ ಮನೆಗೆ ಹೋಗಲು ಏನು ಕಾರಣ ? "

" ಇದಕ್ಕೇ—ಕಣ್ಣಾರೆ ಕಂಡರೂ ಪರಾಮರಿಸಿ ನೋಡಬೇಕು ಅಂತ ಅನ್ನೋದು ! "

" ಆ ರೀತಿಯ ಸಂಶಯವೇನೂ ನನಗಿಲ್ಲ, ಅನಂತು. ನಿನಗೆ ಅವಳ ವಿಷಯದಲ್ಲಿ ಒಂದಿಷ್ಟು ಎಚ್ಚರಿಕೆ ಕೊಡಬೇಕೆಂದಿದ್ದೇನೆ. ಅಷ್ಟಕ್ಕೇ ಆ ರೀತಿ ಮಾತೆತ್ತಿದೆ."

" ಏನದು ? ಹಾಗೇನಾದರೂ ಇದ್ದರೆ ಬೇಗನೆ ಹೇಳಿಬಿಡು."

" ಅವಳು ಯಾರೂಂತ ತಿಳಿದೆ ? ಗಣಿಕೆಯ ಮಗಳಾಕೆ ! "

" ಹಾಂ ! "

" ಹೌದು."

" ಅದೇ ಇರಬೇಕು, ಕಾಲೇಜಿನಲ್ಲಿ ಅವಳನ್ನು ಎಲ್ಲಾ ಹುಡುಗರೂ ನೋಡಿ ನಗೋದು. ನಾನೇನೋ ಅಂತ ಭಾವಿಸಿದೆ ! ನಾನ್ಯಾರನ್ನೂ ಈತನಕ ಅವಹೇಳನ ಮಾಡಿದ್ದಿಲ್ಲ, ಈಗಲೂ ಮಾಡೋದಿಲ್ಲ, ಮುಂದೆಯೂ ಮಾಡಲಾರೆಂತ ನಂಬಿದ್ದೇನೆ. ಇದನ್ನು ನೋಡಿಯೋ ಏನೋ ಅವಳನ್ನು ಮೊನ್ನೆ ನಮ್ಮ ಅಧ್ಯಾಪಕರೊಬ್ಬರು ನನ್ನ ಸಮೀಪದಲ್ಲಿ ಕುಳ್ಳಿರಿಸಿದರು. ಆಕೆ ನನ್ನೊಂದಿಗೆ ಬಹಳ ಸಲಿಗೆಯಿಂದ ವರ್ತಿಸುತ್ತಾಳೆ...."

" ಬೆಣ್ಣೆ ಕರಗಿದರೆ ಕರಗಲಿ ಅಂತ ! "

" ತನಗೆ ತಿಳಿಯದ ಪಾಠಗಳನ್ನು ಕೇಳ್ತಾಳೆ. ನನ್ನ ಮಿತ್ರರನೇಕರು ನನ್ನನ್ನು ಕೆಲವು ಕೊಂಕು ಮಾತುಗಳಿಂದ ಅಣಕಿಸಿದರೂ ಕೂಡ ನಾನದನ್ನು ನನಗೆ ತಿಳಿದಿದ್ದ ಪಕ್ಷದಲ್ಲಿ ಹೇಳಿಕೊಡದಿರೋದಿಲ್ಲ. ಆದರೆ ನಾನದನ್ನು ಗಣ್ಯ ಮಾಡಲಿಲ್ಲ. ನಿನ್ನೆ ಅವಳು ನನ್ನನ್ನು ತನ್ನ ಮನೆಗೆ ಬರಬೇಕೆಂದು ಬೇಡಿಕೊಂಡಳು. ಕೇಳಿದಾಗ, ತನಗೆ ಗಣಿತಶಾಸ್ತ್ರ ಚೆನ್ನಾಗಿ ಬರೋದಿಲ್ಲ, ಸ್ವಲ್ಪ ಹೇಳಿಕೊಡಬೇಕು ಅಂತ ಉತ್ತರ ಬಂತು. ಆಗ ನಾನೇನು ಮಾಡಬೇಕು ? ಕೂಡದು ಅನ್ನಲೆ ? ಅದು ಅಹಂಭಾವದ ಮಾತು. ಆದ್ದರಿಂದ ಹೋದೆ. ಅವಳು ಕೇಳಿದ್ದನ್ನೆಲ್ಲ ನನಗೆ ತಿಳಿದಷ್ಟು ಮಟ್ಟಿಗೆ ವಿವರಿಸಿ ಹೇಳಿಕೊಟ್ಟು ಬಂದೆ."

" ಉಪಚಾರ ಏನೂ ಆಗ್ಲಿಲ್ವೆ ? "

" ಬಾಳೆಹಣ್ಣು, ಹಾಲು, ಬೇಯಿಸಿದ ಎರಡು ಮೊಟ್ಟೆ ತಂದಿಟ್ಟಳು. ನಾನು ಸಸ್ಯಾಹಾರಿಯೆಂಬುದನ್ನು ವ್ಯಕ್ತಪಡಿಸಿ, ಹಾಲು ಹಣ್ಣು ಸ್ವೀಕರಿಸಿ,

ನಮಸ್ಕಾರ ಮಾಡಿ ಹೊರಟೆ. ಇನ್ನು ಬಾ ಅಂದ್ರೆ ಬೆನ್ನು ಕೂಡ ತೋರಿಸೆ, ಭಾವಯ್ಯ. ಇದು ಖಂಡಿತ."

" ಅಷ್ಟು ಬುದ್ಧಿ ನಿನಗಿದೇಂತಾದ್ರೆ ಇನ್ನು ಹೇಳೋದೇನಿದೆ ನಾನು."

" ಭಾವಯ್ಯ, ಟಪಾಲು ಪೇದೆ ಈ ಕಡೆ ಬರ್ತಾ ಇದ್ದಾನೆ."

ಟಪ್ಪಾಲು ಪೇದೆ ತಂದುಕೊಟ್ಟ ಪತ್ರವನ್ನು ಒಡೆದು ಪ್ರಕಾಶ ಓದಿದ. ಕಾಗದ ಮಾಧವರಾಯರಿಂದ ಬಂದಿತ್ತು. ಅಡಿಗೆ ಕೋಣೆಯಲ್ಲಿದ್ದ ಕಾವೇರಮ್ಮ ನಿಗೂ ಸುದ್ದಿ ಮುಟ್ಟಿತು.

" ಯಾವಾಗ ಬರ್ತಾರಂತಪ್ಪ ? "

" ಈವತ್ತೇ ಲೋಕಲ್ಲಿಗೆ ಬರ್ತಾರಂತಮ್ಮ."

ಕಾವೇರಮ್ಮ ಗಂಡ ಬರುವನೆಂದು ಕೇಳಿ ಉತ್ಸಾಹದಿಂದ ಅಡಿಗೆ ಮಾಡಲಾರಂಭಿಸಿದರು. ವಿಷಯವನ್ನು ಸುಬ್ಬರಾಯರಿಗೂ ತಿಳಿಸಿದರು. " ವಿಶೇಷವೇನೂ ಇಲ್ಲವೆ ? " ಎಂದು ಸುಬ್ಬರಾಯರು ಕೇಳಿದಾಗ ಕಾವೇರಮ್ಮ ಮಗನನ್ನು ವಿಚಾರಿಸಿ, ಏನೂ ಇಲ್ಲವೆಂಬುದನ್ನು ವ್ಯಕ್ತಪಡಿಸಿದರು. ಸುಬ್ಬರಾಯರಿಗೆ ಅಸಮಾಧಾನ. ನಿಟ್ಟುಸಿರು ಬಿಟ್ಟರು.

" ಅನಂತೂ, ನೀನು ನಿನ್ನ ಕನಸನ್ನು ಹೇಳಲೆ ಇಲ್ಲವಲ್ಲ."

" ಹುಂ ! ಎಲ್ಲಾ ಒಂದು ಹುಚ್ಚು."

" ಹಾಗೆ ತಾತ್ಸಾರ ಮಾಡಬೇಡ ; ಬೆಳಗಿನ ಕನಸು ನಿಜವಾಗೋದೂ ಇದೆ."

" ನಿನಗೆ ಹೇಗೆ ಗೊತ್ತದು, ಭಾವಯ್ಯ ? ಪುಸ್ತಕದ ಬದನೆಕಾಯಿಯೊ ಏನು ? "

" ಅಲ್ಲಪ್ಪಾ, ನನಗೆ ಅದರ ಸ್ವಂತ ಅನುಭವವಿದೆ. ನಾನು ಉದ್ಯೋಗಕ್ಕಾಗಿ ಅಲೆದಾಡುತ್ತಿದ್ದಾಗ ಒಂದಾವರ್ತಿ ಹೀಗೇ ನನಗೂ ಒಂದು ಮುಂಜಾನೆ 'ನಾಳೀನೇ ನಿನಗೆ ಉದ್ಯೋಗ ಸಿಗುತ್ತೆ' ಅಂತ ಯಾರೊ ಬಂದು ಅಂದ ಹಾಗಾಯ್ತು ಕನಸಿನಲ್ಲಿ. ಆ ದಿನ ಏನೇನು ಮಾಡಿದರೂ ಮರೆಯದಾಯ್ತು ನನಗೆ. ಅಂದೇ ಬೆಳಿಗ್ಗೆ ನಾನು ಹಾಕಿದ್ದ ಅರ್ಜಿಗೆ ಜವಾಬು ಬಂದೇ ಬಂದಿತು ! "

" ಅದೆಲ್ಲಾ ಮರುಳು ನಂಬಿಕೆ, ಭಾವಯ್ಯ. ಅಂದು ನೀನು ಈ ಕೆಲಸ

ಖಂಡಿತ ಸಿಗಲೇಬೇಕೆಂಬ ಧೈರ್ಯದಿಂದಲೆ ಅರ್ಜಿ ಹಾಕಿರ್ಬೇಕು; ಮತ್ತದನ್ನೇ ನೆನಸಿಕೊಂಡು ಮಲಗಿರ್ಬಹುದು. ಅದೇ ಕನಸು ಬಿದ್ದಿತು. 'ತೋಡಿದ ಬಾವಿಗೆ ಜಲವೇ ಸಾಕ್ಷಿ' ಎಂಬಂತೆ ಕಾಣುವ ಕನಸಿಗೆ ಮನವೇ ಸಾಕ್ಷಿ! ಕನಸಿನಲ್ಲಿ ಕಾಣೋದೆಲ್ಲ ಮನಸಿನಲ್ಲಿ ಬರುವುದೆ ವಿನಾ ಬೇರೇನೂ ಅಲ್ಲ. ಮನುಷ್ಯನಿಲ್ಲ ದಿದ್ದರೆ ಮನಸೆಲ್ಲಿಂದ ಬರ್ತಿತ್ತು? ಮನಸಿಲ್ಲದಿದ್ದರೆ ಕನಸೆಲ್ಲಿಂದ ಬರ್ತಿತ್ತು? ಆದ್ದರಿಂದ ಕನಸು ಮನಸು ಎರಡೂ ಒಂದೇನೆ."

"ದೊಡ್ಡ ಜ್ಞಾನಿಯಪ್ಪ, ನೀನು."

"ಇದಕ್ಕೆಲ್ಲ ಜ್ಞಾನವೇಕೆ, ಭಾವಯ್ಯ? ಇವೆಲ್ಲ ಸಾಮಾನ್ಯವಾದ ಅಲ್ಪ ವಿಷಯಗಳು."

"ಆಗಲಿ ನಾವು ತುಸು ತಿರುಗಾಡಿಕೊಂಡು ಬರೋಣವೆ?"

"ಹೂಂ! ಹೋಗೋಣ."

ಕಾವೇರಮ್ಮನಿಗೆ ತಿಳಿಸಲು, "ಹೊತ್ತು ನೆತ್ತಿಗೇರೋ ಈ ವೇಳೇಲಿ ಎಲ್ಲಪ್ಪ ತಿರುಗಾಟ?" ಎಂದರೂ ಕೇಳದೆ, ಮನೆಯಿಂದ ಹೊರಟರು.

'ಷಣ್ಮುಖ ಭವನ'ದಲ್ಲಿ ಅನಂತ-ಪ್ರಕಾಶರು 'ಫ್ರುಟ್ ಸಾಲಡ್' ತಿಂದು, 'ಕೋಲ್ಡ್ ಡ್ರಿಂಕ್'ಗೆ ಕಾಯುತ್ತ,

"ಭಾವಯ್ಯ, ನಿನ್ನ ಮುಖ ನೋಡಿದರೆ........"

"ಏನಪ್ಪ, ನನ್ನ ಮುಖಕ್ಕೂ ಬಂತೆ ಕಾಲ! ಹೂಂ! ಹೇಳಿಬಿಡು, ಕೋಡಗನಂತಿದೆ; ಅಷ್ಟೆ ತಾನೆ?"

ಅನಂತ ನಕ್ಕ. "ಅಲ್ಲ, ಭಾವಯ್ಯ. ನಮ್ಮ ಮನೇಲಿ ಒಬ್ಬಳು ಕೆಲಸ ದವಳಿದ್ದಾಳೆ; ಅವಳ ಮುಖದಂತೆಯೆ ಇದೆ. ಆದ್ದರಿಂದ ನೀನು ಹೆಂಗಸಿನಂತೆ ಕಾಣುತ್ತಿ ನನಗೆ."

"ಬೇರೆ ಯಾರೂ ಇಲ್ವೆ ನನ್ನ ಹಾಗೆ? ಇನ್ನೇನು ನಾನು ಹೆಂಗಸೇ ಅಂತ ಅನ್ನಿ್ತೀಯೊ ಏನೊ?"

"ಇಲ್ಲ, ಇಲ್ಲ. ಆದರೆ ನಿನ್ನ ಹಾಗೆ ಇನ್ನೂ ಒಬ್ಬಳಿದ್ದಾಳೆ."

"ಯಾರು?"

"ಈಗ ಹೇಳಲಾರೆ, ತೋರಿಸಿ ಕೊಡುವೆ. ಆದರೆ ಆ ಸುಸಮಯವೊದಗು ವುದೊ ಇಲ್ಲವೋಂತ!........ಅಂತೂ ಅಸ್ಥಿರ."

ಅನಂತ ಈ ಮಾತುಗಳನ್ನು ಅತೀವ ಸಂಕಟದಿಂದ ಉಚ್ಚರಿಸಿದ. ನಿರಾಶೆಯಿಂದ ಇಹಸುಖವನ್ನು ತೊರೆಯಲನುವಾದವನ ಮುಖದಿಂದ ಹೊರಡು ವಂತಿತ್ತವನ ದೀನಮುಖದಿಂದ ಹೊರಟ ಆ ಮಾತು. ಪ್ರಾಯಶಃ ಅವನಿಗೆ ವಿಜಯಳ ನೆನಪಾಗಿರಬೇಕು. ತಾನಿಲ್ಲಿಗೆ ಬಂದ ತರುವಾಯ ವಿಜಯಳಿಗೆ ಬರೆದ ಪತ್ರವೆಂದರೆ ಒಂದೇ. ಇಲ್ಲಿಯವರೆಗೆ ಅವಳು ಅದಕ್ಕೆ ಉತ್ತರವನ್ನು ಕೊಟ್ಟಿ ದಿಲ್ಲ? ಕಾರಣವೇನಿರಬಹುದು? ಸಂದರ್ಭ ಸಿಗಲಿಲ್ಲವೇನೊ. ತಾನೇಕೆ ಇಷ್ಟು ಅವಸರಪಡಬೇಕು? ತಾನು ಕಾಗದ ಬರೆದು ಹತ್ತೇ ದಿನಗಳಾದವು. ಬರ ಬಹುದು; ಇಂದು ನಾಳೆ ಬರಬಹುದು. ತನ್ನನ್ನು ತನ್ನ ವಿಜಯ ಮರೆತಾಳೆ? ಎಂದೂ ಇಲ್ಲ. ಮೇಜಿನ ಮೇಲೆ ಮಾಣಿ ಕೋಲ್ಡ್ ಡ್ರಿಂಕ್ ತಂದಿಟ್ಟ. ಹೊಟ್ಟೆಯನ್ನು ತಣಿಸಿಕೊಂಡು ಇಬ್ಬರೂ ಅಲ್ಲಿಂದ ಹೊರಬಿದ್ದರು.

ಅಡಿಗೆಮನೆಯಲ್ಲಿ ಎರಡು ಬಾಳೆಯೆಲೆಗಳನ್ನು ಹಾಕಿ ಕೂಡಲು ಮಣೆ ಗಳನ್ನು ಇಟ್ಟಿದ್ದಿತು. ಅನಂತ–ಪ್ರಕಾಶರು ಕೈಕಾಲು ಮುಖ ತೊಳೆದುಕೊಂಡು ಬಂದು ಎಲೆಯ ಮುಂದೆ ಮಂಡಿಸಿದರು. ಕಾವೇರಮ್ಮ ಬಡಿಸಲಾರಂಭಿಸಿದರು.

" ಈ ಬೆಂಡೆಯನ್ನೇಕೆ ಮಾಡಿದೆಯಮ್ಮ? "

" ತಿಂದು ನೋಡು, ಹೇಗಿದೇಂತ! ಅವರು ಈವತ್ತು ಬರ್ತಾರಲ್ಲಾಂತ ಮಾಡಿದೆ. ಅವರಿಗೆ ಬೆಂಡೆ ಅಂದ್ರೆ ಪ್ರಾಣ! ಮಗನಿಗೆ ಕಂಡರೆ ಆಗದು...."

" ಏಕೆ ಭಾವಯ್ಯ? ನಿನಗೆ ಬೆಂಡೆ ಹಿಡಿಯೋಲ್ವೆ? ಲೋಕದಲ್ಲಿ ಅತ್ಯುತ್ತಮ ಕಾಯಿಪಲ್ಯಗಳಲ್ಲಿ ಅದೂ ಒಂದು. ಅದನ್ನು ನೀನು ಹಿಡಿಸದು ಅಂದ್ರೆ? ನಿಂದೆಲ್ಲವೂ ವಿಚಿತ್ರ, ಭಾವಯ್ಯ!" ಎಂದು ಅನಂತ ಕಾವೇರಮ್ಮನ ಮತಕ್ಕೆ ಓಟು ಕೊಟ್ಟ.

ಅನಂತನ ಸರ್ಟಿಫಿಕೇಟ್ ಸಿಕ್ಕಿದ್ದೇ ತಡ ಕಾವೇರಮ್ಮ ಹುರುಪಿನಿಂದ, " ನೀನೆ ನೋಡು, ಮಗು; ಹೇಳು. ಅಪ್ಪನಿಗೆ ಹಿಡಿದದ್ದು ಮಗನಿಗೆ ಹಿಡಿಸದು— ಮಗನಿಗೆ ಹಿಡಿದದ್ದು ಅಪ್ಪನಿಗೆ ಹಿಡಿಸದು! ಹೀಗಾದರೆ ನಾನು ಯಾರಿಗೇಂತ ಮಾಡ್ಲಿ? ಏನನ್ನು? ಇಬ್ಬರಿಗೂ ಹಿಡೀವಂತಾದ್ದು ನನಗೆ ಹಿಡಿಯೋದಿಲ್ಲಾಂತ ಇಟ್ಕೊ! ಹಾಗಾದ್ರೆ ಆಗ ನಾನೇನು ಮಾಡ್ಲಿ?" ಎಂದರು.

ಅನಂತ ಬಾಯಿ ಬಿಟ್ಟು ನಕ್ಕ. ಪ್ರಕಾಶ ಬಾಯೊಳಗೇ ನಕ್ಕ. ಕಾವೇರಮ್ಮ ತಮ್ಮನ್ನು ತಾವೇ ಒಳಗೊಳಗೆ ಹೊಗಳಿಕೊಂಡರು.

ಒಮ್ಮೆ ಬಡಿಸಿದ್ದನ್ನೇ ಉಂಡು ಎದ್ದರು—ಅನಂತ-ಪ್ರಕಾಶರು. ಆಗ ಪ್ರಕಾಶನಿಗೆ ನೆನಪಾಯಿತು.

" ಅಮ್ಮಾ ? "

" ಆಂ ! "

" ಮಾವನ ಊಟವಾಯ್ತೆ ? "

" ಅವರದಾಗಲೇ ಆಗಿದೆ—ಪ್ರಕಾಶ ? "

" ಏನಮ್ಮಾ ? "

" ಇಲ್ಲಿ ಬಾ."

ಪ್ರಕಾಶ ಬಂದ.

" ನಿನ್ನನ್ನು ಅನಂತ ಭಾವಯ್ಯ ಅಂತ ಕರೀತಾನಲ್ಲ, ಹೇಗೆ ? " ಎಂದು ಕಾವೇರಮ್ಮ ತಮ್ಮ ಸಂಶಯ ನಿವಾರಣೆ ಮಾಡಿಕೊಳ್ಳಲು ಊಟಮಾಡುತ್ತ ಮಗನನ್ನು ಪ್ರಶ್ನಿಸಿದರು.

" ಹಾಂ ! ಬಿಡಮ್ಮ. ಅದೆಲ್ಲ ಈಗಿನ ಕಾಲದಲ್ಲಿ ಅನಗತ್ಯ. ಅಕ್ಕನ ಮಗಳನ್ನು ತಮ್ಮನು ಮದುವೆ ಮಾಡಿಕೊಳ್ಳೋ ಈಗಿನ ಕಾಲದಲ್ಲಿ ಸಂಬಂಧದ ಗಂಟು ಬೇರೆ ಕಟ್ಟಿ ಉಳಿಸಬೇಕಾಗಿದೆ ! ಅದೆಲ್ಲ ನಿಮ್ಮ ಕಾಲದಲ್ಲಾಯ್ತು. ರೈಲು ಬರೋ ಹೊತ್ತಾಯ್ತು, ಮಾಧವರಾಯರು ಬರ್ತಾರಂತಲ್ಲ ಈ ಗಾಡಿಗೆ, ಕರ್ಕೊಂಡು ಬರ್ತೀನೆ ! " ಎಂದು ಹೊರಟ ಪ್ರಕಾಶ.

ಕಾವೇರಮ್ಮ ನಕ್ಕರು. ಪ್ರಾಯಶಃ ಮಗನ ಬುದ್ಧಿಗೆ ಮೆಚ್ಚಿರಬೇಕು. ಈಗಿನ ಕಾಲದ ಮಕ್ಕಳೊಂದಿಗೆ ಮಾತಾಡಿ ಜಯಿಸೋದೆ ? ಎಂದು ತಮ್ಮೊಳಗೆ ಅಂದುಕೊಳ್ಳುತ್ತ ಬಡಿಸಿಕೊಂಡು ಕುಳಿತರು.

ಉಗೆಬಂಡಿ ನಿಲ್ದಾಣಕ್ಕೆ ಅನಂತ-ಪ್ರಕಾಶರು ಮಾತುಗಳನ್ನಾಡುತ್ತ ಹೋಗುತ್ತಿದ್ದರು. ಅನಂತ ತನ್ನ ಕೈಗಡಿಯಾರವನ್ನು ನೋಡಿ, " ಭಾವಯ್ಯ, ಹೊತ್ತು ಮೀರಿತು ; ಸೈಕಲು ಮಾಡಿಕೊಂಡು ಹೋಗೋಣವೆ ? " ಎಂದ.

" ಸೈಕಲು ಮಾಡಿಕೊಂಡು ಹೋಗಿ ? ಅಪ್ಪನನ್ನು ಮಧ್ಯದ ಸರಳಿನ ಮೇಲೊ ಹಿಂದಿನ ಸೀಟಿನಲ್ಲೋ ಕೂಡಿಸಿಕೊಂಡು ಬಂದುಬಿಡೋಣ ಅನ್ತಿಯೇನು ? "

" ಹಾಗಲ್ಲ, ಏನಾದರೂ ಕುಕ್ಕೆ-ಗಿಕ್ಕೆ ತಂದಿದ್ರೆ ? "

"ಹೊ! ಅದಕ್ಕೆ ? ಅಲ್ಲೇ ಜನ ಸಿಗದೇನು ? ಸೈಕಲೇನೂ ಬೇಡ. ನಡೆದುಕೊಂಡು ಹೋಗುವಾಗ ಸಿಗೋ ಸುಖ ಸೈಕಲಲ್ಲಿ ಹೋಗುವಾಗ ಸಿಗುತ್ತೇನು ?"

"ನಿನ್ನ ಮತ ಹಾಗಿರಬಹುದು. 'ಒಪೀನಿಯನ್ ಡಿಫರ್ಸ್' ಅಂತ ನೀನು ಕೇಳಿಲ್ವೇನು ?"

"ಇರಬಹುದು. ಆದರೆ ಹಾಗನ್ನಲಿಕ್ಕೆ ಕಾರಣವಿದೆ."

"ಏನೊ ?"

"ನಡೆದುಕೊಂಡು ಹೋಗೋದ್ರಿಂದ ಅನೇಕ ಜನರನ್ನು ತಿಳಿದುಕೊಳ್ಳ ಬಹುದು! ಮಾರ್ಗದಲ್ಲಿ ಸಂಚರಿಸುವ ಜನರ ವರ್ತನ, ನಡೆ-ನುಡಿ, ಹಾವ ಭಾವ, ನೋಟಗಳ ಅರ್ಥಾನರ್ಥಗಳು ಮುಂತಾದವುಗಳನ್ನು ತಿಳಿದುಕೊಂಡು ಇವರು ಇಂಥವರೇ ಅನ್ನೋದನ್ನ ಅರಿತು ಇಟ್ಟುಕೊಳ್ಳಹುದು! ಸಮಯದಲ್ಲಿ ಅಗತ್ಯ ಬೀಳುತ್ತೆ, ಅದೆಲ್ಲ. ಜಗತ್ತಿನಲ್ಲಿ ಎಲ್ಲರೂ ಒಂದೇ ರೀತಿಯಾಗಿ ಇರೋದಿಲ್ಲ. ಉತ್ತಮರೂ ಇರಬಹುದು, ಮಧ್ಯಮರೂ ಇರಬಹುದು, ಅಧಮರೂ ಇರಬಹುದು! ಎಲೆಗೆ ಮರೆಯಾದ ಕಾಯಿಗಳಂತೆಯೂ ಇರ್ತಾರೆ ಕೆಲವರು! ಏನೂ ಗೊತ್ತಿಲ್ಲದಿದ್ದರೂ ಎಲ್ಲಾ ಗೊತ್ತಿದ್ದವರ ಹಾಗೆ ತೋರಿಸಿ ಕೊಳ್ಳತಕ್ಕವರೂ ಕೆಲವರಿರ್ತಾರೆ!....ವಿಧವಿಧದವರು. ನಾವು ಆದಷ್ಟು ಮಟ್ಟಿಗೆ ಎಚ್ಚರಿಕೆಯಿಂದಿರಬೇಕು. ಅಂದರೆ ಲೋಕದ ಜನರನ್ನು ತಿಳಿಯಲು ಪ್ರಯತ್ನಿಸ ಬೇಕಂತ ಅರ್ಥ. ಇದೂ ಮಾನವನಿಗೆ ಉಪಯೋಗಕರವಾದ ವಸ್ತುಗಳಲ್ಲಿ ಪರೋಕ್ಷವಾದ ಒಂದು ಅತ್ಯುಪಯುಕ್ತ ವಸ್ತು."

"ಸರಿ, ಬಂಡಿ ಬರೋ ವೇಳೆಯಾಯ್ತು, ತುಸು ವೇಗವಾಗಿ ನಡೆಯೋಣ."

ಹೀಗೆ ಮಾತಾಡುತ್ತ ವೇಗವಾಗಿ ನಡೆಯಲು ಹೆಜ್ಜೆಯೊಂದೆತ್ತಿಡಲು "ಪ್ರಕಾಶ" ಎಂಬ ಕರೆ ಹಿಂದಿನಿಂದ ಪ್ರಕಾಶನ ಕಿವಿಗೆ ಮುಟ್ಟಿತು. ಹಿಂತಿರುಗಿ ನೋಡಲು ಪ್ರಕಾಶನ ದೇಹದಲ್ಲಿ ವಿದ್ಯುಚ್ಛಕ್ತಿಯ ಪ್ರವೇಶವಾದಂತಾಯಿತು. ಜಟಕಾದಲ್ಲಿ ಮಾಧವರಾಯರೊಂದಿಗೆ ಕುಳಿತಿದ್ದ ವಿಜಯಳನ್ನು ನೋಡಿ ಅನಂತ ಆನಂದಸಾಗರದಲ್ಲಿ ಮುಳುಗಿದ. ಗಾಡಿಯವನು ಇಳಿದು ಬಂದು ಗಾಡಿಯ ಬಾಗಿಲು ತೆರೆಯಲು ಅನಂತ-ಪ್ರಕಾಶರು ಜಟಕಾವನ್ನೇರಿದರು.

ವಿಜಯಳನ್ನು ಮಾಧವರಾಯರು ತಮ್ಮ ಪಕ್ಕದಲ್ಲಿ ಕುಳ್ಳಿರಿಸಿಕೊಂಡರು. ಅನಂತ-ಪ್ರಕಾಶರು ಗಾಡಿಯಲ್ಲಿ ಕುಳಿತ ಮೇಲೆ ಗಾಡಿಯ ಆಳು ಕುದುರೆಯನ್ನು ಚಾವಟಿಯಿಂದ ಹೊಡೆಯಲು ಅದು ಓಡತೊಡಗಿತು.

ಅನಂತನೊಂದಿಗೆ ಕುಳಿತಿದ್ದ ಪ್ರಕಾಶನ ಮನಸ್ಸೆಲ್ಲವೂ ಮಾಧವರಾಯರ ಪಕ್ಕದಲ್ಲಿ ತಲೆ ಬಗ್ಗಿಸಿ ಕುಳಿತಿದ್ದ ವಿಜಯಳ ಮೇಲಿತ್ತು. ಅವಳ ತುಂಬು ಯೌವನದ ಸೊಗಸು ಪ್ರಕಾಶನ ಮನಸ್ಸನ್ನು ಹಿಡಿದೆಳೆಯುತ್ತಿತ್ತು. ಮುದ್ದಾದ ಸೌಂದರ್ಯವನ್ನು ನೋಡೋಣವೆಂದರೆ ಅವಳು ತಲೆಯೆತ್ತುವುದಿಲ್ಲವಲ್ಲಾ, ಎಂಬೊಂದು ನಿರಾಶೆಯ ಚಿಹ್ನೆ ಅವನ ಮುಖದಲ್ಲಿ ಮೂಡಿತು. ' ತಂದೆಯು ಈ ತರುಣಿಯನ್ನು ನನಗೆ ಮದುವೆ ಮಾಡಲು ಕರೆತಂದಿರಬಹುದೆ ? ಛಿ! ಇದು ಹುಚ್ಚಾಲೋಚನೆ. ಹಾಗಾಗಿದ್ದ ಪಕ್ಷದಲ್ಲಿ, ಹುಡುಗಿಯನ್ನು ಹೀಗೆ ತಂದೆಯೊಂದಿಗೆ ಕಳಿಸಿ ಕೊಡುವರೇ ಅವಳ ತಂದೆತಾಯಿಗಳು ? ಇಲ್ಲದಿದ್ದರೆ ಈಕೆ ಯಾರಾಗಿರಬಹುದು ? ಇವಳನ್ನು ನನ್ನ ತಂದೆ ಕರೆತರುವ ಆವಶ್ಯಕತೆ ಏನು ? ಅನಾಥಳೆ ? ನನ್ನ ತಂದೆ ನನಗೆ ಅನಾಥಳನ್ನು ತಂದು ಲಗ್ನ ಮಾಡಿಸಲು ಪ್ರಯತ್ನಿಸುವನೆ ? ಆದರೆ ಹುಡುಗಿ ಬಹಳ ಚೆಲುವೆ. ನಾನೂ ಉದ್ಯೋಗದಲ್ಲಿದ್ದೇನೆ, ಜೀವನ ಸಾಗಿಸಲು ಸಮರ್ಥನಿದ್ದೇನೆ, ನಾನು ಅವಳನ್ನು ಮದುವೆಯಾದರೇನು ? ನಾನಂತೂ ನನ್ನ ಮನಸ್ಸಾಕ್ಷಿಯಾಗಿ ಒಪ್ಪಿದ್ದೇನೆ, ಅವಳೂ ಒಪ್ಪಿದರೆ ಸರಿ. ತಂದೆಯೊಡನೆ ಹೇಗೆ ಕೇಳುವುದು ? '........ಎಂದು ಮುಂತಾಗಿ ಯೋಚಿಸುತ್ತ ಕುಳಿತ.

ಗಾಡಿ ವಾಯುವೇಗದಿಂದ ಸಾಗುತ್ತಿತ್ತಾದರೂ ಅನಂತನಿಗೆ ಇರುವೆಗಿಂತಲೂ ಸಾವಧಾನವಾಗಿ ಹೋಗುತ್ತಿದೆಯೆಂಬಂತೆ ಭಾಸವಾಗುತ್ತಿತ್ತು. ಮನೆ ಮುಟ್ಟಿ ವಿಜಯುಳನ್ನೊಮ್ಮೆ ಏಕಾಂತದಲ್ಲಿ ಕಂಡು ತಿಳಿಯಬೇಕಾದ ವಿಷಯಗಳು ಎಷ್ಟೋ ಇವೆ. ವಿಜಯ ತನಗೆದುರಾಗಿ ಕುಳಿತಿದ್ದ ಅನಂತನನ್ನು ತಗ್ಗಿದ ಮುಖದಿಂದ ಅವನ ಪಾದಗಳನ್ನು ನೋಡಿಯೆ ಗುರುತಿಸಿದ್ದಳು. ಗಾಳಿಗೆ ಹಾರುತ್ತಿದ್ದ ಅವಳ ಕುರುಳನ್ನು ಸರಿಪಡಿಸಬೇಕೆನಿಸುತ್ತಿತ್ತು—ಅನಂತನಿಗೆ !

ಮಾಧವರಾಯರು ಮೊದಲು ವಿಜಯಳನ್ನು ಇಳಿಸಿ ತಾವು ಇಳಿದರು. ಆಮೇಲೆ ಅನಂತ-ಪ್ರಕಾಶರು ಇಳಿದರು. ಗಾಡಿಯೊಳಗೆ ಪ್ರಕಾಶನು ಕೂಲಿ

ಯಿತ್ತು. " ಅದೇ ಮನೆ; ಮುಂದೆ ನಡೆ " ಎಂದು ಮಾಧವರಾಯರು ವಿಜಯ ಳನ್ನು ಮುಂದೆ ಹಾಕಿ ತಾವು ಹಿಂದಿನಿಂದ ನಡೆದರು. ಅಂಗಳದಲ್ಲಿ ಕುಳಿತಿದ್ದ ಕಾವೇರಮ್ಮನಿಗೆ ವಿಜಯಳನ್ನೂ ಮಾಧವರಾಯರನ್ನೂ ಕಂಡಾಗ ತಾವು ನಿಜವಾಗಿಯೂ ಎಚ್ಚರದಲ್ಲಿರುವರೆ ಎಂಬುದು ತಿಳಿಯದಾಯಿತು. ಸುಬ್ಬರಾ ಯರಿಗೆ ಇದನ್ನು ತಿಳಿಸೋಣವೆಂದು ಬಾಯ್ದೆರೆದರೂ ನಾಲಿಗೆ ಕೆಲಸ ಮಾಡ ಲೊಲ್ಲದು! ಮಾತಾಡಲಾರದೆ ಕಾವೇರಮ್ಮ ನಿಂತಲ್ಲಿಂದ ಸರಿದು ನಿಂತರು. ಮಾಧವರಾಯರು ಮನೆಯ ಮೆಟ್ಟಲು ಮುಟ್ಟಿ ವಿಜಯಳನ್ನು ಅಲ್ಲೇ ನಿಲ್ಲಿಸಿ ಆರಾಮಾಸನದಲ್ಲಿ ಮಲಗಿದ್ದ ಸುಬ್ಬರಾಯರೆಡೆಗೆ ನಡೆದು, ವಿಜಯಳನ್ನು ಕುರಿತು " ಇಲ್ಲಿ ಬಾಮ್ಮಾ " ಎಂದರು. ವಿಜಯಳನ್ನು ನೋಡಿದ ಸುಬ್ಬ ರಾಯರು ತಮ್ಮ ಕಣ್ಣುಗಳನ್ನೇ ನಂಬದಾದರು. ಕಾವೇರಮ್ಮನೂ ಅಲ್ಲಿಗೆ ಬಂದರು. " ಗುರುತು ! " ಅಂದರು ಸುಬ್ಬರಾಯರು ಮಾಧವರಾಯರೊಡನೆ. ಅವರು ಜೇಬಿನಿಂದ ಆ ಪತ್ರವನ್ನು ತೆಗೆದು ಸುಬ್ಬರಾಯರ ಕೈಗಿತ್ತು ವಿಜಯಳಿಗೆ " ಎಲ್ಲಿ, ಆ ಉಂಗುರವನ್ನು ತೆಗೆಯಮ್ಮ " ಎಂದರು. ಸುಬ್ಬರಾಯರು ಆ ಪತ್ರ ವನ್ನು ನೋಡುವ ಮುನ್ನ ಉಂಗುರವನ್ನೇ ತೆಗೆದುಕೊಂಡು ನೋಡಿದರು. " ಹೌದು, ಇದು ನಮ್ಮ ವಿಜಯನದೆ—ಮುದ್ರೆಯುಂಗುರ ! " ಪತ್ರವನ್ನು ಬಿಡಿಸಿ ನೋಡಿ, " ಸ್ವರ್ಣಾಳ ಹಸ್ತಾಕ್ಷರವೆಂಬುದರಲ್ಲಿ ಯಾವ ಸಂಶಯವೂ ಇಲ್ಲ " ವಂದರು. ಸುಬ್ಬರಾಯರಿಗೆ ಸಂತೋಷದಿಂದ ಎದೆಯೊಡೆಯು ವಂತಾಯಿತು. ಕಣ್ಣುಗಳಿಂದ ಸಂತೋಷದ ಬೆಳಕು ಹೊರಹೊಮ್ಮುತ್ತಿತ್ತು. ಕಾವೇರಮ್ಮ ವಿಜಯಳನ್ನಪ್ಪಿಕೊಂಡು ಕುಳಿತು ಅಳುತ್ತಿದ್ದರಾದರೂ ಆನಂದದ ಚಿಹ್ನೆ ಅವರ ಮುಖದಲ್ಲಿ ದೇವತಾಸ್ವರೂಪವನ್ನು ತಾಳಿತ್ತು. ಇವನ್ನೆಲ್ಲ ನೋಡಿದ ವಿಜಯಳಿಗೆ ಇದೊಂದು ನಾಟಕವೆಂಬಂತೆ ಕಂಡಿತು. ಅವಳಿಗೆ ಒಂದೂ ತಿಳಿಯದು, ಅರ್ಥವಾಗದು. ಚಿತ್ತಭ್ರಮೆ ಹಿಡಿದವಳಂತೆ ಸುತ್ತ ಮುತ್ತಲೂ ನೋಡುತ್ತಿದ್ದಳು. ಅವಳ ತೀಕ್ಷ್ಣ ದೃಷ್ಟಿ ಅನಂತನದನ್ನು ಕೂಡಿತು. ನಸುನಗುವೊಂದು ಅವಳ ಚೆಂದುಟಿಗಳ ಮಧ್ಯೆ ನಲಿದಾಡಿತು. ಅನಂತನ ಪಕ್ಕ ದಲ್ಲಿದ್ದ ಪ್ರಕಾಶ ಇದನ್ನು ನೋಡದಿರಲಿಲ್ಲ. ಪ್ರಕಾಶನಿಗೆ ವಿಷಯ ತಿಳಿಯಿತು. ಪ್ರಕಾಶ ಸಮೀಪದಲ್ಲಿದ್ದನಾದರೂ ಕಾವೇರಮ್ಮನ ಎಡ ಬಾಹುವಿನಲ್ಲಿ ಮುದುಡಿ ಕುಳಿತಿದ್ದ ವಿಜಯಳ ಮೇಲೆಯೆ ಅವನ ಪ್ರಾಣದೃಷ್ಟಿಗಳು ನೆಟ್ಟುಹೋಗಿದ್ದವು.

ಎಲ್ಲರೂ ಸುಬ್ಬರಾಯರಿಂದ ಆ ಪತ್ರವನ್ನೂ ಉಂಗುರವನ್ನೂ ಇಸುಕೊಂಡು ನೋಡಿದರು. ಅನಂತನೂ ಆ ಪತ್ರವನ್ನು ಪ್ರಕಾಶನ ಕೈಯಿಂದ ಕಿತ್ತುಕೊಂಡು ನೋಡಿದನು. ವಿಜಯಳಿಗೂ ಆ ಪತ್ರವನ್ನು ಓದಬೇಕೆಂಬ ಆಸೆಯಾಯಿತು.

ಮಾಧವರಾಯರ ಮನೆಯಲ್ಲಿ ಅಚ್ಚುಮೆಚ್ಚಿನ ಮೊಮ್ಮಗಳಾದಳು ವಿಜಯ! ಇನ್ನವಳಿಗೆ ಏನು ಕಡಿಮೆ? ಸ್ವರ್ಣಳ ಸುಲಿದಿಟ್ಟ ರೂಪದಂತಿರುವ ವಿಜಯ ಈಗ ಕಾವೇರಮ್ಮನ ಬಲಗೈ. ಮನೆಯಾಡಳಿತವೆಲ್ಲವೂ ವಿಜಯಳ ಕೈಯಲ್ಲಿದೆ. ಕಾವೇರಮ್ಮನಿಗೆ ಮಾತ್ರವಲ್ಲದೆ ಮಾಧವರಾಯರಿಗೂ ಸುಬ್ಬರಾಯರಿಗೂ ವಿಜಯ ಮಾಡಿ ಬಡಿಸುವ ಅನ್ನ ಪರಮಾನ್ನಭೋಜನವಾಗಿ ತೋರಿ, ಸ್ವರ್ಣಳಿಲ್ಲದ ಊಟಕ್ಕಿಂತಲೂ ರುಚಿಸುತ್ತಿತ್ತು. ಸಹೋದರಿಯ ಮಗಳೆಂದು ನಿರ್ಣಯವಾಗಿರುವ ವಿಜಯಳನ್ನು ತಾನು ಅಂದು ಜಟಕಾದಲ್ಲಿ ಕುಳಿತು ಯೋಚಿಸಿದ ಅನೀತಿಯುಕ್ತ ವಿಚಾರಗಳನ್ನು ದೂರೀಕರಿಸಿ, ಅವಳನ್ನು ತನ್ನ ಸೊಸೆಯಂತೆ ಪ್ರೀತ್ಯಾದರಗಳಿಂದ ನೋಡಲಾರಂಭಿಸಿದ, ಪ್ರಕಾಶ. ಪ್ರತಿದಿನ ಒಮ್ಮೆಯಾದರೂ ಸ್ವರ್ಣಳ ವಿಷಯವಾಗಿ ಯೋಚಿಸದಿರುತ್ತಿರಲಿಲ್ಲ, ಪ್ರಕಾಶ. ಸತ್ತು ಹೋಗಿರಲಾರಳು, ಎಲ್ಲಾದರೂ ಇದ್ದಾಳು ಎಂದೆನ್ನುತ್ತಿದ್ದಿತು ಅವನ ಅಂತರಾತ್ಮ. ಲೋಕವೆಲ್ಲವೂ ಶೂನ್ಯವೆಂದು ಭಾವಿಸಿದ್ದ ವಿಜಯಳಿಗೀಗ ಬಂಧುಗಳಿದ್ದಾರೆಂದು ತಿಳಿದು ಬರಲು ಅದೆಷ್ಟು ಆನಂದವಾಗಿರಲಾರದು! ತಾತಂದಿರಿಬ್ಬರು, ಅಜ್ಜಿಯೊಬ್ಬಳು, ಅಲ್ಲದೆ ಸೋದರಮಾವನೊಬ್ಬ—ಈಗ ವಿಜಯಳಿಗೆ!

ವಿಜಯಳ ವಿವಾಹ ಇನ್ನು ಸ್ವಲ್ಪ ದಿನಗಳೊಳಗೆ ತೇಜಪಾಲನೊಂದಿಗೆ ಆಗಲಿದೆ. ಇದು ಅವಳ ಅಂತರಾತ್ಮಕ್ಕೆ ವಿರುದ್ಧವಾಗಿದೆ. ಅವಳ ಮನದಾಸೆಯನ್ನು ಯಾರು ನೆರವೇರಿಸುವುದು? ಯಾರಾದರೂ ಇದ್ದರೆ, ಅವಳ ಮನಸ್ಸಿನ ಇಚ್ಛೆಯನ್ನು ತಿಳಿಯುವುದಾದರೂ ಹೇಗೆ? ಮಥುರಾನಾಥರಾಯರ ಕರುಣೆಯ ಕೈಯಲ್ಲಿ ವಿಜಯ ಬೆಳೆದವಳು. ಎಳೆಹಸುಳೆಯಿಂದ ಇಂದಿನ ವರೆಗೂ ಉಂಡ ಅನ್ನ, ಉಟ್ಟ ಬಟ್ಟೆ—ಎಲ್ಲ ಅವರದ್ದೆ! ಅವರ ಮನಸ್ಸು ಅಂದು ಕಲ್ಲಾಗಿರುತ್ತಿದ್ದರೆ ಈಗಿನ ವಿಜಯ ಎಲ್ಲಿ ಮಣ್ಣುಪಾಲಾಗಿ ಹೋಗುತ್ತಿದ್ದಳೊ ಏನೊ! ಅಂದಮೇಲೆ ವಿಜಯಳೀಗ ಯಾವ ಪಂಥವನ್ನು ಹಿಡಿಯಬೇಕು? ವಿಜಯ

ಅನಂತನನ್ನು ವಿವಾಹವಾಗಲಪೇಕ್ಷಿಸುತ್ತಾಳೆ. ಅನಂತನ್ಯಾರು ? ಮಥುರಾನಾಥರ ಒಲುಮೆಯ ಏಕಮಾತ್ರ ಪುತ್ರ ! ಅವನನ್ನು ವಿಜಯ ಅವರಿಂದ ಕಸಿದುಕೊಳ್ಳಲು ಯತ್ನಿಸುತ್ತಾಳೆ ! ಅನಂತ ವಿಜಯಳನ್ನು ತನ್ನ ಜೀವನದ ಸಂಗಾತಿಯನ್ನಾಗಿ ಮಾಡಿಕೊಳ್ಳಲು ಅಪೇಕ್ಷಿಸುತ್ತಾನೆ. ಆದರೆ ಅವನ ತಂದೆ ತಾಯಿಗಳು ಅವನ ವಿಷಯದಲ್ಲಿ ಯಾವ ಉಚ್ಚ ಆಲೋಚನೆಯಲ್ಲಿರುವರು ಎಂಬುದು ಯಾರಿಗೆ ಗೊತ್ತು ? ಬೇಕೆಂದವಳನ್ನು ತಂದು ಲಗ್ನ ಮಾಡಿಸಲು ಸಿದ್ಧರಿರಬಹುದವರು. ಆದರೆ ಅದಕ್ಕೆ ಅನಂತ ಸಿದ್ಧನೆ ?

ಸುಬ್ಬರಾಯರು ಮಥುರಾನಾಥರಾಯರಿಗೆ ವಿಜಯ ತಮ್ಮ ಸೊತ್ತೆಂಬುದನ್ನು ವ್ಯಕ್ತಪಡಿಸಿದುದಾಯಿತು. ಅಲ್ಲದೆ ಇಂದಿನ ತನಕ ಅವಳಿಗಾಗಿ ವೆಚ್ಚವಾದ ಹಣದ ಲೆಕ್ಕವನ್ನು ತಿಳಿಸಿದರೆ ಎಲ್ಲವನ್ನೂ ಮುಟ್ಟಿಸಲು ಸಿದ್ಧರಿರುವರೆಂಬುದನ್ನೂ ಹೇಳಿದುದಾಯಿತು. ಆದರೆ ವಿಜಯಳನ್ನು ಹಸಿ ಹಸುಳೆಯಾಗಿದ್ದಾಗಿನಿಂದಲೂ ಲಾಲಿಸಿ ಪಾಲಿಸಿ ಪೋಷಿಸಿದವರ ಕಡವನ್ನೂ ಅದರ ಭಾರವನ್ನು ಹೊತ್ತ ಮಥುರಾನಾಥರಾಯರ ಕಡವನ್ನು ತೀರಿಸಲೂ ಮನುಷ್ಯ ಮಾತ್ರರಿಂದ ಸಾಧ್ಯವಿಲ್ಲ. ಆದ್ದರಿಂದ ಈ ವಿಷಯದಲ್ಲಿ ಮನ್ನಿಸಿ ವಿಜಯಳನ್ನು ತಮ್ಮ ಪಾಲಿಗೆ ಬಿಟ್ಟುಕೊಡಬೇಕೆಂದು ವಿನಯಪೂರ್ವಕವಾಗಿ ಬೇಡಿಕೊಂಡರು. ವಿಜಯಳ ವಿವಾಹ ವಿಷಯದಲ್ಲಿ ತಾವೆಲ್ಲವನ್ನೂ ನಿರ್ಧರಿಸಿ ಆಗಿದೆ; ಅದೂ ತಮ್ಮ ಭಾಗ್ಯಗಳಲ್ಲಿ ಒಂದಾಗಿದೆ—ಎಂದು ಮುಂತಾಗಿ ಸುಬ್ಬರಾಯರು ಮಥುರಾನಾಥರಾಯರಿಗೆ ಪತ್ರ ಬರೆದು ತಿಳಿಸಿದರು.

ಮಥುರಾನಾಥರಿಗೆ ಸುಬ್ಬರಾಯರ 'ಲೆಕ್ಕ ಮುಟ್ಟಿಸುವ' ವಾಕ್ಯ ಕಂಡೊಡನೆ ಸ್ವಲ್ಪ ಬೇಸರವಾಯಿತು. ಆದರೂ ಹುಣಸೂರು ಗ್ರಾಮದ ಅವರ ಸಂಪೂರ್ಣ ಆಸ್ತಿಯನ್ನು ತಮ್ಮ ವಶಕ್ಕೆ ಕೊಟ್ಟು, ಬಡ ಮಕ್ಕಳ ವಿದ್ಯಾಭ್ಯಾಸದ, ಕೈಗಾರಿಕೆಯ ಶಾಲೆಗಳನ್ನು ಅವರೇ ನಿರ್ಮಾಣ ಮಾಡಿರುವುದನ್ನು ನೆನಸಿಕೊಂಡು ಅದನ್ನು ಮರೆತರು. ಕಾಗದದ ಮಧ್ಯದ ಮತ್ತು ಕಡೆಯ ವಾಕ್ಯಗಳನ್ನು ಓದಿ ಸಂತೋಷ ಹೊಂದಿರಬಹುದು.

"ಕೊಡವೆಲ್ಲಿದೆ ?" ಎಂದು ಅನಂತ ಕೇಳಿದ.

"ಬಾವಿಯ ದಂಡೆಯಲ್ಲಿಟ್ಟು ಬಂದಿರುವೆ" ಎಂದಳು ವಿಜಯ.

"ಊಂಹುಂ ! ಅಲ್ಲಿಡಬೇಡ, ಯಾರಾದರೂ ಅದನ್ನು ನೋಡಿ ನಿನ್ನನ್ನು

ಹುಡುಕಲಿಕ್ಕೆ ಇಲ್ಲಿಗೆ ಬಂದಾರು!—ವಿಜಯಾ, ನೀನು ಬರುವಿಯೆಂದು ನನ್ನ ಕನಸಿನಲ್ಲಿ...."

"........ನೀವು ಸ್ವಪ್ನದಲ್ಲೂ ನೆನಸಿರಲಿಲ್ಲ, ಅಷ್ಟೆ ತಾನೆ?"

"ಹೌದು."

"ನನಗೆ ಈ ರೀತಿಯಲ್ಲಿ ನಿಮ್ಮ ದರ್ಶನವಾಗುವುದೆಂದು...."

"........ನೀನು ಕನಸಿನಲ್ಲೂ ಗಣಿಸಿರಲಿಲ್ಲ, ಅಷ್ಟೆ ತಾನೆ?"

"ನೀವು ಈ ರೀತಿ ಪರಿಹಾಸ್ಯ ಮಾಡುವುದಾದರೆ...."

"ಆಹಾಂ! ಇಲ್ಲ. ನಿಲ್ಲು ವಿಜಯ. ನಿನ್ನ ಕೋಪಕ್ಕೆ ಒಂದು ಮಿತಿಯೆ ಇಲ್ಲ."

"ಅದೋ! ಅಜ್ಜಿ ಕರೀತಾರೆ, ನಾನು ಹೋಗುವೆ"

ಎಂದು ವಿಜಯ ಕಾವೇರಮ್ಮನ ಕರೆಗೆ ಹಾಜರಾಗಲು ಅನಂತನಿಂದ ಬಿಡುವು ಹೊಂದಿ, ಬಾವಿಯಿಂದ ನೀರು ತೆಗೆದುಕೊಂಡು ಮನೆಗೆ ನಡೆದಳು.

೨೬

"ಸೋಮಪ್ಪಸೆಟ್ಟರ ಕೈಕಾಲು ಹಿಡಿದು ಹೇಗಾದರೂ ಒಂದು ಜನ ದೊರಕಿಸಿದೆ. ಅಂತೂ ಎಲ್ಲಾ ಖರ್ಚು ಕೊಟ್ಟು ಕಳಿಸಿದೆ. ಅವನು ಅಡಿಗೆ ಮಾಡಿದುದನ್ನು ತಿನ್ನೋದಕ್ಕಿಂತ ಮಣ್ಣು ತಿನ್ನೋದು ಒಳಿತೂಂತ ಬರ್‍ದಿದ್ದಾನೆ, ತೇಜ. ಇನ್ನೇನು! ರಂಗಮ್ಮನನ್ನೇ ಕಳಿಸಿಕೊಡೋಣ."

"ಅವಳೊಬ್ಬಳೇ ಹೇಗೆ ಹೋದಾಳೂಂತ?"

"ಏಕೆ? ಅವನೇ ಬರೆದಿದ್ದನಲ್ಲ ಮೊದಲ ಕಾಗದದಲ್ಲಿ—ಯಾವ ದಿವಸ, ಯಾವ ಬಸ್ಸಿಗೆ ಕಳಿಸಿ ಕೊಡ್ತೀರಿ ಅನ್ನೋದನ್ನ ಮೊದಲೆ ತಿಳಿಸಿಬಿಡಿ, ಯಾರಾದರನ್ನು ಕಳಿಸಿ ಮನೆಗೆ ಕರಕೊಂಡು ಬರುತ್ತೇನೆ, ಅಂತ."

"ಮತ್ತೇನು? ಸರಿ ಹಾಗಿದ್ರೆ. ಆದರೆ ಅವಳು ಒಪ್ಪುತಾಳೊ ಇಲ್ಲೊ? ಅವಳ ಮನಸ್ಸನ್ನೂ ತುಸು ಅರಿಯೋದು ಬೇಡವೆ?"

"ಏನರಿಯೋದು? ಅರಿಯೋದು ಇಲ್ಲ. ಇಲ್ಲಿರೋ ಹಾಗೆಯೆ. ಅಲ್ಲಿ ವಿಶೇಷ ಏನಿದೆ? ಅಲ್ಲಿ ಒಬ್ಬನಿಗೆ ಅಡಿಗೆ ಮಾಡಿದರೆ ಸರಿ, ಕೆಲಸ ಸುಲಭ ಆಗುತ್ತೆ."

"ಹೌದ್ಹಾದು! ನಿಮಗೇನು ಬಾಯಲ್ಲಿ ಬೇಗ ಅಂದೀರಿ. ಎಲ್ಲಾ ಸರಿ

ಯಾಗೇ ಇರುತ್ತೆ! ಮಧ್ಯಾಹ್ನದ ಊಟ ಅವನಿಗೆ ಆಫೀಸಿಗೆ ಕೊಂಡ್ಹೋ ಗೋದು ಬೇಡ್ವ ಕಾಣುತ್ತೆ!"

"ನೀನು ಸುಮ್ಮನೆ ನನ್ನನ್ನು ಕೆರಳಿಸಬೇಡ, ಹೋಗು."

"ನಾನು ಹೇಳೋದರ ಅರ್ಥಾನೇ ಆಗೋದಿಲ್ಲ, ನಿಮಗೆ."

"ಏನದು, ನಿನ್ನ ಅರ್ಥದ ಮಾತು?"

"ಅವನು ಅಲ್ಲಿ ಒಬ್ಬನೇ ಇರುವಾಗ ರಂಗಮ್ಮನನ್ನು ಹಾಗೆ ಒಮ್ಮೆಲೆ ಕಳಿಸೋದು ನನಗಷ್ಟೊಂದು ವಿಹಿತ ಕಾಣೋದಿಲ್ಲ."

"ಏನು, ರಂಗಮ್ಮನ ಮೇಲೂ ನಿನ್ನ ಸಂದೇಹವೆ?"

"ನನಗ್ಗೊತ್ತು, ರಂಗಮ್ಮ ಅಂಥವಳಲ್ಲಾಂತ. ಆದರೂ ರಾತ್ರಿ ವೇಳೆ ಇಬ್ಬರೂ ಒಂದು ಮನೇಲಿ ಇರೋದೂಂದರೆ...."

"ಅದೂ ನಿಜ! ಏನು ಮಾಡೋಣ?"

"ರಂಗಮ್ಮನಿಗೆ ಜ್ವರಾಂತ ಬರದು, ನೀನು ಮದುವೆಯಾಗಿ ಹೋಗೋ ವೇಳೆಗೆ ರಂಗಮ್ಮನನ್ನೂ ಕರಕೊಂಡು ಹೋಗಬಹುದು, ಅಂತ ಬರೀರಿ. ಆ ತನಕ ಹೋಟಲಲ್ಲಿ ಊಟ ಮಾಡಲಿ."

"ಹಾಗೇ ಬರೀತೇನೆ. ಆದರೂ ರಂಗಮ್ಮನನ್ನ ವಿಚಾರಿಸು."

ಈ ತೆರನಾಗಿ ಪದ್ಮಮ್ಮನೊಡನೆ ಮಥುರಾನಾಥರು ವಕಾಲತ್ತು ಮಾಡುತ್ತಿರಲು ಟಪ್ಪಾಲು ಪೇದೆ ಒಂದು ಪತ್ರವನ್ನು ತಂದಿತ್ತ. ಪದ್ಮಮ್ಮ ಒಳಗೆ ಕಾಲಿಟ್ಟವರು ಕಾಗದವನ್ನು ನೋಡಿ ಗಂಡನ ಕುರ್ಚಿಯ ಬದಿಗೆ ಬಂದು ನಿಂತರು. ಓದುತ್ತ ರಾಯರು ನಗುಮುಖರಾಗುತ್ತಿರುವುದನ್ನು ನೋಡಿ ಪದ್ಮಮ್ಮನಿಗೆ ನಗು ತಡೆಯಲಾರದೆ, ನಗುವಿನ ಬುಗ್ಗೆ ಒಡೆದಂತೆ ನಕ್ಕು, "ಏನೂಂದ್ರೆ? ಓದ್ತಾ ನಗ್ತೀರಿ. ಕಾಗದ ಯಾರದು?" ಎಂದು ಪ್ರಶ್ನಿಸಿದರು. ತಮ್ಮ ಅರ್ಧಾಂಗಿಯ ಮೋರೆ ನೋಡಿ ಒಂದಿಷ್ಟು ಹಲ್ಲು ಬಿಟ್ಟರು ಮಥುರಾನಾಥರು.

"ನಿನ್ನ ಮನಸ್ಸಿನ ಆಸೆ ನೆರವೇರಿತು!"

"ಏನೂಂದ್ರೆ, ನನ್ನ ಮನಸ್ಸಿನ ಆಸೆ ನೆರವೇರಿತು ಅಂತೀರಿ?"

"ಮದುವೆಯಾಗಿ ಇಪ್ಪತ್ತು ವರ್ಷ ದಾಟ್ಲಿಕ್ಕಾಯ್ತು; ಇನ್ನೂ ಏನೂ ತಿಳಿಯೋದಿಲ್ಲ! ನನಗೇ ಅಂತ ಎಲ್ಲಿ ಹುಟ್ಟಿದ್ಯೋ ಏನೋ ನೀನು?"

"ಪಾಪ, ಎಲ್ಲಿ ಹುಟ್ಟಿದ್ದು ಅಂತ ಗೊತ್ತಿಲ್ವೆ! ನಿಮಗೇನು? ಈವತ್ತು

ಹುಚ್ಚು—ಗಿಚ್ಚು....ನಾನೇನ್ಮಾಡಲಿ” ಎಂದು ಪದ್ಮಮ್ಮ ನಸುನಗುತ್ತ ಕಡೆ ಗಣ್ಣಿನಿಂದ ಗಂಡನನ್ನು ನೋಡಿದಳು.

“ಹಾಗನ್ನಿ್ತೀಯೇನು? ನೋಡು, ಎರಡನೇ ಲಗ್ನಾಗತೀನಿ!”

“ಆಗಿ! ಯಾರು ಬೇಡಾಂದರು?”

“ಹಾಂ! ಅಷ್ಟು ಬೆಳೆದುಹೋದೆಯಾ?” ಎಂದು ಮಥುರಾನಾಥರು ಪದ್ಮಮ್ಮನ ಕೆನ್ನೆಯನ್ನು ನಯವಾಗಿ ಚಿವುಟಿದರು.

ಪದ್ಮಮ್ಮನಿಗೆ ಸಂತೋಷದಲ್ಲಿಯೆ ಒಂದು ಕೋಪ!

“ಬಿಡೀಂದ್ರೆ. ಪತ್ರ ಏನು, ಎಲ್ಲಿಂದ ಅಂತ ಕೇಳಿದರೆ, ಆಟ ಆಡ್ತಾರೆ ಆಟ!”

“ಹೆಂಗಸರ ಹಣೇಬರಹ ಅಂದರೆ ಇದೇ!”

“ಏನು?”

“ನಾವಾಗಿ ಮುಂದೆ ಹೋಗುವಾಗ ಬಹಳ ಧೈರ್ಯ ತೋರಿಸೋದು! ಅವರಾಗಿ ಬರುವಾಗ ಮಾತ್ರ....”

“ಹೌದ್ಹೌದು, ನಿಮಗೆ ಬಹಳ ಗೊತ್ತು!”

“ಮತ್ತೆ! ನಿನಗೇ ಎಲ್ಲಾ ಗೊತ್ತಿರೋದು.”

“ನಿಮಗೆ ಇವತ್ತು ಏನೋ ಹಿಡಿದಿದೆ!” ಎಂದು ಪದ್ಮಮ್ಮ ಹೊರಡಲು ತಯಾರಾಗಲು ಮಥುರಾನಾಥರು “ನಿಲ್ಲೇ ಅಲ್ಲಿ!” ಎಂದು ಒಮ್ಮೆ ಓದಿದ ಪತ್ರವನ್ನು ತಿರುಗಿ ಬಿಡಿಸಿ ಒಂದು ನೋಟ ಬೀರಿದರು.

“ಪತ್ರ ಸುಬ್ರಾಯರಿಂದ. ವಿಜಯ ಅವರ ಮೊಮ್ಮಗಳು ಅಂತ ಆ ಪತ್ರದಿಂದಲೂ ಉಂಗುರದಿಂದಲೂ ಗೊತ್ತಾಯಿತಂತೆ. ಇನ್ನು ವಿಜಯ ಅವರ ಸೊತ್ತಾದಳು.”

“ಹಾಗಂತಾದ್ರೆ ವಿಜಯಳನ್ನು ತೇಜೂಗೆ ಲಗ್ನ ಮಾಡಿ ಕೊಡೋದಕ್ಕೆ ಅವರ ಅಪ್ಪಣೆ, ಸಮ್ಮತ ಬೇಕೇನು?”

“ಉಂಹುಂ. ‘ನೀವೇ ಈ ಮದುವೆ ನಿಶ್ಚಯಿಸಿದ್ದಕ್ಕೆ ನಾವು ನಿಮಗೆ ತುಂಬಾ ಋಣಿ!’ ಅಂತ ಅವರೇ ತಿಳಿಸಿಬಿಟ್ಟಿದ್ದಾರೆ. ಅಲ್ಲದೆ, ವಿಜಯಳಿಗೆ ಜಾತಿ ಇದೆಯೋ ಕುಲ ಇದೆಯೋ? ಯಾವುದೋ ಒಂದು ದಾರೀಲಿ ಸಿಕ್ಕಿದ ಹುಡುಗೀನ್ನ ತೇಜೂಗೆ ಮಂಗಳ ಮಾಡೋದೆ?—ಅಂತ ಎದೆ ಎದೆ ಬಡಕೊಂಡ

ನಿನಗೆ ಶಾಂತಿ ಸಿಕ್ಕಿತೊ ಇಲ್ಲೊ ಈಗ? ಅವಕ್ಕೇ ಅಂದೆ—ನಿನ್ನ ಮನಸ್ಸಿನ ಆಸೆ ನೆರವೇರಿತೂಂತ. ಆಯಿತೆ? ಹೋಗು ಇನ್ನು!"

"ಹುಂ! ಏಳಿ, ಊಟಮಾಡ್ಡೋ ಹೊತ್ತಾಯ್ತು."

ಊಟವಾಗಿ ಮಥುರಾನಾಥರು ಮಲಗುವ ಕೋಣೆಯಲ್ಲಿ ವಿದ್ಯುಚ್ಛಕ್ತಿಯ ಬೀಸಣಿಗೆ ತಂದು ಮುಂದಿಟ್ಟುಕೊಂಡು ವೀಳ್ಯ ಹಾಕಿಕೊಂಡರು. ತರುವಾಯ ಹಗಲಿನ ನಿದ್ದೆಗೆ ತಯಾರಾದರು.

ಪದ್ಮಮ್ಮನೂ ಉಂಡು ಎಲೆಯಡಿಕೆ ಹಾಕಿಕೊಳ್ಳುತ್ತಿದ್ದರು. ರಂಗಮ್ಮ ಆಗಷ್ಟೆ ಅವರಿಗೆ ಉಣಬಡಿಸಿದಳು. ದಿನಾಲೂ ಬಡಿಸುವಂತೆ ಇಂದೂ ಬಡಿಸಿ ಕೊಂಡು ಊಟಮಾಡಲು ಕುಳಿತುಕೊಳ್ಳಲು ಪದ್ಮಮ್ಮ, "ಏನಿದು ರಂಗಮ್ಮ, ದಿನ ಹೋದಂತೆ ಚಿಕ್ಕವಳಾಗ್ತಾ ಬರ್ತೀಯೇನು? ದಿವಸ ಹೋದ ಹಾಗೆಲ್ಲ ಊಟ ಮಾಡೋದು ಕಡಿಮೆ ಮಾಡಿಕೊಂಡು ಬರುತ್ತಿ. ಚೆನ್ನಾಗಿ ದುಡಿಯು ವವರು ಚೆನ್ನಾಗಿ ಉಣಬೇಕು!"

"ಇಲ್ಲವಮ್ಮಾ, ಯಾವಾಗ್ಲೂ ಉಣ್ಣೋ ರೀತಿಯಲ್ಲೇ ಈಗೂ ಉಣ್ತಿದ್ದೇನೆ. ನಾನೇ ಮಾಡೋಳು, ನಾನೇ ಬಡಿಸೋಳು—ಅಂದಮೇಲೆ ನನ್ನ ಹೊಟ್ಟೆಗೆ ನಾನು ಕಡಿಮೆ ಮಾಡಿಯೇನೆ, ತಾಯಿ! ನಿಮ್ಮಂಥಾವರ ಉದಾರ ಹಸ್ತವಿದೇನ್ನುವಾಗ ನನಗೇನು ಕಡಿಮೆ!"

"ಸರಿ! ನೀನು ಬೇಗ ಉಣ್ಣು. ನಿನ್ನೊಡನೆ ಒಂದು ಮಾತಾಡೋದಿದೆ."

"ಆಗಲಮ್ಮಾ!"

ತನಗಾಗಿ ತಾನೇ ಬಡಿಸಿದ ಅನ್ನದ ಹಿಡಿಯೆ ರಂಗಮ್ಮನಿಗೆ ಹಿಮಾಲಯ ಪರ್ವತವೋ ಎಂದೆನಿಸಿತು. ಉಂಡಷ್ಟೂ ಮುಗಿಯದಾಯಿತು—ಆ ಅನ್ನ, ಅವಳಿಗೆ. ಬೇಗನೆ ಉಂಡು ತೆರಳೋಣವೆಂದರೆ ಪದ್ಮಮ್ಮ ಕೋಪಿಸಿಕೊಳ್ಳ ಬಹುದು. ಬಡಿಸಿದ್ದನ್ನೇ ಉಣಲಾಗುವುದಿಲ್ಲವೆಂದಮೇಲೆ ಇನ್ನೂ ಹಾಕಿ ಕೊಂಡರೆ ಉಣ್ಣುವುದು ಹೇಗೆ? ಯಾವ ವಿಷಯವನ್ನು ಪದ್ಮಮ್ಮ ತನ್ನೊಂದಿಗೆ ವಿಚಾರಿಸಬೇಕೆಂದಿರುವರು? ವಿಜಯಳ ಕುರಿತಾಗಿರಬಹುದೆ? ಅನಂತನದೆ? ಅವನ ಕುರಿತು ತನ್ನೊಡನೆ ವಿಚಾರಿಸತಕ್ಕುದೇನಿದೆ? ಹೀಗೆ ಯೋಚಿಸುತ್ತಿರಲು —ರಂಗಮ್ಮನ ಊಟ ಮುಗಿಯಿತು. ಅದೇಷ್ಟು ಬೇಗ ಉಂಡಿದ್ದರೂ ರಂಗಮ್ಮ ಆ ಸಮಯವನ್ನು ವರುಷವೆಂದೇ ಭಾವಿಸಿದಳು. ಎಲೆ ಬಿಸುಟು ಅಡಿಗೆ

ಕೋಣೆಯ ಸಾಮಾನುಗಳನ್ನು ಒರಸೆಯಾಗಿಟ್ಟು ಪದ್ಮಮ್ಮನಿದ್ದೆಡೆ ತೆರಳಿದಳು ರಂಗಮ್ಮ. ಗಾಢನಿದ್ರೆಗೆ ಬಲಿಯಾಗಿರದಿದ್ದರೂ ಕಣ್ಣು ಮುಚ್ಚಿ ಮಲಗಿದ್ದ ಪದ್ಮಮ್ಮನನ್ನು ಕರೆಯಲು ರಂಗಮ್ಮನಿಗಾಗ ಧೈರ್ಯ ಸಾಲದಾಯಿತು. ಅವಳ ಅಂತರಂಗ ಒಪ್ಪದಾಯಿತು. ಎಚ್ಚರಿಸದಿದ್ದರೆ ಏಕೆ ಎಚ್ಚರಿಸಲಿಲ್ಲ? ಎಂಬ ಸಮಸ್ಯೆ ಏಳಬಹುದು. ಕೊನೆಗೆ ಧೈರ್ಯ ತಂದುಕೊಂಡು, "ಕರೆದು ದೇಕಮ್ಮಾ?" ಎಂದು ತುಸು ಗಟ್ಟಿಯಾಗಿ ಕೇಳಿದಳು, ರಂಗಮ್ಮ.

"ರಂಗಮ್ಮ, ಬಾ. ಇಷ್ಟು ಬೇಗ ಊಟ ಮಾಡಿದೆಯಾ? ನೀನು ಸರಿಯಾಗಿ ಉಂಡಿಲ್ಲವೆಂಬುದು ನಿನ್ನ ಮೋರೆ ನೋಡಿದರೆ ತಿಳಿಯುತ್ತೆ."

"ಇಲ್ಲವಮ್ಮಾ, ದಿನದಕಿಂತಲೂ ಈವತ್ತು ಹೆಚ್ಚಾಗಿ ತಿಂದೆ."

"ಹುಂ! ಸರಿ!—ನಿನ್ನನ್ನು ಮದನಪಲ್ಲಿಗೆ ಕಳಿಸಿಕೊಡಲು ತೇಜಪಾಲನಿಂದ ಕಾಗದ ಬಂದಿದೆ. ಅವನಿಗೆ ಹೋಟಲಿನ ಊಟ ಸರಿಯಾಗೊಲ್ಲವಂತೆ. ಆದ್ದರಿಂದ ಒಂದು ಮನೆ ಮಾಡಿರುವನಂತೆ; ಸಾಮಾನೆಲ್ಲ ಅಲ್ಲೇ ಇದೆಯಂತೆ, ಏನೊ ಒಂದು ಎರಡು ತಿಂಗಳಿಗೆ. ಆಮೇಲೆ ಮತ್ತೆ ನೀನು ಇಲ್ಲೇ ಇರಬಹುದು."

ರಂಗಮ್ಮನಿಗೆ ತಾನಿರುವುದೆಲ್ಲಿ? ಯಾರೊಂದಿಗೆ ಮಾತನಾಡುತ್ತಿದ್ದೇನೆ—ಎಂಬುದರ ಗೋಚರವೆ ಇಲ್ಲವಾಯಿತು. ಅವಳಿಗೆ ತಲೆ ತಿರುಗುವಂತಾಗಿ ಮನೆ ತಲೆಕೆಳಗಾಯಿತು. ರಂಗಮ್ಮ ಪದ್ಮಮ್ಮನ ಆ ವಾಕ್ಯಗಳನ್ನು ಕೇಳಿ ದುಃಖದಿಂದ ಜೀವಚ್ಛವವಾಗಿದ್ದಳು. ಬಡವನಿಗೆ ಲೋಕದಲ್ಲಿ ಗತಿಯೆಂಬುದಿಲ್ಲ. ಸಮಾಜದಲ್ಲಿ ಕಷ್ಟದ ಪೆಟ್ಟುಗಳೆಲ್ಲವೂ ಅವನಿಗೆ ಮೀಸಲು. ಕಾರಣ ಅವನೇ ಅದರ ರುಚಿಯನ್ನು ಬಲ್ಲವನು. ಅವನೇ ಅದನ್ನು ಸಹಿಸಲು ತಿಳಿದವನು. ಅದರಲ್ಲೂ ಸ್ತ್ರೀಯರು ಕಡುಕಷ್ಟ ಬಂದರೂ ಅದನ್ನು ಬಾಯಿಬಿಡದೆ ಮನದಲ್ಲಿ ಹುದುಗಿಸಿಟ್ಟು ಕಾಲಯಾಪನೆ ಮಾಡುವರು. ಅಂದಮೇಲೆ ರಂಗಮ್ಮನ ಪಾಡೇನು? ಅವಳ ಮನಸ್ಸನ್ನು ತಿಳಿದವರಾರು? ತನ್ನವರೆನಲು ಅವಳಿಗೆ ಯಾರಿರುವರು? ಲೋಕದಲ್ಲಿ ಅನೇಕರು ಹೆಂಡತಿಯನ್ನು ಬಿಟ್ಟು ಉಳಿದೆಲ್ಲ ಹೆಂಗಸರನ್ನೂ ಅಕ್ಕತಂಗಿಯರಂತೆ ಕಾಣಬೇಕೆನ್ನುವರು. ಆದರೆ ಆ ವಾಕ್ಯವನ್ನು ಪಾಲಿಸುವವರೆಷ್ಟು ಮಂದಿ? ಪದ್ಮಮ್ಮನ ಮಾತಿಗೆ ರಂಗಮ್ಮ ಯಾವ ಉತ್ತರ ಕೊಡದೆ ಮೌನಮುದ್ರೆ ಧರಿಸಿದಳು. ಎಲ್ಲ ಕಾಲಗಳಲ್ಲಿಯೂ ಮೌನ ಸಮ್ಮತಿಯನ್ನು ಸೂಚಿಸದೆಂಬುದನ್ನು ಪದ್ಮಮ್ಮನಿಗೆ ಏನು ಗೊತ್ತು! ರಂಗಮ್ಮನನ್ನು

ಕಳುಹಿಸಬಹುದೆಂಬುದನ್ನು ಗಂಡನಿಗೆ ತಿಳಿಸಿದುದೂ ಆಯಿತು. ಇನ್ನೇನು? ದಿನ ನಿಶ್ಚಯಿಸಿ ತೇಜಪಾಲನಿಗೆ ತಿಳಿಸಿದುದೂ ಆಯಿತು. ಉತ್ತರ ಬಂದೊಡನೆ ರಂಗಮ್ಮನನ್ನು ಕಳಿಸುವುದು ಎಂದು ನಿರ್ಧರಿಸಿದರು, ಮಥುರಾನಾಥರಾಯರು. ಇದು ರಂಗಮ್ಮನಿಗೆ ಪ್ರಾಣಸಂಕಟವೆನಿಸಿದರೂ ಬೇರೆ ಗತಿ? ಅವಳು ಅಧನ್ನು ಸಹಿಸಿಕೊಂಡಳು. ವಿಧಿ ಒಯ್ದೆಡೆ ಹೋಗಲು ಅವಳು ಸಿದ್ಧಳಿದ್ದಳು!

"ಇಂದೊಂದು ಶುಭ ಸುದ್ದಿಯಿದೆ, ಮೋಹಿನಿ" ಎಂದ ತೇಜಪಾಲ.

"ಯಾವುದು?"

"ನಿನ್ನ ಗೈರುಹಾಜರಿಯಾದಾಗ ಇಲ್ಲಿ ಅಡಿಗೆ ಮಾಡಲು ರಂಗಮ್ಮನನ್ನು ಕಳಿಸುತ್ತೇವೆಂತ ಊರಿನಿಂದ ಕಾಗದ ಬಂದಿದೆ."

"ರಂಗಮ್ಮ! ಯಾರವಳು?"

"ಅಲ್ಲಿ ನಮ್ಮ ಮನೇಲಿ ಗುಲಾಮಳಂತೆ ಕೆಲಸ ಮಾಡ್ತಿದ್ದಾಳೆ........"

"ಇಲ್ಲಿ ಬಂದರೆ ರಾಣಿಯ ಹಾಗೆ ಕೆಲಸ ಮಾಡುವಳೇನು?"

"ಹಾಗಲ್ಲ; ಇಲ್ಲಿ ಬಂದು ನನಗೊಬ್ಬನಿಗೇ ಅಡಿಗೆ ಮಾಡಿ ಬಡಿಸುವುದು ಅಷ್ಟೊಂದು ಕಷ್ಟವೆನಿಸದು. ಇದೇ ಬರುವ ಭಾನುವಾರ ಕಳಿಸೀಂತ ಪತ್ರ ಬರೆದಿದ್ದೇನೆ."

"ಚೆನ್ನಾಗಿ ಮಾಡುವಳೊ ಏನೊ?"

"ಅದೆಲ್ಲ 'ಫಸ್ಟ್‌ಕ್ಲಾಸ್' ಮಾಡ್ತಾಳೆ. ಬಹಳ ಚೆನ್ನಾಗಿ."

"ನನಗಿಂತಲೂ?"

"ನಿನ್ನ ಸಮ!"

'ಎಲ್ಲಾ ವಿಷಯದಲ್ಲೂ 'ನನ್ನ ಸಮ' ಆಗಿಬಿಡ್ತಾಳೊ ಏನೊ!' ಅಂದುಕೊಂಡಳು ಮೋಹಿನಿ, ಮನಸ್ಸಿನೊಳಗೆ.

* * * *

ಮಧ್ಯಾಹ್ನ ಊಟಕ್ಕೆ ಬಂದ ಅನಂತ ತನಗೆ ಬಂದಿದ್ದ ಪತ್ರವನ್ನು ನೋಡಿದನು. ಆ ಪತ್ರ ರಂಗಮ್ಮನಿಂದ ಬಂದಿತ್ತು. ರಂಗಮ್ಮ ತಾನು ವಿಧಿ ಎಳೆದ ಕಡೆಗೆ ಹೋಗಲು ತಯಾರಿದ್ದುದನ್ನು ಆ ಪತ್ರದಲ್ಲಿ ವ್ಯಕ್ತಪಡಿಸಿದ್ದಳು. ಆ ವಾಕ್ಯ ಅನಂತನಿಗೆ ಅರ್ಥವಾಗಲೊಲ್ಲದು. ವಾಕ್ಯದ ಅರ್ಥವಾಗಲಿಲ್ಲ ವೆಂದಲ್ಲ; ಆ ವಾಕ್ಯವನ್ನು ರಂಗಮ್ಮ ತನ್ನ ಮೇಲೆ ಉಪಯೋಗಿಸಲು ಕಾರಣ

ವೇನಿರಬಹುದೆಂಬುದನ್ನು ಅನಂತ ತಿಳಿಯದಾದನು. ಆಗಲೆ ಕಾವೇರಮ್ಮ, "ಹೋಗಪ್ಪ, ಬಡಿಸಿದೆ; ಬಂದೆಷ್ಟು ಹೊತ್ತಾಯ್ತು....ಕೈಕಾಲು ತೊಳಿಯದೆ" ಎಂದರು—ಅನಂತನಿದ್ದಲ್ಲಿಗೆ ಬಂದು.

ಅನಂತನಿದ್ದೆಡೆ ವಿಜಯುಳು ಇದ್ದರೂ ನೀರು ತರುವುದಕ್ಕೆ ಬಾವಿಯ ಕಡೆಗೆ ತೆರಳಿದಾಗಲ್ಲದೆ ಬೇರೆ ಸಂದರ್ಭ ಯಾವುದೂ ಒದಗಿ ಬರುತ್ತಿರಲಿಲ್ಲ, ವಿಜಯುಳಿಗೆ ಅನಂತನೊಂದಿಗೆ ಮಾತಾಡಲು. ಅಂದೂ ಅದೇ ತೆರನಾಗಿ ಬಾವಿಯ ಸಮೀಪವಿದ್ದ ಆಲದ ಮರಕ್ಕೆ ಮರೆಯಾಗಿ ನಿಂತು ಅನಂತ–ವಿಜಯರು ಸಂಭಾಷಿಸುತ್ತಿದ್ದರು.

"ಯಾರದು ಆ ಕಾಗದ? ನಾನೇ ಅದನ್ನು ಟಪ್ಪಾಲುಪೇದೆ ಕೈಯಿಂದ ಇಸುಕೊಂಡಿಟ್ಟೆ; ಆದರೆ ಓದಲು, ನಿಮ್ಮ ವಿಳಾಸದಲ್ಲಿದ್ದುದರಿಂದ ಸ್ವಲ್ಪ ಅಧೈರ್ಯವಾಯ್ತು. ಆದರೆ ಒಡೆಯೋಣಾಂತ ತೆಗೆಯುವಾಗ ಅಜ್ಜಿ ನೋಡಿ 'ಯಾರಿಗಮ್ಮಾ?' ಅಂದರು. ನಿಮಗೆನ್ನಲು ಅದನ್ನು ನನ್ನ ಕೈಯಿಂದ ಅವರೇ ಇಸುಕೊಂಡು ಇಟ್ಟುಕೊಂಡರು" ಎಂದು ವಿಜಯ ತುಸು ಬೇಸರದಿಂದ ಮಾತನಾಡಿದಳಾದರೂ ಹಸನ್ಮುಖಿಯಾಗಿದ್ದಳು.

"ರಂಗಮ್ಮನನ್ನು ಮದನಪಲ್ಲಿಗೆ ಕಳಿಸಿಕೊಡೋದ್ರಲ್ಲಿದ್ದಾರಂತೆ; ಮಾವನಿಗೆ ಅಲ್ಲಿನ ಹೋಟಲಿನ ಊಟ ಸರಿಹೋಗೊಲ್ವಂತೆ."

"ಆ ಊರಲ್ಲಿ ಅಡಿಗೆ ಮಾಡಲಿಕ್ಕೆ ಹೆಂಗಸರು ಯಾರೂ ಸಿಗಲಿಲ್ಲಾಂತ ರಂಗಮ್ಮನನ್ನು ಇಲ್ಲಿಂದ ಅಲ್ಲಿಗೆ ಕಳಿಸಿ ಕೊಡ್ತಾರೇನು?"

"ಏನೋ, ಯಾರಿಗೆ ಗೊತ್ತು? ಅದೇ ನಾನೂ ಯೋಚನೆ ಮಾಡೋದು. ಆದರೆ ರಂಗಮ್ಮ ಕಾಗದದಲ್ಲಿ ಒಂದು ಮಾತು ಪ್ರಯೋಗಿಸಿರುವಳು. ಅದನ್ನಾಕೆ ಯಾಕೆ ಪ್ರಯೋಗಿಸಿದಳನ್ನೋದು ತಿಳಿಯದಾಗಿದೆ."

"ಕಾಗದ ರಂಗಮ್ಮನಿಂದೇನು? ಅದೇನು? ಯಾವ ಮಾತದು?"

"'ವಿಧಿ ಎಳೆದ ಕಡೆ ಹೋಗಲು ತಯಾರಾಗಿದ್ದೇನೆ ನಾನು!' ಅಂತ ಬರೆದಿದ್ದಾಳೆ. ಇದು ರಂಗಮ್ಮನಿಗೆ ಅಲ್ಲಿಗೆ ಹೋಗೋದರಲ್ಲಿ ಇಷ್ಟವಿಲ್ಲ, ಅನ್ನೋದನ್ನ ತಿಳಿಸೋದಿಲ್ವೆ?"

"ಸಂದೇಹವೆ?"

"ಆದರೆ ಮಾಡೋದೇನು? ಕಾರ್ಯ ನಡೆದು ಹೋಗಿದೆ. ನಾನಲ್ಲೇ

ಇರುತ್ತಿದ್ದ ಪಕ್ಷದಲ್ಲಿ ಹೋಗಗೊಡ್ತಿರಲಿಲ್ಲ—ರಂಗಮ್ಮನನ್ನು. ಕಾರಣ ಆಕೆ ವಿಶ್ವಾಸಾರ್ಹಳಿದ್ದಾಳೆ. ನಮ್ಮಿಬ್ಬರ ವಿಷಯ ಅವಳಿಗೆ ಗೊತ್ತು. ಆದರೂ ಅದನ್ನವಳು ಈ ತನಕ ಹೊರಗೆಡವಿದೋಳಲ್ಲ. ಚಿಕ್ಕಂದಿನಿಂದಲೂ ನಮ್ಮಿಬ್ಬರನ್ನೂ ಒಡನಾಡಿಯಾಗಿಸಿದೋಳು ಅವಳೇ ಅನ್ನೋದು ನನಗೀಗ ಗಮನಕ್ಕೆ ಬರ್‍ತಿದೆ. ಎಳೆತನದಿಂದ ಬೆಳೆದು ಬಂದ ನಮ್ಮ ಪ್ರೇಮವನ್ನು ಚಿರವಾಗಿಸಲು ಅವಳ ಮನಸ್ಸು ಇಚ್ಛಿಸುತ್ತಿದೆ ಅನ್ನೋದೂ ನನಗ್ಗೊತ್ತು. ಆದರೆ...."

"ರಂಗಮ್ಮನನ್ನು ಕಳಿಸಿಕೊಟ್ಟಾಗಿರಬಹುದೆ?"

"ಈ ಪತ್ರದ ಮೇರೆಗೆ ಅವಳನ್ನು ನಿನ್ನೇನೆ ಕಳಿಸಿರಬೇಕು."

"ಹೂಂ! ಅವಳ ಹೊಟ್ಟೇಲಿ ಜನಿಸಿದೊಂದು ಕೂಸಿರುತ್ತಿದ್ರೆ!........ ಅವಳು ನಿಮ್ಮ ಮನೇಲಿ ಊಳಿಗಕ್ಕೇಂತ ಬಂದು ಸೇರೋದಕ್ಕೆ ಮೊದಲು ಅವಳೊಂದು ಕೂಸನ್ನು ಕಳಕೊಂಡಳಂತೆ. 'ಈಗ ಇರುತ್ತಿದ್ರೆ ನಿನ್ನಷ್ಟೇ ದೊಡ್ಡದಾಗಿರುತ್ತಿದ್ದಳು, ಮಗು' ಎಂದೊಮ್ಮೆ ನನ್ನೊಡನೆ ಕಣ್ಣಲ್ಲಿ ನೀರು ತಂದುಕೊಂಡು ಹೇಳಿದ್ದಳು. ನನ್ನನ್ನು ಉಳಿಸಬೇಕಂದೊ ಏನೋ ಆ ಮಗು ತೀರಿಕೊಂಡಿತು! ಅವಳ ಸ್ತನಪಾನ ನನಗಾಗ ಸಿಗದಿರುತ್ತಿದ್ರೆ ನಾನಾಗಲೆ ಇಹಲೋಕ ಯಾತ್ರೆ ಮುಗಿಸಿರುತ್ತಿದ್ದೆನೆಂತ ನಮ್ಮ ಕಾಂಚನಮ್ಮ ಒಮ್ಮೆ ನನಗೆ ಹೇಳಿದಳು. ನಿಮ್ಮ ಮಾವನಿಗೆ ದಿನಾಲು ಮಧ್ಯಾಹ್ನದ ಊಟ ಒಯ್ಯುವಾಗ, ಇಲ್ಲವೆ ಸಂಜೆ ತನ್ನ—ಪಾರಮ್ಮನ—ಗುಡಿಸಲಿಗೆ ತೆರಳುವ ವೇಳೆಗೆ ನನ್ನನ್ನೊಮ್ಮೆ ಕಾಣದೆ ಹೋಗೋದು ಅವಳಿಗೆ ಪ್ರಾಣಸಂಕಟ; ಸಾಧ್ಯವೇ ಇಲ್ಲ! ಅವಳಾಗ ನನಗೆ ತಂದುಕೊಡ್ತಿದ್ದ ತಿಂಡಿಗಳ ರುಚಿ ಈಗಲೂ ನನ್ನ ನಾಲಿಗೆ ತುದೀಲಿರುವಂತಿದೆ. ಆಹಾ! ಎಂಥ ಗುಣ ಅವಳದು!"

"ಇದೆಲ್ಲಾ ನಿಜವೇನು, ವಿಜಯಾ?"

"ಹೌದು. ಈ ಮಾತುಗಳು ಮನುಷ್ಯನ ನಂಬಿಕೆಗೆ ಒಳಗಾಗೋದು ಬಹಳ ಕಷ್ಟಸಾಧ್ಯ!"

"ನಿಜವಾಗಿಯೂ ರಂಗಮ್ಮ ಒಳ್ಳೇ ಹೆಂಗಸು. ಪವಿತ್ರ ಜೀವನ ಅವಳದು. ರಂಗಮ್ಮನ ಆ ಮಾತು ನಿಜವಾದದ್ದೇ. ವಿಧಿಯ ಲೀಲೆಯನ್ನು ಬಲ್ಲವರ್‍ಯಾರು? ದುರದೃಷ್ಟ ಅವಳನ್ನು ಕಾಡ್ತಿದೆ. ಆದರೆ ಪ್ರಪಂಚದಲ್ಲಿ ಅದು ಒಳ್ಳೇದಿರಲಿ ಕೆಟ್ಟದಾಗಿರಲಿ, ಎಲ್ಲಾ ಒಳ್ಳೇದಕ್ಕೆ ಆಗೋದು! ಅದನ್ನು

ಮನುಷ್ಯನಿಂದ ಕಂಡುಹಿಡಿಯೋದಕ್ಕಾಗೋದಿಲ್ಲ. ಕಾರಣ–ಅದು ದೈವೇಚ್ಛೆ! ಮೂರ್ಖ ಬುದ್ಧಿವಂತನನ್ನು ಅವನ ಕುರೂಪವನ್ನು ನೋಡಿ ಪರಿಹಾಸ್ಯ ಮಾಡಬಹುದು. ಆದರೆ ಬುದ್ಧಿವಂತ ಆಗ ಆ ಪರಿಹಾಸ್ಯವನ್ನು ಪರಿಹಾಸ್ಯವೆಂದು ಭಾವಿಸದೆ ಅದನ್ನು ದೇವರ ಇಚ್ಛೆ ಅಂತ ಭಾವಿಸ್ತಾನೆ; ಅಲ್ಲದೆ ಆ ಪರಿಹಾಸ್ಯಕ್ಕೆ ತಾನು ಒಳಗಾದುದಕ್ಕಾಗಿ ಚಿಂತಿಸಲಾರ! ಅಂತೆ ಒಳ್ಳೇವರು ಲೋಕದಲ್ಲಿ ಕಷ್ಟಗಳಿಗೊಳಗಾಗೋದು. ರಂಗಮ್ಮನ ಜೀವನ ಪುನೀತವಾಗಿದ್ದಷ್ಟು, ಕಷ್ಟದ ಗಂಟುಗಳಿಂದ ಕೂಡಿದೆ. ಅದನ್ನು ನೆನಸಿ ಆಶ್ಚರ್ಯಪಡಬೇಕಾಗಿಲ್ಲ. ದೇವರ ಸಹಾಯ ಅವಳ ಭಾಗಕ್ಕೆ ಕಡಿಮೆಯಾಗದು........"

* * * *

ತೇಜಪಾಲನ ಅಂತಸ್ತಿಗೆ ತಕ್ಕಂತೆ ಸಾಧಾರಣ ಮಾದರಿಯ ಉಡಿಗೆ ತೊಡಿಗೆಗಳನ್ನು ಕೊಟ್ಟು ಸಿರಿವಂತರ ಮಟ್ಟಕ್ಕೆ ಸೇರಿಸಬಹುದಾದ ರೀತಿಯಲ್ಲಿ ಮಾಡಿ ರಂಗಮ್ಮನನ್ನು ಮದನಪಲ್ಲಿಗೆ ಕಳುಹಿಸಿದುದಾಯಿತು.

ಬಸ್ ನಿಲ್ದಾಣದಲ್ಲಿ ನಿಂತು ತನ್ನ ಪೇದೆಗೆ ರಂಗಮ್ಮನನ್ನು ತೋರಿಸಿಕೊಟ್ಟು ಅವಳನ್ನು ಮನೆಯ ಕಡೆ ಕರೆದೊಯ್ಯುವಂತೆ ಹೇಳಿ ತಾನು ಹೊಸದಾಗಿ ಕೊಂಡಿದ್ದ ಕಂದು ಬಣ್ಣದ ಕಾರಿನಲ್ಲಿ ಕುಳಿತು ರಂಗಮ್ಮನು ಕಣ್ಮರೆಯಾಗುವ ತನಕ ಬಹಳ ಸಾವಧಾನವಾಗಿ ಬಿಡುತ್ತಿದ್ದು, ಅವಳು ಮರೆಯಾಗಲು ಮೋಟಾರನ್ನು ವೇಗವಾಗಿ ಬಿಟ್ಟ, ತೇಜಪಾಲ.

ಒಡೆಯನ ಮನೆಯ ಅಂಗಣಕ್ಕೆ ತಲಪಲು ರಂಗಮ್ಮನನ್ನು ತುಸು ಸರಿದು ನಿಲ್ಲುವಂತೆ ಹೇಳಿ ಪೇದೆ, "ಅಮ್ಮಾ!" ಎಂದು ಮೋಹಿನಿಯನ್ನು ಕರೆದು ವಿಷಯವನ್ನು ಹೇಳಿ ತೆರಳಿದನು.

ಮೋಹಿನಿ ಹೊರಗೆ ಬಂದು ನೋಡಲು ಪ್ರೌಢವಯಸ್ಕಳಾದ ಹೆಂಗಸು ಹಜಾರದಲ್ಲಿ ನಿಂತಿದ್ದುದನ್ನು ಕಂಡಳು.

"ನಿನ್ನ ಹೆಸರೇನು? ಬಾ, ಇಲ್ಲಿ ಕುಳಿತುಕೊ" ಎನ್ನುತ್ತ ಮೋಹಿನಿ ಅಲ್ಲಿದ್ದ ಒಂದು ಸೋಫಾದ ಮೇಲೆ ಕುಳಿತಳು. ರಂಗಮ್ಮ ನಿಂತಲ್ಲಿಯೇ ನೆಲದ ಮೇಲೆ ಕೂಡುವುದರಲ್ಲಿದ್ದಳು, ಅಷ್ಟರಲ್ಲಿ ಮೋಹಿನಿ, "ಅಲ್ಲೇಕೆ ಕುಳಿತುಕೊಳ್ಳುವೆ? ಇಲ್ಲಿ, ನನ್ನ ಸಮೀಪದಲ್ಲಿ ಕುಳಿತುಕೊ; ನೀನೂ ನನ್ನ ಹಾಗೇ ಒಬ್ಬಳು ಹೆಂಗಸಲ್ಲವೆ?" ಎಂದಳು.

ರಂಗಮ್ಮ ಮುಖವೆತ್ತಿ ನೋಡಿದಳು. ಇಬ್ಬರೂ ರೆಪ್ಪೆ ಹೊಡೆಯದೆ ಒಬ್ಬರನ್ನೊಬ್ಬರು ನೋಡಿದರು. ಈರ್ವರ ಮುಖದಲ್ಲೂ ಅಚ್ಚರಿಯ ಚಿಹ್ನೆ. ಎರಡು ಮುಖಗಳೂ ಕೆಂಬಣ್ಣವನ್ನು ತಾಳಿದವು. ಇಬ್ಬರ ಮೈ ಬೆವರಿತು. ರಂಗಮ್ಮನ ಮೈ ನಡುಗಿತು. ತುಟಿಗಳು ಅದುರಿದವು. " ಮೋಹಿನಿ ! " ಎಂಬ ಶಬ್ದ ರಂಗಮ್ಮನ ಕಂಠದಿಂದ ಅವಳಿಗರಿಯದೆ ಹೊರಹೊರಟಿತು. ನಿಂತಲ್ಲಿಯೆ ನೆಲದ ಮೇಲೆ ಬಿದ್ದುಬಿಟ್ಟಳು.

ಮೋಹಿನಿ ಕುಳಿತಲ್ಲಿಂದ ರಂಗಮ್ಮ ಬಿದ್ದಲ್ಲಿಗೆ ಎದ್ದು ಬಂದು ನೋಡಿದಳು. ರಂಗಮ್ಮ ಮೂರ್ಛಿತಳಾಗಿದ್ದಳು. ರಂಗಮ್ಮನ ಮುಖವನ್ನು ಚೆನ್ನಾಗಿ ಪರೀಕ್ಷಿಸಿದಳು—ಮೋಹಿನಿ. ಅವಳ ಮುಖಕ್ಕೆ ನೀರು ಹೊಡೆದು ಉಪಚರಿಸಿದಳು. ಇಬ್ಬರೂ ಪರಿಚಿತರು ! ಇದೇ ಪ್ರಶ್ನೆಯನ್ನು ತನ್ನನ್ನು ತಾನೇ ಕೇಳಿಕೊಳ್ಳುತ್ತಿದ್ದಾಳೆ, ಮೋಹಿನಿ. ಮೋಹಿನಿ ಅಂದು ಗಂಡನ ಪಾಯಿಜಾಮುದ ಜೇಬಿನಿಂದ ಅಪಹರಿಸಿ ಭದ್ರಪಡಿಸಿದ್ದ ಛಾಯಾಚಿತ್ರವನ್ನು ಸ್ಮರಣೆಗೆ ತಂದುಕೊಂಡಳು. ' ಅದೇ ಮೂರ್ತಿ ಇದು ' ಎಂದುಕೊಂಡಳು ಮೋಹಿನಿ ತನ್ನೊಳಗೆ.

ರಂಗಮ್ಮನು ಕಣ್ಣುಬಿಟ್ಟು ನೋಡಿದಳು. ತನ್ನ ತಲೆಯು ಮೋಹಿನಿಯ ತೊಡೆಯ ಮೇಲಿದ್ದುದನ್ನು ಗಮನಿಸಿದಳು. " ಮೋಹಿನಿ " ಎಂದಳು ರಂಗಮ್ಮ, ಮತ್ತೊಮ್ಮೆ ಮೋಹಿನಿಯ ಮುಖವನ್ನು ನೋಡಿ. " ಆತುರ ಪಡಬೇಡ ! ನಿನ್ನ ಹೆಸರೇನು ಹೇಳು ? " ಎಂದಳು ಮೋಹಿನಿ, ರಂಗಮ್ಮನನ್ನು ಸಮಾಧಾನ ಪಡಿಸುತ್ತ.

" ಮೋಹಿನಿ, ನೀನು ನನ್ನನ್ನು ಮರೆತುಬಿಟ್ಟೆಯಾ ? ಹೆಸರು ಹೇಳಬೇಕೆ ನಾನೀಗ ನಿನಗೆ ? ನಿನಗೆ ತಿಳಿಯದೆ ? ಹೌದು ! ಹೇಗೆ ಸಾಧ್ಯ ? ನೀನಾಗ ಚಿಕ್ಕವಳಾಗಿದ್ದೆ ! ನನ್ನ ಹೆಸರನ್ನು ನೀನು.... ಹೌದು.... ತಿಳಿಯದಿರುವುದೇ ಲೇಸು ! ರಂ.... ಹೇಳಲೆ ? ಸುಳ್ಳು ಹೇಳಲೆ ? ಸತ್ಯವನ್ನೆ ಹೇಳಿಬಿಡುವೆ ! " ಎಂದು ಅನೇಕ ವಿಧವಾಗಿ ಯೋಚಿಸುತ್ತಿರಲು, ಮೋಹಿನಿ, " ಏಕೆ ? ಅಳುವೆಯೇಕೆ ? ನನಗೆ ನಿನ್ನ ಮುಖವನ್ನೆಲ್ಲೋ ಕಂಡಂತಿದೆ ; ಆದರೆ ನಿನ್ನ ಹೆಸರು ಸ್ಮರಣೆಗೆ ಬರಲೊಲ್ಲದು. ಸತ್ಯವನ್ನು ಹೇಳು ; ಇದ್ದದ್ದನ್ನು ಇದ್ದಂತೆ ಹೇಳು. ನನ್ನನ್ನು ನೀನು ಅನ್ಯಳೆಂದು ಭಾವಿಸಬೇಡ. ನಿನ್ನ ಹಿತೈಷಿ, ಸಹೋದರಿಯೆಂದು ತಿಳಿ. ಹೂಂ ! ಹೇಳು." ಎಂದಳು.

"ತಂದೆತಾಯಿಗಳೊಂದಿಗೆ ಸುಖವಾಗಿರುವ ಕಾಲದಲ್ಲಿ ಶಾಲೆಯಲ್ಲಿ ನಾವಿಬ್ಬರೂ ಸಹಪಾಠಿಗಳಾಗಿದ್ದುದು ನಿನಗೆ ಸ್ಮರಣೆಯಿದೆಯೆ, ಮೋಹಿನಿ?"

"ಹಾಂ! ನೀನು ಸ್ವ....?"

"ಹಾಂ! ಹೌದು, ನಾನು ಸ್ವರ್ಣ! ಆದರೆ ನೀನದನ್ನು ಹೊರಗೆಡಹ ಬಾರದೆಂದು ನಿನ್ನ ಪಾದ ಹಿಡಿದು ಬೇಡಿಕೊಳ್ಳುವೆ, ಮೋಹಿನಿ. ನನಗೆ ನೀನು ಇಷ್ಟೊಂದು ಸಹಾಯ ಮಾಡಲಾರೆಯಾ?"

"ಸ್ವರ್ಣ, ನೀನು ನಿಶ್ಚಿಂತೆಯಿಂದಿರು ಇಲ್ಲಿ."

"ನೀನು....ಇಲ್ಲಿ ಯಾರು....ಮೋಹಿನಿ?"

"ನಾನು ನಿನ್ನ ಯಜಮಾನಿ, ಸ್ವರ್ಣ—ನಿನ್ನ ಯಜಮಾನಿ!"

"ಮೋಹಿನಿ, ನೀನೇನು ಹೇಳುತ್ತೀಯೆಂಬುದು ಅರ್ಥವಾಗದಲ್ಲ!"

"ನಾನು ತೇಜಪಾಲನ ಧರ್ಮಪತ್ನಿ!"

"ಹಾಂ!"

"ಹೌದು! ಆಶ್ಚರ್ಯವೇಕೆ? ನಿನ್ನನ್ನೂ....ನೀನೂ....!"

"ಇಲ್ಲ, ಇಲ್ಲ! ಮೋಹಿನಿ, ಎಲ್ಲವನ್ನೂ ಬಿಡಿಸಿ ಹೇಳು; ಇನ್ನು ಸ್ವಲ್ಪೇ ದಿವಸದೊಳಗೆ ತೇಜಪಾಲನಿಗೆ ವಿವಾಹವಾಗಲಿದೆ!"

"ಸ್ವರ್ಣ, ನನಗೆ ಗೊತ್ತು!"

"ತಿಳಿದೂ ಸುಮ್ಮನಿದ್ದೀಯಾ?"

"ಸುಮ್ಮನಿರದೆ ಏನು ಮಾಡಲಿ?"

"ಮೋಹಿನಿ! ನೀನು ನನಗೊಂದು ಉಪಕಾರ ಮಾಡುವೆಯಾ? ನಾನೂ ನಿನಗೆ ಸಹಾಯಕಳಾಗುವೆ. ತೆಪ್ಪಗೆ ಕೂಡುವಂತಹ ಸಮಯವಲ್ಲ!"

"ಖಂಡಿತ....ಸರಿ! ನಾವಿಲ್ಲಿಂದ ಏಳೋಣ; ಮೋಟಾರಿನ ಶಬ್ದ ಕೇಳುತ್ತಿದೆ."

"ಮೋಹಿನಿ, ನನ್ನನ್ನು 'ರಂಗಮ್ಮ' ಎಂದು ಕರೆಯೋದಕ್ಕೆ ಮಾತ್ರ ಮರೆಯಬೇಡ."

"ಹಾಂ! ನೀನು ಒಳಗೆ ನಡೆ."

ತೇಜಪಾಲನು ಬರುವನೆಂದರಿತು ಮೋಹಿನಿ ರಂಗಮ್ಮನನ್ನು ಒಳಗೆ ಕಳುಹಿಸಿದಳು. ದೇವರ ಸಹಾಯ ಆಕೆಯ ಪಾಲಿಗೆ ಇದೆಯೆಂದಾಯಿತು.

ತೇಜಪಾಲನೀಗ ತ್ರಿಶಂಕುಸ್ವರ್ಗದಲ್ಲಿ ವಾಸಿಸುತ್ತಿದ್ದಾನೆ. ಮೋಹಿನಿಯನ್ನು ಹೊರಗೆ ಆಸ್ಪತ್ರೆಗೆ ಕಳಿಸಬೇಕು; ರಂಗಮ್ಮನನ್ನೂ ಆಗಲೇ ಕರಿಸಿಕೊಳ್ಳ ಬೇಕು ಎಂದಾತ ನಿರ್ಧರಿಸಿದ್ದ. ಮೋಹಿನಿಯಿರುವಾಗಲೆ ರಂಗಮ್ಮ ಹೀಗೆ ಇಷ್ಟು ಸುಲಭದಲ್ಲಿ ಬಂದಾಳು ಅಥವಾ ಆಕೆಯನ್ನು ಮಥುರಾನಾಥರು ಕಳಿಸಿ ಕೊಟ್ಟಾರು ಎಂದು ತೇಜಪಾಲ ಅರಿತಿರಲಿಲ್ಲ. ಸಂದರ್ಭ ಹಾಗೆ ಒದಗಿತ್ತಾದ್ದ ರಿಂದ ತೇಜಪಾಲ ನಿರುಪಾಯನಾದ. ಮಥುರಾನಾಥರಾಯರು ತೇಜಪಾಲನಿಗೆ ಪತ್ರ ಬರೆದು, ಆ ಪತ್ರ ಅವನಿಗೆ ತಲಪುವ ಮುನ್ನ ಅದರ ಮರುದಿನವೆ ರಂಗಮ್ಮನನ್ನು ಬಂಡಿಯೇರಿಸಿದ್ದರು. ಆದರೆ ಆ ಪತ್ರ ಬಂದು ತಲಪಿದ ಕೂಡಲೆ 'ಈಗ ಬೇಡಿ, ನನ್ನ ಮುಂದಿನ ಪತ್ರ ನೋಡಿ ಕಳಿಸಿಕೊಡಿ!' ಅಂತ ಒಂದು ತಾರು ಕೊಟ್ಟು, ಬರುವ ರಂಗಮ್ಮನನ್ನು ಅಲ್ಲೇ ನಿಲ್ಲಿಸಬಹುದಿತ್ತು, ತೇಜಪಾಲ. ಆದರೆ ಅದಕ್ಕೆ ಅವನು ನಿರುಪಾಯನಾಗಿದ್ದ. ಮದುವೆಗೆ ಮೂರು ತಿಂಗಳಷ್ಟೇ ಇದ್ದು, ಅಷ್ಟು ಸಮಯಕ್ಕೆ ಹೊಟೇಲಿನ ಊಟ ಉಂಡು ಜೀವಿಸುವುದು ಕಷ್ಟವಾಗಿದೆ ಎಂದು ಬರೆದದ್ದರಿಂದ ಅಡಿಗೆಗೆ ಒಬ್ಬ ಆಳನ್ನು ಕಳಿಸಿದ್ದರು; ಅವನನ್ನು ಬೇಡವೆಂದು ಹಿಂದೆ ಕಳಿಸಿಕೊಟ್ಟು ರಂಗಮ್ಮನನ್ನೇ ಕಳಿಸಿ ಎಂದು ಬರೆದದ್ದಾಯಿತು; ಅದಕ್ಕವರು ಬೇರೆಯಾಗಿ ಏನೂ ಎಣಿಸದೆ ರಂಗಮ್ಮನನ್ನು ಕಳಿಸಿ ಕೊಡುತ್ತಿದ್ದಾರೆ; ಹೀಗಿರುವಾಗ, ಈಗ ಕಳಿಸಬೇಡಿ, ತಡೆಯಿರಿ ಎಂದು ರಂಗಮ್ಮ ಬರುವುದನ್ನೂ, ಅವರು ರಂಗಮ್ಮನನ್ನು ಕಳಿಸಿ ಕೊಡುವುದನ್ನೂ ತಡೆದಲ್ಲಿ, ಅವರು ಮನಸ್ಸಿನಲ್ಲಿ ಏನೆಣಿಸಿಕೊಂಡಾರು? ವಿಪರೀತವಾಗಿ ಏನಾದರೂ ತಿಳಿದುಕೊಂಡರೆ? ಮಥುರಾನಾಥರೆ ರಂಗಮ್ಮ ನನ್ನು ಸಂಗಡ ಕರೆದುಕೊಂಡು ಬಂದು ಬಿಟ್ಟರೆ?....ಎಂದು ಮುಂತಾದ ಸಮಸ್ಯೆಗಳೆದ್ದು ತೇಜಪಾಲನನ್ನು ತಬ್ಬಿಬ್ಬಾಗಿಸಿತ್ತಾದರೂ ತೆಪ್ಪಗಿರಿಸಿತ್ತು. ಮಧ್ಯೆ ಇನ್ನೊಂದು ಸಮಸ್ಯೆ. ಮೋಹಿನಿ ಎಲ್ಲಿ ನಿಜ ಸಂಗತಿಯನ್ನು ರಂಗಮ್ಮನ ಮುಂದೆ ಹೇಳಿಬಿಡುವಳೊ ಎಂಬ ಭಯ. ಅಲ್ಲದೆ, ತನ್ನ ಊಹೆ ಅಥವಾ ತನ್ನ ಹುಳುಕನ್ನೆಲ್ಲ ತಿಳಿದುಬಿಡುತ್ತಾಳೊ ಎಂಬ ಅಂಜಿಕೆ. ಅಂತೂ ಕೈಗೆ ಬಂದ ತುತ್ತು ಬಾಯಿಯ ಸಮೀಪ ಬಂತಾದರೂ ಬಾಯಿ ತೆರೆಯಲಾರದೆ ತತ್ತರಿಸುತ್ತಿದ್ದಾನೆ, ತೇಜಪಾಲ. ಮೋಹಿನಿ ರಂಗಮ್ಮನೊಂದಿಗೆ ಅತಿಯಾಗಿ ಮಾತಾಡಬಾರದು—ಅಂದರೆ ಮಾತ್ರ ತನ್ನ ಗುಟ್ಟು ರಟ್ಟಾಗದೆ ಉಳಿದೀತು.

ಎಂಬೊಂದು ಯೋಚನೆಯೆದ್ದು ತೇಜಪಾಲನ ತಲೆಯನ್ನು ತಿನ್ನಲಾರಂಭಿಸಿತು. ಆದರೆ ಈ ನೇಮವನ್ನು ಮೋಹಿನಿಯು ಮುಂದೆ ಇಡುವುದು ಹೇಗೆ? ಎಂಬ ವಿಚಾರದಲ್ಲಿ ಬಿದ್ದು ಆರಾಮಾಸನದಲ್ಲಿ ಮಲಗಿದ್ದು ವೃತ್ತಪತ್ರಿಕೆಯನ್ನು ಕೈಯಲ್ಲಿ ಹಿಡಿದು ಅದರ ಮೇಲೆ ತನ್ನ ನೋಟವನ್ನು ಮಾತ್ರ ಬೀರಿದ್ದ ತೇಜಪಾಲನಿಗೆ ದಾರಿ ತೋಚದಾಯಿತು. ಸುತ್ತಮುತ್ತಲೂ ತಲೆಯೆತ್ತಿ ನೋಡಿದ; ಮೋಹಿನಿಯಿರಲಿಲ್ಲ. ಮೋಹಿನಿ ತದೇಕಚಿತ್ತಳಾಗಿ ರಂಗಮ್ಮ ನೊಂದಿಗೆ ತನ್ನ ಕತೆಯನ್ನು ಹೇಳುತ್ತಲೂ ಅವಳ ಕತೆಯನ್ನು ಕೇಳುತ್ತಲೂ ಸಂಭಾಷಣೆಯಲ್ಲಿ ನಿರತಳಾಗಿದ್ದಳು—ಅಡಿಗೆಕೋಣೆಯಲ್ಲಿ. ತೇಜಪಾಲನಿಗೆ ಮೋಹಿನಿಯನ್ನೊಮ್ಮೆ ಕರೆಯೋಣವೆಂದಾಗುತ್ತಿದೆ; ಮತ್ತೊಮ್ಮೆ, ಕರೆದರೆ ರಂಗಮ್ಮನೇನಾದರೂ ಭಾವಿಸಿಕೊಂಡರೆ? ಯಾರೋ ಒಬ್ಬಳು ಸ್ತ್ರೀಯೆಂದಿರುವ ಮೋಹಿನಿಯೊಂದಿಗೆ ತಾನು ಹೆಚ್ಚಾಗಿ ಸಂಭಾಷಿಸುವುದನ್ನು ಅವಳು ಕೇಳಿದರೆ? ಕಂಡರೆ?—ಎಷ್ಟೆಂದರೂ ಕಳ್ಳನೆಂದಾದಮೇಲೆ ಅವನೆಷ್ಟು ದೊಡ್ಡವನಾದರೂ ಶಂಕೆಯೆಂಬುದು ಅವನ ಅಳ್ಳೆದೆಯಲ್ಲಿ ಇದ್ದೇ ಇರುತ್ತದೆ. ಆದರೂ ಅವಳು ಕಂಡರೆ ತನಗೇನು? ಅವಳು ಕೆಲಸದವಳು!—ಎಂಬ ಧೈರ್ಯವೂ ಇದೆ. ಯಾರಿಗೆ ತಿಳಿದರೂ ತೇಜಪಾಲನಿಗೇನು ಭಯವೆ? ಆದರೆ ವಿಜಯಳೊಂದಿಗೆ ಆಗಲಿರುವ ತನ್ನ ವಿವಾಹವೆಲ್ಲಿ ಕಡಿದುಹೋಗುವುದೊ ಎಂಬ ಅಂಜಿಕೆ ಹೆಚ್ಚುತ್ತಿದೆ, ಹೃದಯದೊಳಗೆ. ಆದರೆ ರಂಗಮ್ಮನೊಂದಿಗೆ ಮಾತಾಡುತ್ತ ಅದರಲ್ಲೇ ನಿರತಳಾಗಿದ್ದ ಮೋಹಿನಿಯನ್ನು ಕರೆಯುವ ಗೋಜಿಗೆ ಮಾತ್ರ ತೇಜಪಾಲ ಹೋಗಲು ಹಿಮ್ಮೆಟ್ಟಿದ. ಪ್ರಾಯಶಃ ಅದು ಅವನ ಅಂತರಾತ್ಮಕ್ಕೆ ವಿರುದ್ಧವಾಗಿರಬೇಕು.

ತಾನು ಮನೆಯಲ್ಲಿ ಇಲ್ಲದಾಗ, ಮನೆಯ ಹೊರಗಿನ ಕೆಲಸಕ್ಕೆಂದು ನಿಯಮಿಸಿದ್ದ ಹುಡುಗಿಯ ಮನೆಯಲ್ಲೆ ರಂಗಮ್ಮ ರಾತ್ರಿಯನ್ನು ಕಳೆಯ ಬಹುದೆಂದು ರಂಗಮ್ಮನಿಗೆ ಮೋಹಿನಿ ಸಮುದ್ರದಲ್ಲಿ ಮುಳುಗುವವನಿಗೆ ಆಧಾರದ ಹಲಿಗೆ ಕೊಟ್ಟಂತೆ ಒಂದು ಯೋಗ್ಯ ಉಪಾಯ ಹೇಳಿದಳು. ಆ ಹುಡುಗಿಯ ಮನೆ ಅಷ್ಟೇನೂ ದೂರದಲ್ಲಿರದಿದ್ದುದರಿಂದ ರಂಗಮ್ಮನಿಗದು ಯುಕ್ತವೆನಿಸಿದ್ದರೊಂದಿಗೆ ಮನಸ್ಸಿಗೆ ಸಮಾಧಾನವೆತ್ತಿತು. ಇದರಿಂದಲೆ ಮೋಹಿನಿ ತನಗೆ ಸಹಾಯಕಳಾದಾಳೆಂಬ ಧೈರ್ಯ ಬಂತು ರಂಗಮ್ಮನಿಗೆ. ಅಂತೂ

ಅಂದಿನ ರಾತ್ರಿಯ ಊಟವೂ ಆಯಿತು. ಮೋಹಿನಿ ರಂಗಮ್ಮನ ವಿಶ್ರಾಮಕ್ಕೆ ತಕ್ಕ ಸ್ಥಳ ಮಾಡಿದ್ದು ಹಾಸಿಗೆ ಕೊಟ್ಟು ತಾನು ತನ್ನ ಸ್ಥಾನವನ್ನು ಸೇರಿ ಮಲಗಿದಳು.

" ಅವಳೊಂದಿಗೆ ಬಹಳ ಮಾತಾಡ್ತಿದ್ದೆ ಅಷ್ಟು ಹೊತ್ತು—ಏನದು ? "

" ಅರಿಯದವಳು ಅಡಿಗೆಮನೆಗೆ ಹೋಕ್ಕಾಗ ನಾವು ಜಾಗ್ರತೆಯಿಂದಿರೋದು ಕರ್ತವ್ಯವಲ್ಲವೆ ? "

" ಅದೇನೊ ಸರಿ. ಆದರೆ ಅವಳ ಮೇಲೆ ನೀನು ಹಾಗೇನೂ ಅಪನಂಬಿಕೆ ಮಾಡೋದು ಬೇಡ. ಅವಳೇನು ಹಾಗೆ ಹೊಸಬಳೇನಲ್ಲ. ಅಥವಾ ಅವಳನ್ನು ಕಳ್ಳಿ ಅಂತ ತಿಳಿಯೋದೂ ಬೇಡ."

" ನಿಮಗೆ ನಂಬಿಕೆ ಇರಬಹುದು ! ಆದರೆ ನನಗೆ ನಂಬಿಕೆಯಾಗೋದು ಬೇಡವೆ ? ಅಲ್ಲಿಯವರೆಗೆ ನಾನು ಹಾಗೇ ಇದ್ದು ನೋಡಿಕೊಳ್ಳುವೆ ! "

" ನೀನು ಬಹಳ ದಕ್ಷಳಿದ್ದೀ ! "

" ನೀವೇನು ಬೇಕಾದರೂ ಅಂದುಕೊಳ್ಳಿ, ನನಗೇನು ? ನಾನು ಮಾತ್ರ ಕರ್ತವ್ಯವನ್ನು ಮಾಡದಿರಲಾರೆ ! "

ಅದೇ ರಾತ್ರಿ ಮೋಹಿನಿಗೆ ಪ್ರಸವವೇದನೆ. ತೇಜಪಾಲ ತನ್ನಿಬ್ಬರು ಪೇದೆಗಳಿಗೆ—ಈ ವಾರ ಒಬ್ಬನಾದರೆ ಇನ್ನೊಂದು ವಾರ ಎರಡನೆಯವನು—ಈ ರೀತಿಯಲ್ಲಿ ತನ್ನ ಮನೆಗಾವಲಿಗೆ ರಾತ್ರಿ ಬಂದು ಮಲಗಿಕೊಳ್ಳುವಂತೆ ನೇಮ ಹಾಕಿದ್ದನು. ಅಂತೇ ಅವನನ್ನು ಎಬ್ಬಿಸಿ ಸೂಲಗಿತ್ತಿಯನ್ನು ಕರೆತರುವಂತೆ ಅವನಿಗೆ ಆಜ್ಞಾಪಿಸಿದನು. ಮೋಹಿನಿ, ತೇಜಪಾಲನು ತನ್ನನ್ನು ಆಸ್ಪತ್ರೆಗೇ ಒಯ್ಯುವನೆಂದು ಭಾವಿಸಿದ್ದಳು. ತೇಜಪಾಲನಾದರೂ ಹಾಗೇ ನಿರ್ಧರಿಸಿದ್ದನು. ಆದರೆ ಮೋಹಿನಿಯ ಭಾಗ್ಯವೆಂಬಂತೆ ನೋವು ಆ ರಾತ್ರಿಯೇ ಪ್ರಾರಂಭವಾಯಿತು. ದೈವಾನುಕೂಲತೆಯಿಂದ ಮೋಹಿನಿಯ ಸಮಯಕ್ಕೆ ಸರಿಯಾಗಿ ರಂಗಮ್ಮನೂ ಬಂದು ಸೇರಿದ್ದಳು. ಆಸ್ಪತ್ರೆಯೆಂದರೆ ಹೆದರುತ್ತಿದ್ದ ಮೋಹಿನಿಗೆ ಅದೆಷ್ಟು ಆನಂದವಾಗಿರಬೇಡ ? ಪ್ರಪಂಚದಲ್ಲಿ ಸ್ತ್ರೀಯರನುಭವಿಸುವ ಕಷ್ಟಗಳಲ್ಲಿ ಅಂದರೆ ವೇದನೆಗಳಲ್ಲಿ ಮೊದಲನೆಯದಾದ ಅತೀವ ಕಠಿಣವೂ ಘೋರವೂ ಆದ ವೇದನೆಯೆಂದರೆ ಪ್ರಸವವೇದನೆಯೆ. ಆ ಸಮಯದಲ್ಲಿ ಅವರ ಬಾಯಿಂದ ಹೊರಡುವ ಮಾತು, ಶಬ್ದಗಳು ಯಾವು

ದೆಂದು ಅವರಿಗೆ ತಿಳಿಯದು. ಅಂತೇ ಆ ವೇಳೆಯಲ್ಲಿ ಮೋಹಿನಿ 'ಸ್ವರ್ಣ' ಎಂಬ ಶಬ್ದದಿಂದ ರಂಗಮ್ಮನನ್ನು ಹಲವೊಂದು ಸಲ ಸಂಬೋಧಿಸಿದ್ದಳು. ಆದರೆ ಅದು ತೇಜಪಾಲನ ಕಿವಿಗಳನ್ನು ತಲಪದಿದ್ದುದು ರಂಗಮ್ಮನ ಭಾಗ್ಯ!

ಮೋಹಿನಿ ಗಂಡು ಕೂಸು ಹೆತ್ತಳು. ತೇಜಪಾಲನಿಗೆ ಆನಂದ. ಮುಖ ತೇಜಪಾಲನಂತಿದ್ದು ಕಣ್ಣುಗಳು ಮೋಹಿನಿಯಂತಿವೆಯೆಂದು ರಂಗಮ್ಮ ಮೋಹಿನಿಗೆ ಹೇಳಿದಳು. ತೇಜಪಾಲ ಸಂತೋಷದಿಂದ ಅಕ್ಕಪಕ್ಕದವರೆಲ್ಲರಿಗೂ ಹೂ ಸಕ್ಕರೆ ಬಾಳೆಹಣ್ಣು ಮುಂತಾದವುಗಳನ್ನು ಹಂಚಿದನು.

ಪುಣ್ಯಾರ್ಚನೆಯ ದಿನವದು. ಅಂದೇ ಮಗುವಿನ ನಾಮಕರಣ ಮುಂತಾದವುಗಳು ನಡೆಯತಕ್ಕುದು. ಮಗುವಿಗೆ ಹೆಸರೇನು ಇಡಬಹುದೆಂಬುದರಲ್ಲಿ ಮೋಹಿನಿಗೂ ರಂಗಮ್ಮನಿಗೂ ತರ್ಕವಿತರ್ಕಗಳಾಗಿ, ಅಂತ್ಯದಲ್ಲಿ ಮೋಹಿನಿಯ ಹಟವೇ ಸಾಧಿಸಿತು. ಕೂಸಿಗೆ ರಂಗನಾಥನೆಂದು ಹೆಸರಿಟ್ಟರು.

* * * *

ಅಂದು ಬೆಳಕು ಸಂಪೂರ್ಣ ಹರಿದಿರಲಿಲ್ಲ. ಜವಾನನು ಬಂದು ಮಥುರಾನಾಥರಿಗೆ, "ರಮಾನಂದ ಸ್ವಾಮಿಗಳವರು ತಮ್ಮ ದರ್ಶನವನ್ನು ಅಪೇಕ್ಷಿಸುತ್ತಾರೆ. ಜಾಗ್ರತೆ ಬರಬೇಕಾಗಿ ವಿನಂತಿ" ಎಂದು ತಿಳಿಸಿ ಅವಸರದಿಂದ ತೆರಳಿದನು. ಮಥುರಾನಾಥರಾಯರು ಬೇಗನೆ ಸ್ನಾನ ತೀರಿಸಿಕೊಂಡು ಆಶ್ರಮವನ್ನು ತಲಪಿದರು. ರಮಾನಂದರ ಮುಖವು ದುಃಖದ ಚಿಹ್ನೆಯಿಂದ ಕೂಡಿದ್ದುದರಿಂದ ಕಾರಣ ತಿಳಿಯಲು ಮಥುರಾನಾಥರು ಪ್ರಶ್ನಾರ್ಥಕ ದೃಷ್ಟಿಯಿಂದ ನೋಡುತ್ತ ಅವರಿಗೆದುರಾಗಿ ಕುಳಿತರು. ಅಳಿಯನ ಕೈಗೆ ರಮಾನಂದರು ಒಂದು ಪತ್ರವನ್ನು ತೆಗೆದಿತ್ತರು. ಓದಿ ನೋಡಿ ಮಥುರಾನಾಥರಿಗೆ ಆಶ್ಚರ್ಯವಾಯಿತು. ಏನು ಉಪಾಯ ಎಂದು ರಮಾನಂದ ಮಥುರಾನಾಥರಿಬ್ಬರೂ ಯೋಚಿಸಲಾರಂಭಿಸಿದರು. ಯಾವ ದಾರಿಯೂ ಕಾಣದಾಯಿತವರಿಗೆ. ಅನಂತ ವಿಜಯರೀಗ ಒಂದೇ ಕಡೆಯಲ್ಲಿರುವರು! ಏನಾಯಿತೊ? ಏನೇನು ಯೋಚಿಸಿದರೂ ಬಗೆಹರಿಯದಾಯಿತು ವಿಷಯ.

ವಿಜಯೆ ಅಂದು ತನಗೆ ಅನಂತನಿಂದ ಬಂದಿದ್ದ ಪತ್ರವನ್ನು ಮರೆತು ಪುಸ್ತಕದೆಡೆಯಲ್ಲಿಟ್ಟು ಹೋಗಿದ್ದಳು. ಅದೇ ಈಗ ರಮಾನಂದರ ಕೈಗೆ ದೊರಕಿದ್ದು

" ಈಗೇನು ಮಾಡೋದು ? "

" ಮಾಡೋದೇನಿದೆ ? ತೇಜಪಾಲನ ಒಪ್ಪಿಗೆ ಪಡೆದು ಅನಂತ–ವಿಜಯರನ್ನು ಒಟ್ಟುಗೂಡಿಸೋದು. ಇನ್ನಾವ ಉಪಾಯವೂ ನನಗೆ ತೋಚದು........ ನಮಗಿದು ತಿಳಿದದ್ದು ಎಷ್ಟೋ ಉತ್ತಮವಾಯಿತು !........ ದೇವರ ಆಟ !.... ಇಲ್ಲವಾದರೆ ಅವಳು ಈ ಪತ್ರವನ್ನು ಮರೆತು ಹೋಗಿರಲಾರಳು !........ ಏನೆಲ್ಲ ಆಗಬೇಕೆಂತಿದೆಯೋ ಆಗಲಿ ! "

" ಆದರೆ ಎಂಬ ಮಾತೇಕೆ ಈಗ ? ಆಗ ನೋಡೋಣ. ಮೊದಲು ತೇಜಪಾಲನನ್ನು ಹೋಗಿ ಕಾಣೋದು ಹಿತವಾಗಿದೆ."

" ಹಾಗಾದರೆ ಈಗ ಮದನಪಲ್ಲಿಗೆ ಹೋಗಬೇಕಂತೀರಾ ? ಮಂಗಳೂರಿಗೆ ಹೋಗಿ ಸುಬ್ಬರಾಯರನ್ನೂ ಮಾಧವರಾಯರನ್ನೂ ವಿಚಾರಿಸಿಕೊಂಡು, ಅನಂತ–ವಿಜಯರನ್ನೂ ನೋಡಿ, ತೇಜಪಾಲನಲ್ಲಿಗೆ ಪ್ರಯಾಣ ಬೆಳೆಸೋದು ಹಿತವಾಗಿದೆಯಲ್ಲವೆ ? "

" ಹೂ ! ಅದೂ ಆಗಬಬಹುದು. ಆದರೆ ಅವರೆಲ್ಲಾ ಒಪ್ಪಿ ಕಡೆಗೆ ಇವನು ಒಪ್ಪಲಿಲ್ಲಾಂತಾದರೆ........? "

" ಹೌದು ! ಒಪ್ಪದಿದ್ದರೆ !...."

" ಒಪ್ಪದಿದ್ದರೆ ನಾನು ಒಪ್ಪಿಸುತ್ತೇನೆ ! " ಎಂದು ರಮಾನಂದರು ಧೈರ್ಯವಿತ್ತು " ನೀನು ಮೊದಲು ಮಂಗಳೂರಿಗೆ ಹೋಗು "ಎಂದು ಆಜ್ಞಾಪಿಸಿದರು.

ಮಥುರಾನಾಥರಾಯರು ಮನೆಯನ್ನು ತಲಪಿದರು. ವಿಷಯವನ್ನು ತಿಳಿಸಿ, ತಾವೂ ರಮಾನಂದರೂ ನಿಶ್ಚಯಿಸಿದ್ದನ್ನು ವ್ಯಕ್ತಪಡಿಸಿದರು. ಇದೆಲ್ಲವನ್ನೂ ಕೇಳುತ್ತ ಕುಳಿತಿದ್ದ ಪದ್ಮಮ್ಮನಿಗೆ ಏನೂ ತಿಳಿಯದಾಯಿತು. ಮಥುರಾನಾಥರು ಜೀವವಿಲ್ಲದವರಂತೆ ಹೆಂಡತಿಯನ್ನು ನೋಡುತ್ತಿದ್ದರು. ಇಬ್ಬರ ಹೃದಯದಲ್ಲೂ ಹುದುಗಿದ್ದ ಚಿಂತೆ ಒಂದೇ. ತೇಜಪಾಲನು ಒಪ್ಪದಿದ್ದರೆ ? ತಮ್ಮ ಒಬ್ಬನೇ ಮಗನನ್ನು ಬಲಿಗೊಟ್ಟಂತೆಯೆ ಸರಿ ! ಅವನನ್ನು ಬಲಿಗೊಡುವುದೆಂದರೆ ತಂದೆತಾಯಿಗಳು ಬದುಕಿದ್ದರೂ ಸತ್ತಂತೆಯೆ. ಆದರೂ ಒಂದು ಸಮಾಧಾನ. ಇಷ್ಟರವರೆಗೆ ತಮ್ಮ ಕೈಯಲ್ಲೇ ಬೆಳೆದು ದೊಡ್ಡವನಾಗಿ, ತಮ್ಮಿಂದಲೇ ಸಮಾಜದೆದುರಲ್ಲಿ ಇಂದು ವಿದ್ಯಾವಂತನೂ ಉದ್ಯೋಗಸ್ಥನೂ ಆಗಿ ಮೆರೆಯುತ್ತಿರುವ ತೇಜಪಾಲ ತಮ್ಮ ಮಗನ ಹೃದಯವನ್ನು ಒಡೆದಾನೆ ?

ಪದ್ಮಮ್ಮ ಹಟತೊಟ್ಟು ಪತಿಯೊಂದಿಗೆ ಹೊರಟು ನಿಂತರು. ಮಥುರಾ ನಾಥರಿಗೆ ಪತ್ನಿಯ ಇಚ್ಛೆಯನ್ನು ಅಲ್ಲಗಳೆಯುವುದಾಗಲಿಲ್ಲ. ಮನೆಯ ಮುಂದೆ ವಿವಾಹಕ್ಕಾಗಬೇಕಾದ ಚಪ್ಪರ ಮಂಟಪಾದಿಗಳ ಕೆಲಸ ತೊಡಗಿದ್ದರಿಂದ ಮಥುರಾನಾಥರ ಹೊಲಗದ್ದೆಗಳಲ್ಲಿ ಕೆಲಸ ಮಾಡುತ್ತಿದ್ದ ಆಳುಮಕ್ಕಳನೇಕರು ಅಲ್ಲೇ ಇದ್ದರು. ಜಗಲಿಯ ಸಾಮಾನುಗಳೆಲ್ಲವನ್ನೂ ಎತ್ತಿ ಒಳಗೆ ಸೇರಿಸಿ, ದೊಡ್ಡ ದೊಡ್ಡ ಬೀಗಗಳಿಂದ ಮನೆಯನ್ನು ಭದ್ರಪಡಿಸಿ, ಆಳುಮಕ್ಕಳನ್ನು ಮನೆಯ ಕಾವಲಿಗಿಟ್ಟು ರಮಾನಂದರಿಗೆ ತಿಳಿಸಿ ಹೆಂಡತಿಯೊಂದಿಗೆ ಮಂಗಳೂರಿಗೆ ಹೊರಟರು.

ಮನುಷ್ಯನು ನೆನೆದಂತೆ ಲೋಕದಲ್ಲಿ ಆಗುವುದೇನಿದೆ ? ಮಂಗಳೂರಿಗೆಂದು ಹೊರಟಿದ್ದ ಮಥುರಾನಾಥರು, ಏನು ತೋರಿತೊ ಏನೊ ಹೆಂಡತಿಯೊಂದಿಗೆ ಮದನಪಲ್ಲಿಗೆ ತೆರಳಿದರು.

ಮಥುರಾನಾಥರು ಮದನಪಲ್ಲಿಗೆ ಹೊರಟದ್ದು ಅದೇ ಮೊದಲನೆಯ ಸಲ. ದಾರಿ ಕೇಳಿಕೊಂಡು ತೇಜಪಾಲನ ಮನೆಯನ್ನು ತಲಪಿದರು. ದೂರ ದಿಂದಲೆ ಮನೆ ಬಹಳ ಸುಂದರವಾಗಿರುವುದನ್ನು ನೋಡಿ ಹಿಗ್ಗಿದರು. ಗಂಡ ಹೆಂಡಿರು ಮನೆಯನ್ನು ಸಮೀಪಿಸುತ್ತಿದ್ದಂತೆ ಜೋಗುಳವು ಕೇಳಿಬರುತ್ತಿದೆ ! ಇದು ಹೇಗೆ ತೇಜಪಾಲನ ಮನೆಯಾದೀತು ಎಂಬ ಶಂಕೆ ಇಬ್ಬರಿಗೂ.

ಹೆತ್ತು ತಾಯಾಗಿದ್ದ ಮೋಹಿನಿಯ ಮೋಹನ ರೂಪ ಇನ್ನಷ್ಟು ಹೆಚ್ಚಿದೆ. ವಿಕಸಿತ ಪುಷ್ಪದಂತೆ ಕಾಣುತ್ತಿದ್ದಾಳೆ. ಗುಲಾಬಿ ಬಣ್ಣದ ತೆಳ್ಳಗಿನ ಪತ್ತಲ ವನ್ನುಟ್ಟಿದ್ದಳು. ಅರಸಿನ ವರ್ಣದ ಕುಪ್ಪಸವನ್ನು ತೊಟ್ಟಿದ್ದಳು. ಕುಂಕುಮದ ತಿಲಕವೂ ಕಣ್ಣಿಗೆ ಹಚ್ಚಿದ್ದ ಕಾಡಿಗೆಯೂ ಅವಳ ಮುಖಸೌಂದರ್ಯವನ್ನು ಹೆಚ್ಚಿಸಿ ಅವಳು ಬಾಣಂತಿಯೆಂಬುದನ್ನು ಹೇಳುತ್ತಿದ್ದಿತು. ಕಿವಿಯಲ್ಲಿನ ಎರಡು ವಜ್ರದೋಲೆ, ಅದರಲ್ಲಿ ಜೋಲುತ್ತಿದ್ದ ನವಮಾದರಿಯ ಲೋಲಾಕು ಮತ್ತು ಕೊರಳಲ್ಲಿ ಶೋಭಿಸುತ್ತಿದ್ದ ಒಂದೇ ಒಂದು ಸಪೂರವಾದ ಚಿನ್ನದ ಸರದ ಹೊರತು ಬೇರೆ ಯಾವ ಆಭರಣಗಳೂ ಅವಳ ಮೈಮೇಲೆ ಕಂಡುಬರುತ್ತಿರಲಿಲ್ಲ. ಮೋಹಿನಿಯಾಗ ಮೃದುದೇಹವನ್ನಲುಗಿಸದೆ ಮೆಲ್ಲಗೆ ಚೆಂದುಟಿಯನ್ನು ನಾಲಿಗೆ ಯಿಂದ ಸವರುತ್ತ, ಬಾಯಲ್ಲಿದ್ದ ವೀಳ್ಯೆಯನ್ನುಗುಳಲು ಹೊರಬರಲು, " ತೇಜ ಪಾಲರಾಯರ ಮನೆ ಯಾವುದಮ್ಮಾ ? " ಎಂದರು ಮಥುರಾನಾಥರು. ಉತ್ತರ

ಕೊಡಲರಿಯದೆ ತಬ್ಬಿಬ್ಬಾದಳಾದರೂ ಮೋಹಿನಿ, " ಇದೇ ! " ಎಂದು ಒಳ ಹೊಕ್ಕು ರಂಗಮ್ಮನನ್ನು ಹೊರಗಟ್ಟಿದಳು. ಜೋಗುಳ ಹಾಡುತ್ತಿದ್ದ ರಂಗಮ್ಮ ಹೊರಬಂದು ನೋಡುತ್ತಾಳೆ—ನಿಂತಲ್ಲೇ ಕುಸಿದು ಬೀಳುವಂತಾದಳು ! ಅವಳ ಕಂಗಳಲ್ಲಿ ನೀರು ತುಂಬಿ ನಿಂತಿದ್ದಿತು. ಏನು ಹೇಳುವುದಕ್ಕೂ ಬಾಯಿ ಬಾರ ದಾಯಿತು. ನಾಲಿಗೆ ಒಳಗೆ ಎಳೆದಂತಾಗುತ್ತಿತ್ತು. ಕಾರಣವರಿಯದ ಪದ್ಮಮ್ಮ, " ಏಕೆ? ಏನು ರಂಗಮ್ಮ ? " ಎಂದರು. ರಂಗಮ್ಮ ಮಾತಾಡಲೊಲ್ಲಳು. ಮೋಹಿನಿ ತಾನು ಹೊರಬಂದು ಎಲ್ಲವನ್ನೂ ತಿಳಿಸುವೆನೆಂದರೆ ರಂಗಮ್ಮನಿಗೆ ಅದೆಲ್ಲಿ ಅಹಿತವಾಗಿ ಪರಿಣಮಿಸುವುದೊ ಎಂಬೊಂದು ಮನಃಕ್ಲೇಶ ಅವಳಿಗೆ. ರಂಗಮ್ಮನಿಗೆ ಸಹಿಸುವುದಾಗಲಿಲ್ಲ. " ನಾನು ರಂಗಮ್ಮನಲ್ಲ, ಸ್ವರ್ಣ ! " ತಡೆಯಲಾರದೆ ಅಂದುಬಿಟ್ಟಳು. ಆಗಲೆ " ಹಾಂ ! " ಎಂಬ ಅಚ್ಚರಿ ತುಂಬಿದ ಶಬ್ದವು ಮಥುರಾನಾಥ–ಪದ್ಮಮ್ಮರ ಕಂಠದಿಂದ ಒಮ್ಮೆಗೇ ಹೊರಟಿತು. ಮೋಹಿನಿಗೆ ಧೈರ್ಯ ಬಂತು. ರಂಗಮ್ಮನಿದ್ದೆಡೆ ಬಂದು ನಿಂತಳು.

" ಇವರು ಯಾರು ? " ಎಂದರು ಮಥುರಾನಾಥರು ರಂಗಮ್ಮನಿಗೆ.

" ತಮ್ಮ ಸಹೋದರಿ ! " ಎಂದು ಮಥುರಾನಾಥರಿಗೆ ಹೇಳಿ, ಪದ್ಮಮ್ಮ ನನ್ನು ನೋಡಿ, " ತಮ್ಮ ನಾದಿನಿ ! " ಎಂದಳು ರಂಗಮ್ಮ.

ಮಥುರಾನಾಥರಿಗೂ ಪದ್ಮಮ್ಮನಿಗೂ ಮೊದಲೇ ಆಶ್ಚರ್ಯವಾಗಿದ್ದು, ಇದನ್ನು ಕೇಳಲು ತಲೆಗೆ ಸಿಡಿಲು ಬಡಿದಂತಾಯಿತು. ತಮ್ಮ ಮುಂದೆ ಯಾವುದೋ ಒಂದು ನಾಟಕ ನಡೆಯುತ್ತಿರುವಂತೆ ತೋರಿತವರಿಗೆ.

ಮೋಹಿನಿ ಅತಿಥಿಗಳನ್ನು ಕುಳ್ಳಿರುವಂತೆ ಹೇಳಿದಳು. ಮೋಟಾರಿನ ಸಪ್ಪಳ ಕೇಳಿ ರಂಗಮ್ಮನೂ ಮೋಹಿನಿಯೂ ಒಳಗೆ ಸರಿದರು. ತೇಜಪಾಲನಿಗೆ ರಂಗನಾಥನ ಜ್ಞಾಪಕವಾಗಲು ಆನಂದದಿಂದ ವೇಗವಾಗಿ ಮೆಟ್ಟಲು ಹತ್ತಿದನು. ಸೋಫಾದಲ್ಲಿ ಮಥುರಾನಾಥರು ಕುಳಿತಿದ್ದಾರೆ; ಪದ್ಮಮ್ಮ ನಿಂತಿದ್ದಾರೆ. ತೇಜಪಾಲನಿಗೆ ಏನು ಹೇಳಲೂ ತಿಳಿಯದಾಯಿತು. ಅವರಿಬ್ಬರೂ ಕುಜರಾಹು ಬಂದು ಮೂರ್ತಿಮತ್ತಾಗಿ ನಿಂತಂತೆ ಕಂಡಿರಬೇಕು ! ತೇಜಪಾಲ ನಿಂತಲ್ಲೇ ಮುಖ ಕೆಳಗೆ ಹಾಕಿ ನಾಚಿ ಮುದುಡಿದ ಮುಖದಿಂದ ನಿಂತನು. ಮಥುರಾ ನಾಥರು ತೇಜಪಾಲನನ್ನು ನೋಡಿ ಮೋಹಿನಿಯೆಡೆ ಬೆರಳು ಮಾಡಿ ತೋರಿ, " ತೇಜೂ, ಇದ್ಯಾರು ? " ಎಂದು ಪ್ರಶ್ನಿಸಿದರು. ಉತ್ತರವೇ ಇಲ್ಲ. ಗೋಡೆ

ಗೊರಗಿ ನಿಂತಿದ್ದ ಮೋಹಿನಿಗೆ ಇದನ್ನು ಸಹಿಸುವುದಾಗಲಿಲ್ಲ. ತೇಜಪಾಲನಿದ್ದೆಡೆಗೆ ಬಂದಳು. ಹೆತ್ತ ಮೃದು ದೇಹವದು ಅತಿಯಾಗಿ ಅಲುಗಬಾರದಾಗಿದ್ದರೂ ಮೋಹಿನಿ ಲಕ್ಷ್ಯ ಮಾಡದೆ ತೇಜಪಾಲನ ತೋಳು ಹಿಡಿದು ಕುಲುಕಿ ಕೇಳಿದಳು. "ಹೇಳಿ. ಹೇಳುವುದಿಲ್ಲವೆ? ಪರವಾಯಿಲ್ಲ; ಇನ್ನು ಬದುಕುವುದಾದರೂ ಸಾಯುವುದಾದರೂ ನಿಮ್ಮ ಕೈಯಲ್ಲಿಯೆ ಆಗಬೇಕು. ಇನ್ನು ನನಗೆ ಜೀವದಾಸೆಯಿಲ್ಲ. ಮಗುವೊಂದಿದೆ....ಅದರ ಹಣೆಯಲ್ಲಿ ನನ್ನ ಕೈಯ ಪೋಷಣೆ ಪಡೆಯುವ ಯೋಗವಿಲ್ಲವೇನೊ...."ಎಂದವಳೆ ಒಳಹೊಕ್ಕು ಕುಪ್ಪಿಯೊಂದರಲ್ಲಿದ್ದ ವಿಷವನ್ನು ತೆಗೆದು ಕುಡಿದುಬಿಟ್ಟಳು. "ಮೋಹಿನಿ!" ಎಂದು ರಂಗಮ್ಮ ನೋಡಿ ಅವಳೆಡೆ ಓಡುವಷ್ಟರಲ್ಲಿ ಮೋಹಿನಿ ನೆಲದ ಮೇಲೆ ಬಿದ್ದುಬಿಟ್ಟಳು. ಉಳಿದವರೂ ಅಲ್ಲಿಗೆ ಧಾವಿಸಿದರು. ತೇಜಪಾಲನು ಡ್ರೈವರನಿಗೆ ಡಾಕ್ಟರರನ್ನು ಕರೆತರಲು ಅಪ್ಪಣೆಯಿತ್ತನು.

ಡಾಕ್ಟರರು ಬಂದುದಾಯಿತು. ವಿಷವನ್ನು ಕಾರಿಸಿದುದಾಯಿತು. ಮೋಹಿನಿ ದೈವಾನುಕೂಲತೆಯಿಂದಲೂ ರಂಗಮ್ಮನ ಉಪಚಾರದಿಂದಲೂ ಚೇತರಿಸಿಕೊಂಡಳು. ತೇಜಪಾಲ ಎಲ್ಲರ ಮುಂದೆಯೂ ಮೋಹಿನಿ ತನ್ನ ಹೆಂಡತಿ ಎಂಬುದನ್ನು ಒಪ್ಪಿಕೊಂಡ. ಮಥುರಾನಾಥರು ತಾವು ಬಂದ ಕಾರಣವನ್ನು ಬಿಡಿಸಿ ಹೇಳಿದರು. ತೇಜಪಾಲನಿಗೆ ರಂಗಮ್ಮನೆ 'ಸ್ವರ್ಣ' ಎಂದು ತಿಳಿದು ಬರಲು ಮುಖಕ್ಕೆ ಮಸಿ ತೊಡದಂತಾಯಿತು! ಎಲ್ಲರೂ ಈಗ ಅಲ್ಲಿಂದ ಹೊರಟು ಹೋಗುವುದೆಂದರೆ ಆಗದ ಕೆಲಸ. ತೇಜಪಾಲ ರಜೆ ಪಡೆಯಬೇಕು. ಮೋಹಿನಿ ಹೊರಡುವ ಸ್ಥಿತಿಯಲ್ಲಿರಲಿಲ್ಲ. ಸ್ವರ್ಣಳನ್ನೀಗ ಮಂಗಳೂರಿಗೆ ಕರೆದೊಯ್ಯದೆ ಬೇರೆ ಗತ್ಯಂತರವಿಲ್ಲ. ಸುಬ್ಬರಾಯರಿಗೆ ಸೊಸೆಯನ್ನು ಕಂಡಾಗ ಎಷ್ಟು ಆನಂದವಾಗಲಿಕ್ಕಿಲ್ಲ. ಮಾಧವರಾಯರೂ ಕಾವೇರಮ್ಮನೂ ಮಗಳನ್ನು ಕಾಣುವಾಗಲಂತೂ ಸಂತೋಷವನ್ನು ಹೇಳಲಾಸಲ್ಲ. ರಂಗಮ್ಮನೆ ತನ್ನ ತಾಯಿ ಸ್ವರ್ಣಳೆಂದಾಗಿ ತಿಳಿದುಬಂದರೆ ವಿಜಯಳಿಗವೆಷ್ಟು ವಿಸ್ಮಯಾನಂದವಾಗಲಿಕ್ಕಿಲ್ಲ! ಇದೆಲ್ಲವನ್ನೂ ಮನವಾರೆ ನೆನೆದು ಮೋಹಿನಿಯ ಪಕ್ಕದಲ್ಲಿ ಕುಳಿತಿದ್ದ ಸ್ವರ್ಣ ಕಣ್ಣುಗಳಲ್ಲಿ ಆನಂದಬಾಷ್ಪಗಳನ್ನು ತಂದುಕೊಂಡಳು. ದೂರದಲ್ಲಿದ್ದ ಮಥುರಾನಾಥರು ಕಡೆಗಣ್ಣ ನೋಟದಿಂದ ಸ್ವರ್ಣಳನ್ನು ನೋಡದಿರಲಿಲ್ಲ. ಮೋಹಿನಿಯ ಸಂರಕ್ಷಣೆಗೆ ಪದ್ಮಮ್ಮನನ್ನು ಅಲ್ಲೇ ಇರಿಸಿ ಸ್ವರ್ಣಳನ್ನು ಕರೆದು

ಕೊಂಡು ಹೋಗುವುದು ಉಚಿತವೆಂದು ಮಥುರಾನಾಥರು ನಿರ್ಧರಿಸಿ ಪದ್ಮಮ್ಮನಿಗೆ ತಿಳಿಸಿದರು. ಅನಂತನನ್ನು ನೋಡಬೇಕೆಂದು ಹೊರಟುಬಂದಿದ್ದ ಪದ್ಮಮ್ಮನ ಮನಸ್ಸು ಒಪ್ಪದಿದ್ದರೂ ಮಥುರಾನಾಥರು ಮಂಗಳೂರಿಗೆ ಹೋಗಿ ಎಲ್ಲ ವಿಷಯ ಗಳನ್ನೂ ಅವರಿಗೆ ತಿಳಿಸಿ ವಿಶದೀಕರಿಸಿ ಮಾಡಬೇಕಾದ ಕಾರ್ಯಗಳನ್ನು ಅವರೊಂದಿಗೆ ಕಲೆತು ಮಾತಾಡಿ ನಿರ್ಧರಿಸಿಕೊಂಡು, ಎಲ್ಲರನ್ನೂ ಕೂಡಿಕೊಂಡು ಅದಾಗದ ಪಕ್ಷದಲ್ಲಿ ಸ್ವರ್ಣಳೊಂದಿಗೆ ವಿಜಯಳನ್ನು ಕರೆದುಕೊಂಡು ಮದನ ಪಲ್ಲಿಗೆ ಬರುವೆವೆಂದು ತಿಳಿಸಿದರು. ಮೋಹಿನಿಯೊಂದಿಗೆ ಎಲ್ಲರೂ ಒಟ್ಟಾಗಿ ಬ್ರಹ್ಮಾವರಕ್ಕೆ ಹೋಗುವ ಯೋಚನೆಯನ್ನೂ ತಿಳಿಸಿ ಒಪ್ಪಿಗೆ ಪಡೆದರು. ಸ್ವರ್ಣಳ ಪ್ರಾಣಸಂಕಟ ಹಗುರವಾಯಿತು. ಅಂದೊಮ್ಮೆ ತೇಜಪಾಲನು ಸ್ವರ್ಣಳನ್ನು —ರಂಗಮ್ಮನಾಗಿದ್ದಾಗ—'ತಂಗೀ ಕುಳಿತುಕೊ!' ಎಂದು ವಿಷ ಹೃದಯ ದಿಂದ ಕೂಡಿದವನಾಗಿ ಸಂಬೋಧಿಸಿದ್ದನು. ಆದರೆ ಅದೇ ರಂಗಮ್ಮನು ಇಂದು ಸ್ವರ್ಣಳೆಂದು ಗೊತ್ತಾಗಲು—ವಿಜಯಳ ತಾಯಿಯೆಂದಾಗಲು—ಹಿಂದೆ ನಡೆದುದನ್ನೂ ತಾನೆಣಿಸಿದುದನ್ನೂ ಮರೆತು ಸ್ವರ್ಣಳ ವಿಷಯ್ಯದಲ್ಲಿ ಪವಿತ್ರಭಾವ ವನ್ನು ತಾಳಿದ ತೇಜಪಾಲ ಸ್ವರ್ಣಳನ್ನು ನಿಷ್ಕಳಂಕ ಹೃದಯದಿಂದ ಸರಳನಾಗಿ 'ತಂಗೀ!' ಎಂದು ಸಂಬೋಧಿಸುತ್ತಿರುವನು! ಸ್ವರ್ಣಳೂ ಈಗ ತೇಜಪಾಲನನ್ನು ನಿರ್ಭೀಯಿಂದ 'ಅಣ್ಣಾ' ಎಂದು ಕರೆಯುವಳು. ಅವನ ಮುಂದೆ ಸುಳಿದಾಡುವಳು. ಸಹೋದರ ಭಾವದಿಂದ ತೇಜಪಾಲನಿಗಾಗಿ ಜೀವ ತೆರಲೂ ಸಿದ್ಧಳಿರುವಳು, ಸ್ವರ್ಣ! ಉತ್ತಮನು ಯಾವಾಗಲೂ ಉತ್ತಮನೇ. ಅದರಲ್ಲಿ ಆಶ್ಚರ್ಯವಿಲ್ಲ. ಆದರೆ ಅಧಮನು ಉತ್ತಮನಾದರೆ ಅದೆಷ್ಟು ಆನಂದ ಆಶ್ಚರ್ಯ! ತನ್ನ ಭವಿಷ್ಯತ್ತನ್ನು ಹದಗೆಡಿಸಲೆತ್ನಿಸುತ್ತಿದ್ದ ತೇಜಪಾಲ ಇಂದು ಈ ರೀತಿ ಮಾರ್ಪಾಟು ಹೊಂದಲು ಮೋಹಿನಿಗೆ ಸ್ವರ್ಗವೇ ಸಿಕ್ಕಂತಾಯಿತು.

'ಮನುಷ್ಯನಿಗೆ ಮನುಷ್ಯನು ಹೆದರಬೇಕೇಕೆ?' ಎನ್ನುವರು ಕೆಲವರು. ಪ್ರಪಂಚಕ್ಕೇ ಕಂಟಕಪ್ರಾಯರಾಗಿ ಜನಿಸಿದವರಿಗೆ ಹೆದರಲೇ ಬೇಕಾಗುವುದು —ಕೆಲವು ವೇಳೆ. ಸ್ವರ್ಣಳೇಕೆ ತೇಜಪಾಲನನ್ನು ಕಂಡು ಹೆದರುತ್ತಿದ್ದಳು? ಅವನಲ್ಲಿ ಬಾಹ್ಯ ಪ್ರಪಂಚಕ್ಕೆ ಸುಲಭದಲ್ಲಿ ತಿಳಿಯಲಾಗದ ಕೆಲವು ನಡತೆಗಳು ಹುದುಗಿದ್ದುವು. ಮನುಷ್ಯರಿಗೆ ಮನುಷ್ಯರು ಹೆದರುವುದು ಮಾನವನ್ನು ಉಳಿಸಿ ಕೊಳ್ಳುವುದಕ್ಕೋಸ್ಕರ.

೨೭

ಮನುಷ್ಯನ ಜೀವನದಲ್ಲಿ ಕಷ್ಟಸುಖಗಳು ಬರತೊಡಗಿದವೆಂದರೆ ಕಷ್ಟದ ಹಿಂದೆ ಕಷ್ಟ—ಸುಖದ ಹಿಂದೆ ಸುಖ ಹೀಗೆ ಗುಂಪು ಕಟ್ಟಿಕೊಂಡು ಬರುವವು. ಆ ಸಮಯಗಳಲ್ಲಿ ಮನುಷ್ಯರು ಅತಿ ಕುಗ್ಗದೆಯೂ, ಅತಿ ಹಿಗ್ಗದೆಯೂ ಇದ್ದರೆ ಈ ಪ್ರಪಂಚವನ್ನು ಸುಖವಾಗಿ ದಾಟಬಹುದು.

ಮಥುರಾನಾಥರು ಸ್ವರ್ಣಳೊಂದಿಗೆ ಎರಡನೆಯ ತರಗತಿಯ ಡಬ್ಬಿಯನ್ನು ಹತ್ತಿದ್ದರು. ಅದರಲ್ಲಿ ಐದಾರು ಜನ ತರುಣರು ಹೊಗೆಬತ್ತಿ ಎಳೆಯುತ್ತ ಆಂಗ್ಲ ಪೋಷಾಕು ಧರಿಸಿ ಹರಟೆಹೊಡೆಯುತ್ತಿದ್ದರು. ಅವರೊಳಗೆ ಒಬ್ಬನ ಹೊರತು ಉಳಿದೆಲ್ಲರೂ ಸ್ವರ್ಣಳನ್ನು ಓರೆನೋಟದಿಂದ ನೋಡಿ ಆಗಾಗ ನಗುತ್ತಿದ್ದರು. ಒಮ್ಮೊಮ್ಮೆ ಅವರವರೊಳಗೆ ಕಣ್ಣು ಮಿಟಕಿಸುವುದನ್ನು ಸಾಗಿಸಿಯೆ ಇದ್ದರು. ಆದರೆ ಸ್ವರ್ಣ ಮಾತ್ರ ಆ ಐವರ ದೃಷ್ಟಿಗೊಳಗಾಗದೆ ಉಳಿದ ಆ ಒಬ್ಬನನ್ನೆ ನೆಟ್ಟ ನೋಟದಿಂದ ನೋಡುತ್ತಿದ್ದಳು. ಆದರೆ ಅವನು ತಲೆಯನ್ನು ಹೊರಗೆ ಹಾಕಿ, ಉಗಿಬಂಡಿ ವೇಗವಾಗಿ ಚಲಿಸುತ್ತಿರುವಾಗ ಕಣ್ಣಿಗಿಂಬಾಗಿ ಕಾಣುತ್ತಿರುವ ನಿಸರ್ಗಸೌಂದರ್ಯವನ್ನು ಅವಲೋಕಿಸುತ್ತಿದ್ದನು. ಅವನ ಸಂಗಡಿಗರು ಅವನ ಬೆನ್ನು ತಟ್ಟಿ, "ಕ್ಯಾ, ಬಾಯ್ ? ವೊ ಸಾಮಾನ್ ತುಮ್ಹಾಕಿ ದೇಖ್ತೀ ಹೈಂ ! ತುಮ್ಭಿ ಕುಛ್ ದೇಖೊ ನಾ ! ಮಿಲೇ ತೊ ಮಾರ್ಲೇ ಬಾ !........ಕ್ಯಾ ? ಕೋಶಿಸ್ ಕರೂಂಗೀ ಯಾ ನಹಿ ! ........" ಏನೇನೋ ಉರ್ದೂ ಭಾಷೆಯಲ್ಲಿ ಗೂಢಾರ್ಥಗಳಿಂದ ಕೂಡಿದ ಮಾತುಗಳನ್ನಾಡುತ್ತ ಗಟ್ಟಿಯಾಗಿ ನಗುತ್ತಿದ್ದರು. ಆದರೆ ಆತ ಒಳಗೆ ಮುಖ ಮಾಡಿ ಸ್ವರ್ಣಳ ಮುಖವನ್ನು ನೋಡಲಾರ. ಮಿತ್ರರ ಅಸಭ್ಯ ವರ್ತನೆಯು ಅವನಿಗೆ ಕಂಟಕಪ್ರಾಯವಾಗಿರಬಹುದೇನೊ ! ಸಂಭಾವಿತರಂತೆ ಪೋಷಾಕು ಧರಿಸಿದ್ದುದಲ್ಲದೆ ಎರಡನೆ ತರಗತಿಯ ಡಬ್ಬಿಯಲ್ಲಿ ಕುಳಿತಿದ್ದರು. ಅಂಥವರು ವರ್ತಿಸಬೇಕಾದ ವರ್ತನಗಳಾವವು ? ಹೆಂಗಸರನ್ನು ಕೊಂಕು ಮಾತುಗಳಿಂದ ಅಣಕಿಸಿದರೆ ? ಇದು ಆ ಸಭ್ಯ ತರುಣನಿಗೆ ಹಿಡಿಸಲಿಲ್ಲ ವೇನೊ ! ಆತನು ಅವರೊಂದಿಗೆ ಸೇರಿ ಸ್ವರ್ಣಳ ಮೇಲೆ ದೃಷ್ಟಿ ಬೀರದೆ ಹೊರಗೆ ನೋಡುತ್ತಿದ್ದನು.

ಮಥುರಾನಾಥರಾಯರು ಒಂದು ಸ್ಟೇಶನ್ನಿನಲ್ಲಿ ಬಂಡಿ ನಿಲ್ಲಲು ಬಾಳೆ ಹಣ್ಣು, ಕಿತ್ತಳೆ ಹಣ್ಣು ಮೊದಲಾದವುಗಳನ್ನು ಕೊಂಡುಕೊಂಡರು—ಸ್ವರ್ಣಳಿ

ಗೆಂದೇ. ಆದರೆ ಅವುಗಳೊಂದನ್ನೂ ಸ್ವರ್ಣ ಮುಟ್ಟಲಿಲ್ಲ. ಎಲ್ಲವನ್ನೂ ನಿರಾಕರಿಸಿದಳು. ಹೆಚ್ಚು ಒತ್ತಾಯ ಪಡಿಸುವುದು ಅವರಿಂದಾಗಲಿಲ್ಲ. ಅಲ್ಲದೆ ಅವರ ಕೂಡ ಬೇರೆ ಹೆಂಗಸರಾರೂ ಇಲ್ಲ. ಆ ತರುಣರು ಮಥುರಾನಾಥರನ್ನೂ ಪರಿಹಾಸ್ಯ ಮಾಡಲಾರಂಭಿಸಿದರು. ಮಥುರಾನಾಥರಿಗೆ ಆ ಭಾಷೆ ತಿಳಿಯುತ್ತಿರಲಿಲ್ಲ. ಲೋಕದಲ್ಲಿ ಇಂಥ ಸಂಭಾವಿತರು ಹೆಚ್ಚಾಗಿದ್ದು ಅವರ ಅನ್ಯಾಯಗಳು ಇನ್ನೂ ಹೆಚ್ಚುತ್ತಲಿವೆ.

ಸ್ವರ್ಣಳದೆಷ್ಟೋ ಪ್ರಯತ್ನಿಸಿದಳು, ಆ ತರುಣನ ಮುಖದರ್ಶನಕ್ಕಾಗಿ. ಆದರೆ ಅದು ಫಲಕಾರಿಯಾಗಲಿಲ್ಲ. ಮಥುರಾನಾಥರು ಕಿತ್ತಳೆ ಹಣ್ಣುಗಳನ್ನು ಹಾಗೆಯೆ ಇಟ್ಟು ಸಿಹಿಯಾದ ಬಾಳೆಹಣ್ಣುಗಳನ್ನು ಮುಗಿಸಿದರು. ಸ್ವರ್ಣಳ ಮನೋವೇದನೆ ಹೆಚ್ಚಾಯಿತು. ಆ ಅಸಭ್ಯ ತರುಣರ ವಾಗ್ವೈಖರಿಗಳ ಗೂಢಾರ್ಥಗಳು ಅವಳಿಗೆ ಆಗಲಾರಂಭಿಸಿತು. ಆದರೂ ಅರಿಯದವಳಂತೆ ಮೌನವಾಗಿ ಕುಳಿತಿದ್ದಳು. ಆ ಸೌಮ್ಯ ಮೂರ್ತಿ ಯುವಕನ ಮೇಲೆ ಆಗಾಗ ತನ್ನ ದೃಷ್ಟಿಯನ್ನು ಬೀರದಿರಲಿಲ್ಲ. ಮಥುರಾನಾಥರೂ ಒಂದೆರಡಾವರ್ತಿ ಕಣ್ಣುಗಳನ್ನು ಹೊರಳಿಸಿದರು. ಆ ಕೇಡಿ ಹುಡುಗರನ್ನೊಮ್ಮೆ ಎದ್ದು ಹಿಡಿದು ಕೆನ್ನೆಗೆರಡು ಬಿಗಿಯೋಣ ಎಂದೆನಿಸಿದರೂ ಸಹನಾಶಕ್ತಿಯನ್ನು ತಂದುಕೊಂಡು ಮಾತನಾಡದೆ ಬಂಡಿ ಯಾವಾಗ ಮಂಗಳೂರು ತಲಪೀತು ಎಂದು ಯೋಚಿಸುತ್ತ ವೀಳ್ಯ ಹಾಕಿಕೊಂಡು ಕಾಲವ್ಯಯ ಮಾಡುತ್ತಿದ್ದರು. ಸ್ವರ್ಣಳ ವರ್ತನೆಯ ಬಗ್ಗೆ ಬೇರೆ ಎಣಿಸುವುದು ತಪ್ಪೆಂದು ತಿಳಿದು ತಮ್ಮನ್ನು ತಾವೇ ತಿದ್ದಿಕೊಂಡರು. ಸ್ವರ್ಣ ನಿಷ್ಕಾಮಪ್ರೇಮಿ ಎಂದು ಅವರ ಅಂತರಾತ್ಮ ಒತ್ತೊತ್ತಿ ಹೇಳುತ್ತಿದ್ದಿತು.

ಉಗಿಬಂಡಿ ಮುಂದಿನ ನಿಲ್ದಾಣದಲ್ಲಿ ನಿಲ್ಲಲು ವೃದ್ಧ ಸಭ್ಯ ಪುರುಷರೊಬ್ಬರು ತಮ್ಮ ಸಂಸಾರ ಸಮೇತ ಇವರಿದ್ದ ಡಬ್ಬಿಯನ್ನು ಹತ್ತಿದರು. ಮಥುರಾನಾಥರಿಗೆ ಅವರ ಪರಿಚಯವಿದ್ದು, ಕುಳಿತಲ್ಲಿಂದಲೆ ವಂದಿಸಿ ಪರಸ್ಪರ ಕುಶಲ ಪ್ರಶ್ನೆಗಳಾಗಲು, ಹೊಸಬರ ಪತ್ನಿ "ಇದ್ಯಾರು?" ಎಂದು ಸ್ವರ್ಣಳನ್ನು ನೋಡಿ ಮಥುರಾನಾಥರಾಯರನ್ನು ಕೇಳಿದರು. "ನಮ್ಮ ತಂಗಿ, ಪಾರ್ವತಮ್ಮ!" ಎಂದರು. ಪಾರ್ವತಮ್ಮನವರಿಗೆ ತೃಪ್ತಿಯಾಗಲಿಲ್ಲವೇನೊ, "ನಾವು ನಿಮ್ಮೊಕ್ಕಲಲ್ಲಿರುವಾಗ ಹಾಗೇನೂ ಇರ್ಲಿಲ್ಲ...." ಎಂದರು. ಮಥುರಾನಾಥರಿಗೆ ಅದರ ಅರ್ಥವಾಯಿತು, ಪಾರ್ವತಮ್ಮನವರಿಗೆ ತಾವಿತ್ತ ಪರಿಚಯ

ಸಾಕಾಗಿಲ್ಲವೆಂಬುದು. ಗುರುವನ್ನು ಅರಸುವಾಗ ಶನಿ ಕಾಲನ್ನು ಸುತ್ತಿದಂತೆ ಆಯಿತು. 'ಇವರ ಮಗಳನ್ನು ನಮ್ಮ ಮಗನಿಗೆ ತಂದುಕೊಳ್ಳುವುದೆಂದು ನಿಶ್ಚಯವಾಗಿದೆ. ಮಗ ಮಂಗಳೂರು ಕಾಲೇಜಿನಲ್ಲಿ ವಿದ್ಯಾಭ್ಯಾಸ. ಒಬ್ಬಳೇ ಮಗಳಾದ್ದರಿಂದ ಹುಡುಗನನ್ನು ನೋಡಲು ನಮ್ಮೂರಿಗೆ ಬಂದಿದ್ದರು. ಮಗನಿಗೆ ಬರಲು ಸಮಯವಿಲ್ಲ—ಮಂಗಳೂರಿಗೆ ಹೋಗಿ ಬರೋಣಾಂತ—" ಎಂದು ವಾಕ್ಯವನ್ನು ಪೂರ್ಣಗೊಳಿಸುವ ಮುನ್ನ, "ಒಹೋ! ಸರಿ!" ಎಂದರು ಪಾರ್ವತಮ್ಮ. "ಹುಡುಗ ಯಾವ ಕ್ಲಾಸಿನಲ್ಲೊ ?" ಎಂದರು. "ಜೂನಿಯರ್ ಬಿ.ಎ. ಅಂತ ಕಾಣುತ್ತೆ" ಎಂದು, "ಅಲ್ವೇನಮ್ಮ?" ಎಂದು ಸ್ವರ್ಣಳ ಕಡೆಗೆ ತಿರುಗಿದರು. 'ಹೌದು' ಎಂಬುದರ ಚಿಹ್ನೆಯಾಗಿ ಸ್ವರ್ಣ ತಲೆ ಅಲ್ಲಾಡಿಸಿದಳು.

ಹೊಸಬರು ಆ ಡಬ್ಬಿಯನ್ನು ಹತ್ತಿದ ಕೂಡಲೆ ಆ ಐವರ ಚೇಷ್ಟೆ ಕಡಿಮೆಯಾಗಿತ್ತು. ಸ್ವರ್ಣಳೂ ಆ ಕಡೆ ನೋಡುವುದನ್ನು ಬಿಟ್ಟುಬಿಟ್ಟಿದ್ದಳು.

"ವಡಿವೇಲಯ್ಯಂಗಾರ್‌ರು ಕೆಲಸದಿಂದ ನಿವೃತ್ತರಾಗಲಿಲ್ಲವಷ್ಟೆ ?" ಎಂದು ಮಥುರಾನಾಥರು ಆ ಹೊಸಬರನ್ನು ಪ್ರಶ್ನಿಸಿದರು.

"ಇಲ್ಲ ರಾಯರೆ, ಎರಡು ವರ್ಷ ಇದೆ."

"ಹೀಗೆ ಹೊರಟಿರಿ ?"

"ಈಗ ವಿಶ್ರಾಂತಿಗಾಗಿ ಆರು ತಿಂಗಳ ರಜ ಪಡೆದಿದ್ದೇನೆ. ಪುಣ್ಯಸ್ಥಳಗಳನ್ನೆಲ್ಲಾ ನೋಡಿಕೊಂಡು ಬರೋಣಾಂತ ಮನಸ್ಸಾಯ್ತು, ಹೊರಟೆ. ಅಲ್ಲದೆ ಇವಳದೂ ಒತ್ತಾಯ. ಹೂಂ, ಆಗ್ಲೀಂತ! ಏನು ಪುಣ್ಯಸ್ಥಳವೊ ಏನೊ! ಮರುಳು........"

"ಛೆ! ಛೆ! ಹಾಗನಬೇಡಿ ಅಯ್ಯಂಗಾರ್‌ರೆ. ಪುಣ್ಯಸ್ಥಳಾಂತ ಅಲ್ಲದಿದ್ದರೂ ಎಷ್ಟೋ ಊರು ಸುತ್ತಾಡಿರಬೇಕು, ಮನುಷ್ಯನಾಗಿ ಹುಟ್ಟಿದಮೇಲೆ! ಪುಣ್ಯಕ್ಷೇತ್ರಗಳಿಗೆ ಹೋಗುವುದಂತೂ ವಿಹಿತ. ಮನುಷ್ಯ ತಿನ್ನೋದರಲ್ಲೇ ಆಸಕ್ತನಾಗಬಾರದು. ಈ ಹಾಳು ಹೊಟ್ಟೆಗೆ ಎಷ್ಟು ಹಾಕಿದರೂ ಸಾಲದು! ಮತ್ತು ಹಣ; ಹಣವೇನು, ನಾವು ಸತ್ತ ಮೇಲೆ ನಮ್ಮ ಹಿಂದೆ ಬರುವುದೆ? ಅಲ್ಲದೆ ಹಣವನ್ನು ನಾವು ಸಂಪಾದಿಸುತ್ತೇವೆಯೇ ಹೊರತು ಅದೇನಾದ್ರೂ ನಮ್ಮನ್ನು ಸಂಪಾದಿಸುತ್ತದೆಯೆ ?"

ಹಣದಾಸೆಯ ಸಾಕಾರ ಮೂರ್ತಿಯಾದ ಅಯ್ಯಂಗಾರ್ಯರು ಏನೊಂದೂ ಮಾತನಾಡದೆ ಕುಳಿತರು. ಇದನ್ನು ನೋಡಿ ಪಾರ್ವತಮ್ಮ ತಮ್ಮ ಹಿರಿಯ ಮಗಳ ಮುಖವನ್ನೂ ಇತರ ಮಕ್ಕಳನ್ನು ನೋಡಿಯೂ ನಗು ತಡೆಯಲಾರದವರಾಗಿ ಗಂಡನಿಗೆ ಇನ್ನೆಲ್ಲಿ ಅಗೌರವವಾಗುವುದೆಂಬ ಅಂಜಿಕೆಯಿಂದ ಬಹು ಕಷ್ಟದಿಂದ ಬಂದ ನಗುವನ್ನು ಒತ್ತಿ ಹಿಡಿದರು. ಮಥುರಾನಾಥರೂ ಇದನ್ನು ನೋಡದಿರಲಿಲ್ಲ.

"ಮಗನ ಹೆಸರೇನು ರಾಯರೆ, ನನಗೆ ಮರೆತು ಹೋಗಿದೆ. ಅವನು ಚಿಕ್ಕವನಾಗಿದ್ದಾಗ ನೋಡಿದ್ದು....?" ಎಂದರು ಅಯ್ಯಂಗಾರ್ಯರು.

"ಅನಂತ ಅಂತ."

"ಈಗ ಬಿ.ಎ. ಅಲ್ಲವೆ ?"

"ಹೌದು."

"ತಮಗೆ ಸೊಸೆಯಾಗಲಿರುವವಳ ಹೆಸರೇನೊ ತಿಳೀಲಿಲ್ಲವಲ್ಲ" ಎಂದು ಪಾರ್ವತಮ್ಮ ಕೇಳಿದರು.

"ಹರಿಣೀಂತ—ಪಾರ್ವತಮ್ಮನೋರೆ."

"ಆಹಾ! ಎಲ್ಲಿಂದ ದೊರಕಿಸಿದಿರಿ ಆ ಹರಿಣಿಯನ್ನ ?"

ಮಥುರಾನಾಥರು ಬೇಕೆಂದೇ ಹುಸಿ ಕಲ್ಲು ಹೊಡೆದರು—'ಹರಿಣಿ' ಎಂದು. ಪಾರ್ವತಮ್ಮ ಹಿಂದೆ ಆಶ್ರಮಕ್ಕೆ ಹೋಗಿದ್ದಾಗ ಮೂರು ವರ್ಷದ ವಿಜಯಳನ್ನು ಎತ್ತಿ ಕೊಂಡಾಡಿದ್ದರು. ಈಗ ಅವರೊಡನೆ 'ವಿಜಯ' ಎಂದರೆ ರಾಮಾಯಣಪಠನವನ್ನೇ ಮಾಡಬೇಕಾಗುವುದೆಂದು ಮಥುರಾನಾಥರಾಯರು ಈ ಉಪಾಯವನ್ನು ಕೈಗೊಂಡುದು. ಅಲ್ಲದೆ ಸ್ವರ್ಣಳೂ ರಂಗಮ್ಮನೆಂಬ ಹೆಸರಿನಿಂದ ಪಾರ್ವತಮ್ಮನಿಗೆ ಗೊತ್ತು. ಸ್ವರ್ಣಳ ಆಗಿನ ಉಡಿಗೆತೊಡಿಗೆಗಳು ಬೇರೆಯಾಗಿದ್ದುದರಿಂದ ಪಾರ್ವತಮ್ಮನಿಗೆ ಸ್ವರ್ಣಳನ್ನು ರಂಗಮ್ಮನೆಂದು ಗುರುತು ಹಚ್ಚುವುದಾಗಲಿಲ್ಲ.

* * * *

ಮಾಧವರಾಯರು ಕನ್ನಡಿಯ ಮುಂದೆ ನಿಂತು ಮೀಸೆಯನ್ನು ತೀಡಿ ಸರಿಪಡಿಸಿಕೊಳ್ಳುತ್ತಿದ್ದರು. ಕಾವೇರಮ್ಮ ಅಲ್ಲಿಗೆ ಬರುತ್ತ "ಒಗೆದ ಅಂಗಿ ಧೋತ್ರ ಹಾಕಿಕೊಳ್ಳಿ" ಎಂದರು ಹಿಗ್ಗಿದ ಹೃದಯದಿಂದ. ಹೆಂಡತಿಯ

ಆದರದ ಮಾತು ಕೇಳಿ ಮಾಧವರಾಯರು ಒಳಗೊಳಗೆ ನಕ್ಕರು. ಕಾವೇರಮ್ಮ ಅಂಗಿ ವಸ್ತ್ರಗಳನ್ನು ತಂದು ಅವರ ಮುಂದಿಟ್ಟರು. ಮಾಧವರಾಯರು ಧರಿಸಿ ಕೊಂಡು, ಚೀಲ ಕೈಗೆ ತೆಗೆದುಕೊಂಡು, ಬೆತ್ತ ತೆಗೆದುಕೊಳ್ಳುವಷ್ಟರಲ್ಲಿ "ಮಾಧವರಾವ್" ಎಂದ ಟಪ್ಪಾಲು ಪೇದೆ. ಮಾಧವರಾಯರು ಕಾಗದವನ್ನು ತೆಗೆದುಕೊಂಡರು.

"ಏನು? ಎಲ್ಲಿಂದ? ಯಾರಿಂದ?" ಎಂದೆರಡು ಮೂರು ಪ್ರಶ್ನೆಗಳನ್ನು ಒಟ್ಟಾಗಿ ಕೇಳಿದರು ಸುಬ್ಬರಾಯರು. ಕಾಗದವನ್ನೋದುತ್ತ ಮಾಧವರಾಯರ ಮುಖದಲ್ಲಿ ಆಶ್ಚರ್ಯವೂ ವಿಸ್ಮಯವೂ ಮೂಡಿತು. "ಏನೊ, ನನಗೆ ನಂಬಿಕೆಯೆ ಆಗುವುದಿಲ್ಲ!" ಎಂದರು.

"ಹಾಂ! ಏನು.... ಹಾಗೆ.... ಏನು?" ಸುಬ್ಬರಾಯರು ಗಾಬರಿಯಾಗಿ ಕೇಳಿದರು.

"ಗಾಬರಿಯಾಗೋದಕ್ಕೇನಿಲ್ಲ. ಕಾಗದ ಕಿಶೋರನಿಂದ ಬಂದಂತಿದೆ!" ಎಂದರು ಮಾಧವರಾಯರು ಅಪನಂಬಿಕೆಯನ್ನು ವ್ಯಕ್ತಪಡಿಸುತ್ತ. ಆದರೆ ಸುಬ್ಬರಾಯರು ಅದನ್ನು ಗಮನಿಸಲಿಲ್ಲ. ಅವರು ಇರಬಹುದೆಂದೇ ಎಣಿಸಿದರು.

ಸತ್ತನೆಂದು ತಿಳಿದಿದ್ದ ಕಿಶೋರನು ಜೀವಿಸಿರುವನೆಂದರಿತಾಗ ಸುಬ್ಬರಾಯ ರಿಗೆ ಆಶ್ಚರ್ಯವಾಯಿತು. ಸುಬ್ಬರಾಯರಿಗೆ 'ಕಿಶೋರ'ನೆಂಬ ಹೆಸರು ಕಿವಿಯನ್ನು ತಲಪಲು ಅವರ ಮನಸ್ಸಿನಲ್ಲಿದ್ದ ಉದ್ವೇಗ ಅತಿ ಅಪಾರವಾಗಿ ದ್ದುದರಿಂದ ಅವರಿಗೆ ಮಾತಾಡಲು ನಾಲಿಗೆ ಏಳಲಿಲ್ಲ.

ಆಗಲೆ ಒಂದು ತಾರು! ಅದೂ ಕಿಶೋರನಿಂದಲೆ ಬಂದಿತ್ತು. ಅದರಲ್ಲಿ 'ಇಂದೇ ಸಂಜೆಗೆ ಬರಲಿದ್ದೇನೆ' ಎಂದಿದ್ದಿತು.

"ತಾರು ಎಲ್ಲಿಂದ ಬಂದಿದೆ ನೋಡಿ" ಎಂದು ಸುಬ್ಬರಾಯರೆಂದರು.

"ಹುಣಸೂರು ಗ್ರಾಮದಿಂದ!" ಮಾಧವರಾಯರು ಆಶ್ಚರ್ಯದಿಂದ ಹೇಳಿದರು.

ಎಲ್ಲರಿಗೂ ಆಶ್ಚರ್ಯದ ಮೇಲೆ ಆಶ್ಚರ್ಯ! ಸುಬ್ಬರಾಯರಿಗೆ ಹೃದಯ ದಲ್ಲಿ ಹಿಡಿಸಲಾರದಷ್ಟು ಆನಂದ!—ಈಗಷ್ಟೇ ಎಲ್ಲರಿಗೂ ಒಂದು ಸಂದೇಹ ಬರುತ್ತಿದೆ! ಇದು ಕಾವೇರಮ್ಮನಿಂದ ಉದ್ಭವಿಸಿತು. "ಸ್ವರ್ಣಳೂ ಕಿಶೋರ ನೊಂದಿಗೆ ಇರಬಹುದೆ?" ಎಂಬ ಸದೃಶ ವಾಕ್ಯವೊಂದನ್ನು ಆಡಿದರು. ಕಡೆಗೆ

ಮಾಧವರಾಯರು, "ಜನ ಅಂದುಕೊಳ್ಳೋ ಹಾಗೆ ಇಬ್ಬರೂ ಒಟ್ಟಾಗಿಯೇ ಓಡಿಹೋಗಿದ್ದುದು ನಿಜವಾದರೆ ಅವಳೂ ಅವನೊಂದಿಗೇ ಇದ್ದಾಳು!" ಎನ್ನಲು, 'ಹೌದು,' ಎಂಬುದರ ಗುರುತಾಗಿ ಎಲ್ಲರೂ ಮುಖ-ಮುಖ ನೋಡಿಕೊಂಡು ತಲೆಯಲ್ಲಾಡಿಸಿದರು.

"ಕಾಗದದಲ್ಲಿ ಏನಿದೆ?" ಎಂದು ಸುಬ್ಬರಾಯರು ಕೇಳಿದರು.

"ಆ ವಿಷಯವಾಗಿ ಏನೂ ಇಲ್ಲ! ತಾನು ಐ. ಎ. ಎಫ್. (I.A.F.) ಅಂದರೆ ಹಿಂದೂ ದೇಶದ ವಿಮಾನ ದಳದಲ್ಲಿ ಕೆಲಸ ಮಾಡುತ್ತಿದ್ದೇನೆಂಬುದನ್ನು ತಿಳಿಸಿಲ್ಲವಾದರೂ ಅದು ಈ ಕಾಗದದಿಂದ ತಿಳಿದುಬರುತ್ತಿದೆ."

"ಹಾಗಾದರೆ ಸ್ವರ್ಣ ಅವನೊಂದಿಗೆ ಇರೋದು ಶಕ್ಯವೇ ಇಲ್ಲ ಅಲ್ಲವೆ?"

"ನಿಜ."

ಮಾಧವರಾಯರು ಹೊರಗೆ ಹೊರಟರು. ಕಾವೇರಮ್ಮ ಅಡಿಗೆಮನೆಗೆ ನಡೆದರು. ಸುಬ್ಬರಾಯರು ಕಿಶೋರನ ಪತ್ರವನ್ನು ನೋಡುತ್ತ ಕುಳಿತಿದ್ದರು.

ಅನಂತ ಆಗಲೆ ಕಾಲೇಜಿಗೆ ಹೋಗಿದ್ದನು. ವಿಜಯ ಅನಂತನ ಕೋಣೆಯಲ್ಲಿ ಕುಳಿತು ಅಳುತ್ತಿದ್ದಳು. ಹತ್ತಿಪ್ಪತ್ತು ದಿನಗಳಷ್ಟೇ ಉಳಿದಿವೆ ಮದುವೆಗೆ! ಈ ಚಿಂತೆ ಅವಳನ್ನು ಬಹುವಾಗಿ ಬಾಧಿಸುತ್ತಿತ್ತು. ತೇಜಪಾಲನ ನೆನಪಾದಾಗ ಲೆಕ್ಕ ತಾನು ಅವನನ್ನು ಹೇಗೆ ಮದುವೆಯಾಗುವುದು ಎಂದೆನಿಸುವುದವಳಿಗೆ. 'ಅನಂತನ ಮೂರ್ತಿ ನನ್ನ ಹೃತ್ಪಟಲದ ಮೇಲೆ ಮೂಡಿರುವಾಗ ತೇಜಪಾಲನ ಮೂರ್ತಿ ಅಲ್ಲಿ ಹೇಗೆ ಅವತರಿಸುವುದು ಸಾಧ್ಯ? ಅನಂತನನ್ನಾರಾಧಿಸುವ ನಾನು ಇನ್ನು ತೇಜಪಾಲನನ್ನು ಮದುವೆಯಾಗುವುದೆ? ಪ್ರಾಣಾಪಾಯ ತಂದುಕೊಳ್ಳಲೆ? ನನ್ನನ್ನೇ ನಂಬಿರುವ ಅನಂತನ ಗತಿಯೇನು? ಅನಂತನಾದರೂ ಏನನ್ನು ನೆನಸಿಕೊಂಡು ಸುಮ್ಮನೆ ಇದ್ದಾನೆ? ಇಲ್ಲ! ಇತ್ತೀಚೆಗೆ ಅವನೂ ಬಹಳ ಕ್ಷೀಣಿಸಿದ್ದಾನೆ. ಏತಕ್ಕಾಗಿ? ನನಗಾಗಿಯೇ ಅಲ್ಲವೆ? ಅಂದಮೇಲೆ ನಾನು ಮಡಿದರೆ ಅವನ ಭವಿಷ್ಯ? ಛಿ! ಇದೇನು ಯೋಚಿಸುತ್ತಿರುವುದು? ಹುಟ್ಟಿ ಸಾಯುವ ಜೀವಿ ಮನುಷ್ಯ; ಅದರೊಳಗೆ ನಿನಗಾಗಿ ನಾನು, ನನಗಾಗಿ ನೀನು ಎಂಬುದರ ಚಿಂತೆ ಮಾಡುವುದೆ? ಇದೆಲ್ಲವೂ ನನ್ನ ಭ್ರಮೆ! ನನ್ನ ಸ್ವಾರ್ಥವೆ ಈ ಗಣನೆಗಳಿಗೆ ಕಾರಣ! ಅನಂತನು ನನ್ನನ್ನು ಬಯಸುತ್ತಿರುವುದರಿಂದ ಅವನದೂ ಸ್ವಾರ್ಥವಲ್ಲವೆ? ಹೌದು! ಲೋಕದಲ್ಲಿ

ಮಾನವಪ್ರಾಣಿ ಸ್ವಾರ್ಥಿ! ನಾನು ಅನಂತನನ್ನು ಪ್ರೀತಿ ಸುತ್ತಿರುವೆನೆಂಬುದು ಅವನ ತಾಯಿತಂದೆಗಳಿಗೆ ತಿಳಿದರೆ ಅನಂತನ ಗತಿಯೇನು? ಅವರ ತಂದೆಗೆಷ್ಟು ಅವಮರ್ಯಾದೆ! ಅವರು ಅನಂತನಿಗಾಗಿ ಯಾವ ಸುಂದರಿಯನ್ನೂ ತರಲು ಅಸಮರ್ಥರೆ? ಪರಮಾತ್ಮನ ಇಚ್ಛೆಯಿದ್ದಂತೆ ಎಲ್ಲವೂ ನಡೆಯುವುದು!' ಎಂದು ಮೊದಲಾಗಿ ಸಮಸ್ಯೆಗಳೆದ್ದು ವಿಜಯಳ ಹೃದಯವನ್ನು ಕಲಕಿಬಿಡು ತ್ತಿದ್ದವು. ಕಾವೇರಮ್ಮನ ಕರೆ ಕೇಳಿ ಬರಲು ವಿಜಯ ಅಲ್ಲಿಗೆ ತೆರಳಿದಳು.

"ಎಲ್ಲಿದ್ದೆಮ್ಮ ಇಷ್ಟು ಹೊತ್ತು?"

"ಇಲ್ಲೇ ಇದ್ದೆ, ಅಜ್ಜಮ್ಮ."

"ಅಯ್ಯೋ! ಇದೇನು? ಕಣ್ಣು ಮುಖ ಎಲ್ಲಾ ಒಂದೇ ಸವನೆ ಊದಿದೆ. ತಲೆ–ಗಿಲೆ ನೋಯುತ್ತೇನಮ್ಮ?"

"ಇಲ್ಲ, ಅಜ್ಜಮ್ಮ."

"ಹೂಂ! ನಿನ್ನ ಕಕ್ಕ ಬರೋವರಿದ್ದಾರೆ ಈ ದಿನ. ಮೈ ತೊಳೆದು ಕೊಂಡು ಆ ನನ್ನ ತಾವರೆ ಬಣ್ಣದ ಸೀರೆ ಉಟ್ಕೊ. ತಲೆ ಬಾಚಿಕೊಂಡು, ದೇವರ ಕೋಣೇಲಿ ಹೂ ಇದೆ, ಇಟ್ಕೊ."

* * * *

ಮಧುರಾನಾಥರು ಮಂಗಳೂರಿಗೆ ತಲಪಿದರು. ಉಗಿಬಂಡಿಯಿಳಿದು ಸ್ವರ್ಣಳೊಂದಿಗೆ ನೇರ ಮಾಧವರಾಯರ ಮನೆಗೆ ಹೋಗದೆ ಉಪಾಹಾರ ಮಂದಿರವೊಂದಕ್ಕೆ ನಡೆದರು. ಉಪಾಹಾರವನ್ನು ತೀರಿಸಿ, ಒಂದು ಕೋಣೆ ಯನ್ನು ಬಾಡಿಗೆಗೆ ತೆಗೆದುಕೊಂಡು, ಸ್ವರ್ಣಳನ್ನು ಅಲ್ಲಿಯೇ ಇರಲು ಹೇಳಿ ತಾವು ಅಲ್ಲಿಂದ ಹೊರಬಿದ್ದರು. ಕೆಲವು ಗುಪ್ತ ಮಾತುಗಳನ್ನು ಹೇಳಿ ಹೋಗಿ ದ್ದುದರಿಂದ ಅವಳು ಅಲ್ಲಿಯೇ ಇರುವುದು ವಿಹಿತವಾಗಿತ್ತು.

ಮಧುರಾನಾಥರು ಉಪಾಹಾರಗೃಹದಿಂದ ಹೊರಬೀಳಲು ಅಲ್ಲಿಂದಲೇ ಉಪಾಹಾರ ತೀರಿಸಿಕೊಂಡು ಹೊರಗೆ ಬರುತ್ತಿದ್ದ ಕಿಶೋರನನ್ನು ನೋಡಿದರು! ಅವನೂ ಅವರನ್ನು ಹಾಗೇ ನೋಡಿದ. ಅವರಿಬ್ಬರಿಗೂ ಪರಸ್ಪರ ಗುರುತು ಹತ್ತಲಿಲ್ಲ. ಆಗ ಮಧುರಾನಾಥರು ನೋಟ ಕದಡಿಸಿ, ಯಾರೊ ಏನೊ ಎಂದುಕೊಂಡು, ಮಾಧವರಾಯರ ಮನೆಗೆ ಹೊರಟರು. ಮನೆಯ ಸಮೀಪ ಮಧುರಾನಾಥರಾಯರು ಬರುವಷ್ಟರಲ್ಲಿ ಎದುರು ಮಾರ್ಗವಾಗಿ ಕಿಶೋರನೂ

ಬಂದನು. ಅವನ ಹಿಂದೆ ಒಬ್ಬ ಆಳು ಒಂದು ದೊಡ್ಡ ಟ್ರಂಕು ಹಾಸಿಗೆಗಳನ್ನು ಹೊತ್ತುಕೊಂಡು ಬರುತ್ತಿದ್ದ.

ಕಿಶೋರನು ಮಾಧವರಾಯರ ಮನೆಯ ಅಂಗಳವನ್ನು ಮುಟ್ಟಿದುದೇ ಸುಬ್ಬರಾಯರು ಕಿಶೋರನನ್ನಪ್ಪಿಕೊಂಡು ಗೊಳೋ ಎಂದು ಅತ್ತುಬಿಟ್ಟರು. ಆಗ ಅಲ್ಲಿದ್ದವರೆಲ್ಲರೂ ಕಣ್ಣುಗಳಲ್ಲಿ ನೀರು ತಂದುಕೊಂಡರು. ಮಥುರಾನಾಥರು ಬಂದು ಜಗಲಿಯಲ್ಲಿ ನಿಂತಿದ್ದುದನ್ನು ಯಾರೂ ನೋಡಲೆ ಇಲ್ಲ. ಸುಬ್ಬರಾಯರ ಅಳುವನ್ನು ನೋಡಿದ ಅವರ ಮೋರೆಯೂ ಇಳಿದುಹೋಗಿತ್ತು. ಕಣ್ಣುಗಳಲ್ಲಿ ನೀರು ತುಂಬಿದ್ದಿತು.

"ಅತ್ತಿಗೆಯೆಲ್ಲಿ ಅತ್ತೆ ?" ಎಂದು ಕಿಶೋರ ಕಾವೇರಮ್ಮನನ್ನು ಪ್ರಶ್ನಿಸಿದ. ಕಾವೇರಮ್ಮನಿಗೆ ಮಿತಿಮೀರಿದ ಸಂಕಟವಾಯಿತು. ದುಃಖಾತಿರೇಕದಿಂದ ಗಟ್ಟಿಯಾಗಿ ಅತ್ತುಬಿಟ್ಟರು. ಮಾಧವರಾಯರು ಮಥುರಾನಾಥರನ್ನು ಬರಮಾಡಿಕೊಂಡು ಆರಾಮಾಸನವನ್ನು ನೀಡಿದರು.

ಮಥುರಾನಾಥರು ಒಮ್ಮೆಲೆ ಕುಳಿತಲ್ಲಿಂದ ಎದ್ದು ಮಾಧವರಾಯರ ಕೈಹಿಡಿದು ಹೊರಬಂದು, "ನೀವೀಗ ನನ್ನೊಡನೆ ಬರಬೇಕು. ಒಂದು ಮಹತ್ವದ ಕೆಲಸವಿದೆ. ಒಂದೇ ಒಂದು ನಿಮಿಷವೂ ಸಿಗಲಾರದು" ಎಂದರು. ಇಬ್ಬರೂ ಹಾಗೆಯೆ ಹೊರಟರು. ದಾರಿಯಲ್ಲಿ ಅನಂತನನ್ನು ಭೇಟಿಯಾಗಲು ಅವನನ್ನೂ ತಮ್ಮೊಂದಿಗೆ ಕರೆದೊಯ್ದರು. ಮೂವರೂ ಸೇರಿ ಅದೇ ಉಪಾಹಾರ ಮಂದಿರದಲ್ಲಿ ಕಾಫಿ ತೆಗೆದುಕೊಂಡು ಮಥುರಾನಾಥರು ಮಗನನ್ನು ಹೋಗಗೊಟ್ಟರು.

"ಮಾಧವರಾಯರೆ, ನಾನೀಗ ನಿಮ್ಮ ಮುಂದೆ ಕೆಲವು ಮಾತುಗಳನ್ನು ಆಡಲಿದ್ದೇನೆ. ಅದು ಮಹತ್ತರವಾದುದು. ನೀವೀಗ ಮನಸ್ಸಿನಲ್ಲಿ ಧೈರ್ಯ ತಂದುಕೊಳ್ಳಬೇಕು."

"ಆಗಲಿ."

"ತಮ್ಮ ಹಿರಿಯ ಮಗಳ ಹೆಸರೇನು ?"

"ಸ್ವರ್ಣ."

"ಅವಳನ್ನೀಗ ನೀವು ನೋಡಿದರೆ ಗುರುತು ಹಿಡಿಯಬಲ್ಲಿರಾ ?"

"ಅವಳ ಆ ಸ್ವರ್ಣಮೂರ್ತಿ ನನ್ನ ಕಣ್ಣಲ್ಲೇ ಇರುವಾಗ........"

"ಸರಿ. ನನ್ನೊಂದಿಗೆ ಬನ್ನಿ ; 'ಧೈರ್ಯಂ ಸರ್ವತ್ರ ಸಾಧನಂ' ಮರೆಯ

ಬೇಡಿ.—ಅದೋ ನೋಡಿ, ಆ ಕೋಣೆಯಲ್ಲೊಬ್ಬಳು ಹೆಣ್ಣುಮಗಳು ಕುಳಿತಿದ್ದಾಳೆ. ನೀವು ಪ್ರವೇಶಿಸಿದೊಡನೆ 'ಸ್ವರ್ಣ' ಎಂದು ಕರೆಯಬೇಡಿ. ಅವಳು 'ರಂಗಮ್ಮ' ಎಂಬ ಹೆಸರಿನಿಂದ ಜೀವನ ನಡೆಸುತ್ತಿದ್ದಾಳೆ. ನಾನು ನೋಡಿ ಸಂಶಯದಿಂದ ನಿಮ್ಮನ್ನು ಕರೆತಂದಿದ್ದೇನೆ."

ಮಥುರಾನಾಥರು ಮರೆಯಾಗಿ ನಿಂತು ಮಾಧವರಾಯರನ್ನು ಒಳಗೆ ಕಳುಹಿಸಿದರು. ಯಾರೋ ಗಂಡಸರು ಕೋಣೆಯನ್ನು ಪ್ರವೇಶಿಸುತ್ತಿರುವುದನ್ನು ನೋಡಿ ಮುಖ ಕೆಳಗೆ ಮಾಡಿ ಕುಳಿತಿದ್ದ ಸ್ವರ್ಣ ತಲೆಯೆತ್ತಿದಳು. ನೋಡಿದ್ದೇ ಕಂಬನಿದುಂಬಿದವಳಾಗಿ ಸ್ವರ್ಣ ತಂದೆಯ ಪಾದಗಳಲ್ಲಿ ಸಾಷ್ಟಾಂಗವಾಗಿ ಬಿದ್ದುಬಿಟ್ಟಳು. ಮಾಧವರಾಯರು ಹೃದಯ ತುಂಬಿ ಬಂದು ಮಗಳ ತೋಳುಗಳನ್ನು ಹಿಡಿದೆತ್ತಿದರು. ಆಗ ಮಥುರಾನಾಥರು ಕೋಣೆಯನ್ನು ಹೊಕ್ಕರು. ಸ್ವರ್ಣ ಕುಳಿತಲ್ಲಿಂದ ಏಳಲುದ್ಯುಕ್ತಳಾಗಲು ಮಥುರಾನಾಥರು ಅವಳಿಗೆ ಕುಳ್ಳಿರುವಂತೆ ಹೇಳಿ,

"ಮಾಧವರಾಯರೆ, ನೀವು ವ್ಯಥೆ ಪಡಬೇಕಾದದ್ದೇ ಇಲ್ಲ. ಕಳೆದ ವಸ್ತುಗಳು ಕೈಗೆ ಸಿಗುತ್ತಿರುವಾಗ ಸಂತೋಷಿಸುವುದು ಲೋಕರೂಢಿ. ಹೀಗಿರಲು ನೀವೇಕೆ ಚಿಂತಿಸುತ್ತೀರಿ? ನಿಮಗೇನಾದರೂ ಬೇಕಾಗಿದ್ದರೆ ಅವಳನ್ನು ಕೇಳಿ."

"ಈತನಕ ಎಲ್ಲಿದ್ದಳು, ಯಾರೊಡನಿದ್ದಳು, ಏನಾಗಿದ್ದಳು?....ಒಂದೂ ತಿಳಿಯಲಿಲ್ಲವಲ್ಲ!"

"ನಾನು ಅವಳನ್ನು ಕೇಳಿರಿ ಅಂದ್ರೆ ನೀವು ನನ್ನನ್ನೇ ಕೇಳ್ತಿದ್ದೀರಿ. ಸರಿ; ನಾನೇ ಉತ್ತರ ಕೊಡ್ತೇನೆ—ಸ್ವರ್ಣ, ಹೇಳಮ್ಮ. ಅವಳು ನಮ್ಮ ಮನೆಯಲ್ಲೇ ಇದ್ದಳು ಎಂಬುದನ್ನು ಹೇಳಬಲ್ಲೆ, ಮತ್ತೇನನ್ನೂ ನಾನರಿಯೆ."

"ಅಪ್ಪಾ! ಇನ್ನೂ ನಿಮ್ಮ ತಲೆಯಲ್ಲಿನ ಪೈಶಾಚಿಕ ಯೋಚನೆಗಳು ಅಳಿಯಲಿಲ್ಲವೆ? 'ವಿಜಯ' ಅವಳ ತಂದೆಗೇ ಜನಿಸಿದವಳು! ಆ ಒಂದು ನನ್ನ ಹೊಟ್ಟೆಯ ಕೂಸಿಗಾಗಿ ಮಾತ್ರ ಈ ಜೀವವನ್ನು ಉಳಿಸಿದ್ದೇನೆ. ಲೋಕಾಪವಾದಕ್ಕೆ ಹೆದರಿ ನನಗೆ ಸ್ಥಾನವೀಯಲು ಹಿಂಜರಿದಿರಿ. ನನಗೆ ಜೀವವನ್ನು ಇಟ್ಟುಕೊಳ್ಳಬೇಕೆಂಬ ಆಸೆಯೇನೂ ಇದ್ದಿಲ್ಲ. ಆದರೆ ನನ್ನ ಹೊಟ್ಟೆಯಲ್ಲಿದ್ದ ಮಗುವನ್ನು ಕೊಲ್ಲುವುದು ಜೀವಹಿಂಸೆ ಮಾಡಿದಂತಾಗುವುದೆಂದು ಹೆದರಿದೆ! ಕೇಳಿದರೆ ನಗಬಹುದು. ಆದರೆ ಎಲ್ಲವನ್ನೂ ಬಲ್ಲವನು ಆತನೊಬ್ಬನಿರುವನ

ಲ್ಲವೆ! ಅದೇ ಸಾಕು ನನಗೆ. ಹೊಟ್ಟೆಗೆ ತಿಳಿ ಗಂಜಿಯಿಲ್ಲದೆ ವಾರವೊಂದರ ವರೆಗೆ ಬರೇ ತಣ್ಣೀರು ಕುಡಿದು ಜೀವಿಸುತ್ತಿದ್ದೆ ; ಛತ್ರವೊಂದರ ಹೊರ ಜಗಲಿ ಯಲ್ಲಿ ಬಿದ್ದುಕೊಳ್ಳುತ್ತಿದ್ದೆ. ಒಂದು ದಿನ ಪ್ರಸವ ವೇದನೆಯೆದ್ದಿತು. ನೋಡು ವವರಾರು? ಕೇಳುವವರಾರು? ದೇವರೇ! ಒಬ್ಬ ಹೊಲೆಯ—ಅಯ್ಯೋ! ಅವನನ್ನು ಆ ರೀತಿ ನಾನು ಉಚ್ಚರಿಸಲೆ? ದೇವತಾಸ್ವರೂಪಿಯಾದ ಒಬ್ಬ ಮನುಷ್ಯನು ನನ್ನ ಕಡೆಗೆ ಬಂದನು. 'ತಾಯಿ, ನಿನಗೇನು ಬೇಕಾದುದನ್ನು ಹೇಳು, ತಾಯಿ!' ಎಂದು ಅಂತರಾಳದಿಂದ ಪ್ರೇರಿತವಾದ ಕರುಣೆಯಿಂದ ಕೇಳಿದ. ನಾನೇನನ್ನು ಹೇಳಬಲ್ಲೆ. ದೇವರೇ ತನ್ನ ದೂತನನ್ನು ನನ್ನೆಡೆಗೆ ಕಳಿಸಿರಲು ನಾನು ನಿಜ ಸ್ಥಿತಿಯನ್ನು ಹೇಳಬಾರದೇಕೆ? 'ಮನೆಯಲ್ಲಿ ನಿನ್ನ ಹೆಂಡತಿಯಿಲ್ಲವೆ, ನನ್ನಪ್ಪಾ!' ಎಂದೆ ನಾನವನೊಡನೆ. ಕೂಡಲೆ ಅವನು ಧಾವಿಸಿ ಹೋಗಿ ತನ್ನ ಹೆಂಡತಿಯನ್ನು ಕಳುಹಿಸಿದ. ಗಂಡ ಹೆಂಡಿರಿಬ್ಬರೂ ನನ್ನನ್ನು ಆದರಿಸಿ ಅವರ ಮನೆಗೆ ಕರೆದೊಯ್ದರು. ಪುಣ್ಯಮೂರ್ತಿಗಳವರು! ಜನ ಅವರನ್ನು ಹೊಲೆಯರೆಂದು ಕಡೆಗಣಿಸುತ್ತಿದೆ. ಆದರೆ ಅವರ ಹೃದಯ ಎಂತಹುದು! ಎಷ್ಟೊಂದು ಪ್ರೀತಿಯಿಂದ ನನ್ನನ್ನು ನೋಡಿದರವರು, ಔಷಧಿ ಗಳನ್ನು ಎಷ್ಟು ಕಷ್ಟಪಟ್ಟು ಮಾಡಿಕೊಟ್ಟರು. ಅಷ್ಟೇ ಅಲ್ಲದೆ, 'ಅಮ್ಮಾ, ಈ ಮದ್ದು ತಮಗೆ ಹಿಡಿಸದೊಂತಾದ್ರೆ ನೀವು ಹೇಳೋ ಔಷಧಿಗಳನ್ನ ಕೊಂಡು ತರ್ತೇವೆ' ಎಂದರು. ಅವರ ಕೈಯಿಂದ ಕಷ್ಟಪಟ್ಟು ತಯಾರಿಸಿದ್ದ ಅಮೃತೌ ಷಧವನ್ನು ಕಡೆಗಣಿಸಲಿಲ್ಲ. ಅವರ ಕೈಯಿಂದ ಹಣವನ್ನೂ ವೆಚ್ಚಮಾಡಿಸಲೆ? 'ಬೇಡಣ್ಣಯ್ಯಾ!' ಎಂದೆ. ಅವರಿತ್ತ ಇಂಬೇ ನನಗೆ ಅಮರನರಮನೆಗಿಂತಲೂ ಮಿಗಿಲಾಗಿತ್ತು ನನಗಾಗ! ಆ ಎಲ್ಲಾ ಔಷಧಿಗಳನ್ನೂ ನನಗೆ ಆಹಾರವನ್ನೂ ನನಗೆಲ್ಲಿ ಅಶುದ್ಧವಾಗುವುದೋ ಎಂಬ ಭಯದಿಂದ ಅವರು ಬೇರೆಯವರ ಕೈಯಿಂದಲೇ ಮಾಡಿಸಿ ನನಗೆ ಕೊಡುತ್ತಿದ್ದರೆಂದು ತಿಳಿಸಿದರು. ಮರುಳು! 'ನಿಮ್ಮ ಈ ಅರಮನೆಯಲ್ಲೇ (ಗುಡಿಸಲೆನಲು ನನಗಾಗ ಬಾಯಿ ಬರಲಿಲ್ಲ!) ನಾನು ಮಲಗಿರಲು ನನಗೆಲ್ಲಿಯ ಅಸ್ಪೃಶ್ಯದ ಭಯ, ನನಗೆಲ್ಲಿಯ ಶುದ್ಧಾಶುದ್ಧ ಗಳಮ್ಮಾ!' ಎಂದೆ. ಆ ಬಂಧುಗಳ ಕೈಯಿಂದಲೆ ಅನ್ನಾಹಾರ ತೆಗೆದು ಕೊಂಡೆ. ವಿಜಯೆಗೆ ಒಂದು ತಿಂಗಳಾಯಿತು. ಆಗ ನಾನು 'ನಿಮ್ಮೊಂದಿಗೆ ಹೊಲಕ್ಕೆ ಕೆಲಸಕ್ಕೆ ಬರುವೆ' ಎಂದೆ. ಅವರು ಅದಕ್ಕೆ ಒಪ್ಪದಾದರು. ಒತ್ತಾಯ

ಪಡಿಸಿದಮೇಲೆ ಆಗಲೆಂದು ಒಪ್ಪಿದರು. ಬೆಳಗಿನಿಂದ ಸಂಜೆಯವರೆಗೆ ದುಡಿದು ಹಿಂದಿರುಗುವಾಗ ಒಂದು ಸೇರು ಬತ್ತ, ನಾಲ್ಕಾಣೆ ಬರುತ್ತಿತ್ತು. ನನ್ನ ಜೀವನ ಅವರೊಂದಿಗೆ ಆನಂದಮಯವಾಗಿ ಸಾಗಿತು. ಒಂದು ದಿನ ಆ ನನ್ನ ಸಹೋದರಿಯ ಗಂಡನಿಗೆ ಕಾಯಿಲೆಯಾಯಿತು. ಹೆಂಡತಿ ಆತನ ಪಕ್ಕದಲ್ಲೇ ಕುಳ್ಳಿರಬೇಕಾಯಿತು. ಆ ದಿನ ನಾನೊಬ್ಬಳೇ ಕೆಲಸಕ್ಕೆ ಹೋದೆ. ನಾಲ್ಕೈದು ದಿನ ಕಳೆಯಿತು. ಈ ನಾಲ್ಕೈದು ದಿವಸಗಳಲ್ಲಿ ಆ ಶಾಸ್ತ್ರಿಗಳು ನನಗೆ ದಿನಾಲು ಎರಡು ಸೇರು ಬತ್ತ ಕೊಡುವಂತೆ ಆಳುಮಗನಿಗೆ ಅಪ್ಪಣೆ ಕೊಡುತ್ತಿದ್ದರು; ಮತ್ತು ತಾವೇ ದಿನವೊಂದಕ್ಕೆ ಒಂದು ರೂಪಾಯಿ ಕೊಡುತ್ತಿದ್ದರು. ನನಗೆ ಆಶ್ಚರ್ಯವಾಗುತ್ತಿತ್ತು! ನಾನು ಅಷ್ಟು ಕೆಲಸ ಮಾಡುತ್ತಿರಲಿಲ್ಲ. ನನಗೂ ನನ್ನ ಬಂಧುಗಳಿಗೂ ಸೇರಿಸಿ ಕೊಡುತ್ತಿದ್ದಾರೇನೋ ಎಂದುಕೊಂಡು ನಾನು ಸಂತೋಷದಿಂದ ತೆಗೆದುಕೊಂಡು ಹಿಂದಿರುಗಿ ಎಲ್ಲವನ್ನೂ ಆ ನನ್ನ ತಂಗಿಯ ಕೈಗೊಪ್ಪಿಸುತ್ತಿದ್ದೆ. ಇದನ್ನು ನೋಡಿ ಆ ದಂಪತಿಗಳು ಏಕೋ ಮುಖ ಮುಖ ನೋಡುತ್ತಿದ್ದರು! ಸಹೋದರನಿಗೆ ಗುಣವಾಗಲು, ಮೂವರೂ ಸೇರಿ ಅಂದು ಹೊಲಕ್ಕೆ ಹೋದೆವು. ಸಂಜೆ ಹಿಂದಿರುಗುವಾಗ ನಾವು ಮೂವರೂ ಒಟ್ಟಾಗಿ ಬರುತ್ತಿದ್ದೆವು. ಆದರೆ ಅಂದು ನಾನೂ ನನ್ನ ತಂಗಿಯೂ ಮಾತ್ರವೆ ಮನೆಯ ಕಡೆ ಬಂದೆವು. ತಂಗಿಯ ಗಂಡನನ್ನು ಆ ಶಾಸ್ತ್ರಿಗಳು ಕರೆಕಳುಹಿದ್ದರಾದ್ದರಿಂದ ಅವರಲ್ಲಿಗೆ ಹೋಗಿದ್ದ. ಅಂದಿನ ಅಡಿಗೆ ಕೆಲಸ ನಾನೇ ವಹಿಸಿಕೊಂಡೆನಾದ್ದರಿಂದ ಆತ ಬಂದುದನ್ನು ನಾನು ನೋಡಲೇ ಇಲ್ಲ. ಪತಿ-ಪತ್ನಿಯರಿಬ್ಬರೂ ಒಂದೆಡೆ ಕುಳಿತು ಏನೋ ರಹಸ್ಯ ಮಾತಾಡುತ್ತಿದ್ದರು. ಅದರಿಂದ ನಾನಲ್ಲಿಗೆ ಹೋಗದೆ ನನ್ನ ಕೆಲಸದಲ್ಲೇ ಇದ್ದೆ. ಆ ರಾತ್ರಿ ನಾವೆಲ್ಲಾ ಉಂಡು, ನಾನು ವಿಜಯೆಗೆ ಹಾಲುಣಿಸಿ, ಮಲಗಲನುವಾದೆವು. ಗಂಡ ಹೆಂಡಿರಿಬ್ಬರೂ ನನ್ನ ಹತ್ತಿರ ಬಂದುದನ್ನು ನೋಡಿ ನಾನವರನ್ನು ಬರಮಾಡಿಕೊಂಡೆನು. ಅವರಿಬ್ಬರ ಕಣ್ಣುಗಳಲ್ಲೂ ಕಂಬನಿದುಂಬಿದ್ದಿತು. ಏನೇನು ಮಾಡಿ ಕೇಳಿದರೂ ಅವರು ಉತ್ತರ ಕೊಡದೆ ಅಳುತ್ತಿದ್ದರು. ಕೊನೆಗೆ, 'ಇಂದು ಬೆಳಕು ಹರಿಯುವುದರೊಳಗೆ ನೀವಿಲ್ಲಿಂದ ಪಲಾಯನವಾಗಬೇಕು!' ಎಂದರು. 'ಹಾಗೇ ಆಗಲಿ. ಕಾರಣವೇನು?' ಎಂದೆ ನಾನು. 'ಶಾಸ್ತ್ರಿಗಳು....ನೀವೆಣಿಸಿದಷ್ಟು ಒಳ್ಳೆಯವರಲ್ಲ! ಅವರು....!" ಎಂದು ಮುಂದೆ ಹೇಳದಾದರು. ನನಗಾಗ ಎಲ್ಲವೂ ಹೊಳೆ

ಯಿತು—ಶಾಸ್ತ್ರಿಗಳು ಆಳುಮಗನಿಗೆ ಎರಡು ಸೇರು ಬತ್ತವೀಯುವಂತೆ ಅಪ್ಪಣೆ —ತಮ್ಮ ಕೈಯಿಂದಲೆ ದಿನವೊಂದಕ್ಕೆ ಒಂದು ರೂಪಾಯಿ ಇತ್ತುದು! 'ನಿಮ್ಮನ್ನು ಬಿಟ್ಟು ಎಲ್ಲಿಗೆ ಹೋಗಲಿ?' ಎಂದು ಪ್ರಶ್ನಿಸಿದೆ ಅವರನ್ನು. ಆಗ ಒಂದು ಉಪಾಯವನ್ನು ಹೇಳಿಕೊಟ್ಟರು. ಸ್ಥಳವನ್ನು ತೋರಿಸಿಕೊಟ್ಟನು, ಆ ಸಹೋದರ. ತನ್ನ ಪತ್ನಿಯನ್ನು ಬಿಟ್ಟು ಒಂದು ದಿನದ ಪ್ರಯಾಣವನ್ನು ನನ್ನೊಡನೆ ಮಾಡಿದ. ಅವನಿಗೆ ಚಿರಋಣಿ. ಭಗವಂತನೆಂದೇ ಭಾವಿಸಿರುವೆ! ಮಗುವನ್ನು ಆಶ್ರಮದ ಪಾಲುಮಾಡಿ ಪಾರಮ್ಮನ ಗುಡಿಸಲು ಸೇರಿದೆ. ಪಾರಮ್ಮನ ದಯೆಯಿಂದ ನನಗೂ ಆಶ್ರಯ ದೊರೆಯಿತು....ಅನಂತರದ ಕಥೆ ನಿಮಗೆ ತಿಳಿದದ್ದೇ!" ಎಂದು ನಿಲ್ಲಿಸಿದಳು ಸ್ವರ್ಣ.

ಮಾಧವರಾಯರು ಒಂದು ಮರದ ಗೊಂಬೆಯಂತೆ ಕೇಳುತ್ತ ಕುಳಿತಿದ್ದರು. ಮಥುರಾನಾಥರಾಯರು ಅಧೋಮುಖರಾಗಿ ಯೋಚನೆಗೊಳಗಾಗಿದ್ದರು. ಅನಂತರ ಅನುಭವಿಸಿದ ತನ್ನ ಕಷ್ಟದ ಕಥೆ ಅಲ್ಲಿ ಹೇಳುವುದು ಅಹಿತವಾದುದ ರಿಂದಲೂ ಅನವಶ್ಯವಾದುದರಿಂದಲೂ ಸ್ವರ್ಣ ತನ್ನ ಮಾತನ್ನು ಕೊನೆಗಾಣಿಸಿ ದಳು. ಸಂಜೆಯಾಯಿತು. ಮೂವರೂ ಸೇರಿ ಮನೆಯ ಕಡೆ ಹೊರಟರು. ಮಾಧವರಾಯರೂ ಮಥುರಾಥರಾಯರೂ ಮುಂದೆ ನಡೆಯುತ್ತಿದ್ದರು, ಹಿಂದಿ ನಿಂದ ಸ್ವರ್ಣ ನಡೆಯುತ್ತಿದ್ದಳು. ಆದರೆ ಮಥುರಾನಾಥರೂ ತಂದೆ-ಮಗಳನ್ನು ಒಂದೆಡೆ ನಿಲ್ಲಿಸಿ ತಾವೊಬ್ಬರೇ ಒಳಗೆ ಹೋದರು. ಹೋಗಿ, ಮಾಧವರಾಯರಿಗೆ ಸ್ವರ್ಣಳ ದರ್ಶನ ಮಾಡಿಸುವ ಮುನ್ನ ಯಾವ ರೀತಿಯ ಮಾತುಗಳನ್ನಾಡಿ ಒಮ್ಮೆಲೆ ದಿಗಿಲುಗೊಳ್ಳದಂತೆ ಮಾಡಿ ಮಗಳ ಮುಖದರ್ಶನ ಮಾಡಿಸಿದ್ದರೊ ಅದೇ ರೀತಿಯಲ್ಲಿ ಕಾವೇರಮ್ಮನನ್ನೂ ಸುಬ್ಬರಾಯರನ್ನೂ ಧೈರ್ಯಗೊಂಡಿರು ವಂತೆ ಮಾಡಿ ಸ್ವರ್ಣಳ ದರ್ಶನ ಮಾಡಿಸಿದರು. ಎಷ್ಟೇ ಧೈರ್ಯ ತಾಳಿದರೂ ಹೆಣ್ಣು ಹೆತ್ತ ಮನವಲ್ಲವೆ! ಕಾವೇರಮ್ಮ ಮಗಳನ್ನು ಕಂಡಾಕ್ಷಣ ಅಪ್ಪಿಕೊಂಡು ಗೊಳೋ ಎಂದು ಅತ್ತರು.

ಸ್ವರ್ಣ ಕಿಶೋರನನ್ನು ದಿಟ್ಟಿಸಿ ನೋಡಿ, "ತಮ್ಮಾ!" ಎಂದಳು. "ಅತ್ತಿಗೆ!" ಎಂದ ಕಿಶೋರ. ಮಥುರಾನಾಥರು ಈ ವಿಷಯವನ್ನು ಸ್ವರ್ಣಳಿಗೆ ತಿಳಿಸಲು ಮರೆತಿದ್ದರು. ಮಾಧವರಾಯರಿಗೂ ನೆನಪಾಗಿರಲಿಲ್ಲ. ಸ್ವರ್ಣ–ಕಿಶೋರರು ಮನೆಯಿಂದ ಓಡಿಹೋದುದು ಒಬ್ಬರಿಗೊಬ್ಬರು ಅರಿಯರೆಂಬುದು

ಈಗ ಎಲ್ಲರಿಗೂ ಸ್ಪಷ್ಟವಾಯಿತು. "ನಿನ್ನೊಂದಿಗೆ ಇನ್ನು ನಾಲ್ಕೈದು ಜನ ಇದ್ದರಲ್ಲ ರೈಲಿನಲ್ಲಿ, ಯಾರು ?" ಎಂದರು ಮಧುರಾನಾಥರು ಕಿಶೋರನಿಗೆ.

"ಹಾಂ! ನೀವೂ ಇದ್ದಿರೇನು ಆ ರೈಲಿನಲ್ಲಿ ?"

"ನಾನು ಮಾತ್ರವಲ್ಲ, ನಿನ್ನ ಅತ್ತಿಗೆಯೂ ಇದ್ದಳು."

ಮಗಳ ತಲೆಯನ್ನು ನೇವರಿಸುತ್ತ, ಕಪೋಲಗಳ ಮೇಲೆ ಕೈಯಾಡಿಸುತ್ತ ಎಡಗೈಯಿಂದ ವಿಜಯೆಯನ್ನಪ್ಪಿ ಹಿಡಿದಿದ್ದಳು ಸ್ವರ್ಣ. ಅನಂತ ದೂರದಲ್ಲಿದ್ದರೂ ತಾಯಿ-ಮಗಳ ಸಮ್ಮಿಲನದ ಕಡೆಗೇ ನೋಡುತ್ತಿದ್ದನು. ಮಧುರಾನಾಥರು ತಾವಿನ್ನು ಕೈಗೊಳ್ಳಲಿರುವ ಕಾರ್ಯಗಳ ವಿಷಯವಾಗಿ ಏನನ್ನೂ ಹೊರಗೆಡವಿರಲಿಲ್ಲ. ಸ್ವರ್ಣಳ ಕಣ್ಣೋಟಗಳು ವಿಜಯಳ ಮೇಲಿತ್ತೆಂದು ಭಾವಿಸುವಂತಿದ್ದರೂ ಅವಳ ದೃಷ್ಟಿ ಅನಂತನಲ್ಲಿ ನಟ್ಟಿತ್ತು. ಅನಂತ-ವಿಜಯರ ಆಂತರ್ಯವನ್ನು ಸ್ವರ್ಣ ಅರಿತವಳೆಂಬುದು ಉಳಿದವರಿಗೇನು ಗೊತ್ತು!

ಎಲ್ಲರಿಗೂ ಆಶ್ಚರ್ಯ! ಅನಂತ-ವಿಜಯರಿಗೆ ಅನಂತ ವಿಜಯವಾಗಲಿದೆ! ಮಧುರಾನಾಥ ಮತ್ತು ಸ್ವರ್ಣ ಇಬ್ಬರಿಗೇ ಈ ವಿಷಯ ಗೊತ್ತು. ಈ ವಿಷಯವನ್ನು ಅನಂತನಿಗೆ ಹೇಳಿ, ಶಾಂತಚಿತ್ತನನ್ನಾಗಿ ಮಾಡಲೆ, ಎನಿಸಿತು ಸ್ವರ್ಣಳಿಗೆ.

ಹನ್ನೆರಡು ಘಂಟೆ ಕಳೆದುಹೋಗಿತ್ತು. ಇನ್ನು ಆ ಮಾತೇಕೆ ಎಂದುಕೊಂಡು ಮಧುರಾನಾಥರು ತಮ್ಮೆದೆಯಲ್ಲಿ ಕುದಿಯುತ್ತಿದ್ದ ಆ ಸಂಗತಿಯನ್ನು ತಣಿಸಿದರು. ಮಾಧವರಾಯರು ಮಧುರಾನಾಥರಾಯರಿಗೆ ಕೈಕಾಲು ತೊಳೆಯಲು ನೀರು ತಂದಿಟ್ಟು, "ಏಳಿ" ಎಂದರು. ಊಟವಾಗಿ ಏಳುವಾಗ ಗಡಿಯಾರ ಒಂದು ಹೊಡೆಯಿತು. ಇನ್ನು ಮಾತಾಡಿದರೆ ನಿದ್ದೆ ಬರುವುದಿಲ್ಲವೆಂದು ತಮ್ಮ ತಮ್ಮ ಹಾಸಿಗೆ ಬಿಡಿಸಿ ಮಲಗಿದರು ಗಂಡಸರು. ಕಾವೇರಮ್ಮ, ಸ್ವರ್ಣ, ವಿಜಯೆ ಇವರಿಗೆ ನಿದ್ದೆ ಇನ್ನೂ ಬಂದಿರಲಿಲ್ಲ. ತಮ್ಮ ಹೊಟ್ಟೆಯುರಿಯನ್ನು, ದುಃಖಸಂತಾಪಗಳನ್ನು ತಣಿಸಿಕೊಳ್ಳುತ್ತಿದ್ದವರ ಮಧ್ಯೆ ನಿದ್ರೆ ಸುಳಿಯುವುದು ಸಾಧ್ಯವಿರಲಿಲ್ಲ. ಮಗಳ ಕಥೆಯನ್ನು ಕೇಳುತ್ತ ಕಾವೇರಮ್ಮನ ಕಣ್ಣುಗಳಿಂದ ಕಂಬನಿ ಧಾರೆಧಾರೆಯಾಗಿ ಸುರಿಯುತ್ತಿತ್ತು. ತಾಯಿಯ ಸಮೀಪದಲ್ಲಿ ಮಲಗಿದ್ದ ವಿಜಯೆ ಆಶ್ಚರ್ಯಚಕಿತಳಾಗಿ ಆ ಮಾತುಗಳನ್ನು ಕೇಳುತ್ತಿದ್ದಳು. ಅವುಗಳಲ್ಲಿ ಕೆಲವು ಅವಳಿಗೆ ಅರ್ಥವೇ ಆಗಲೊಲ್ಲವು!

ಮಾತಾಡುತ್ತಿದ್ದಂತೆ ರಾತ್ರಿ ಕಳೆದು ಕೋಳಿ ಕೂಗಿದ ದನಿ ಕೇಳಿ ಕಾವೇರಮ್ಮನಿಗೆ ಆಶ್ಚರ್ಯವಾಯಿತು! ಸ್ವರ್ಣ ತಾನೇ ಎಲ್ಲ ಕಾರ್ಯವನ್ನೂ ಮಾಡಿದಳು. ಒಂಬತ್ತು ಘಂಟೆಯೊಳಗಾಗಿ ಕಾಫಿ ಫಲಾಹಾರ ಮುಗಿದು ಅನಂತನು ಆ ದಿನ ಕಾಲೇಜಿಗೆ ಹೊರಟುಬಿಟ್ಟಿದ್ದನು. ಅವನ ಮುಖದಲ್ಲಿ ಸಂತೋಷದ ಕಳೆಯಿತ್ತು. ವಿಜಯಳಿಗೆ ಅನಂತನೊಡನೆ ಏಕಾಂತವಾಗಿ ಮಾತಾಡಲು ಸಂದರ್ಭ ದೊರೆಯದ್ದರಿಂದ ಸ್ವಲ್ಪ ಅಸಂತೋಷ. ಅನಂತನ ಮನಸ್ಸು ನೊಂದಿರಬಹುದು ಎಂಬ ಚಿಂತೆ ಬೇರೆ. ಆದರೂ ತಾಯಿಯ ಸಾಮೀಪ್ಯವೂ ಅವಳ ಮಧುರ ಮಾತುಗಳೂ ಅವಳ ಹೃದಯವನ್ನು ಅರಳಿಸುತ್ತಿದ್ದವು. ಸ್ವರ್ಣ ಅನಂತನಿಗೆ ಸುದ್ದಿ ತಿಳಿಸಿಬಿಟ್ಟಿದ್ದಳು!

ಪ್ರಕಾಶ ಆಫೀಸಿಗೆ ಹೊರಟುಹೋಗಿದ್ದನು. ಕಿಶೋರ ವಾಚನಾಲಯಕ್ಕೆಂದು ತೆರಳಿದ್ದನು. ಮಥುರಾನಾಥರಾಯರು ವಿಜಯಳನ್ನು ಹೊರಗೆ ಎಲ್ಲಿಗಾದರೂ ಕರೆದೊಯ್ಯುವಂತೆ ಕಾವೇರಮ್ಮನಿಗೆ ತಿಳಿಸಿದರು. ಕಾರಣವರಿಯದ ಕಾವೇರಮ್ಮ ಚಡಪಡಿಸಿದರಾದರೂ ಸ್ವರ್ಣಳಿಗೆ ಈ ಮಾತು ಹೇಳಲು ಅವಳು ಒಲವಿನಿಂದ ಮಗಳನ್ನು ನೆರಮನೆ ಸಿಂಗಮ್ಮನಲ್ಲಿಗೆ ಕರೆದೊಯ್ದಳು. ಹೊರಗೆ ಏನು ಮಾತಾಡುತ್ತಿರುವರೆಂಬುದನ್ನು ಕೇಳಿ ತನಗೆ ತಿಳಿಸುವಂತೆ ಕಾವೇರಮ್ಮನನ್ನು ಜಗಲಿಗೆ ಕಳುಹಿದಳು ಸ್ವರ್ಣ. ಚಿತ್ತವಿಕಾರದಿಂದ ಕೂಡಿದವರಾಗಿದ್ದರೂ ಕಾವೇರಮ್ಮನಿಗೆ ಮಗಳ ಮಾತು ಕೇಳಿ ಸಮಾಧಾನವಾಯಿತು. ವಿಜಯೆಯನ್ನು ತೇಜಪಾಲನಿಗೆ ಎಲ್ಲಿ ಬೇಡವೆಂದು ಬಿಡುವರೊ ಎಂಬ ವ್ಯಾಕುಲ ಕಾವೇರಮ್ಮನಿಗೆ—ಏಕೆಂದರೆ ಸ್ವರ್ಣ ಮೈದುನನೊಂದಿಗೆ ಓಡಿಹೋಗಿದ್ದವಳು ಎಂಬ ಸೊಲ್ಲು ಊರೆಲ್ಲಾ ಹರಡಿತ್ತು. ಲೋಕದೊಳಗೆ ಒಳ್ಳೆ ವಿಷಯವೇನಾದರೂ ಹರಡಿದ್ದರೆ ಅದನ್ನು ಮರೆಮಾಡಿ ಕೆಟ್ಟದ್ದನ್ನು ಹರಡಿಸುವುದು ಸುಲಭ; ಆದರೆ ಕೆಟ್ಟ ವಿಷಯವೊಂದು ಲೋಕದೊಳಗೆ ಹರಡಿದ್ದಲ್ಲಿ ಅದನ್ನು ಮರೆಮಾಡಿ ಒಳ್ಳೆಯದನ್ನು ಹರಡುವುದು ಕಷ್ಟ, ಈ ಪ್ರಪಂಚದಲ್ಲಿ. ಕಾವೇರಮ್ಮ ಮಾತು ನಡೆದಲ್ಲಿಗೆ ಬಂದಾಗ ಅವರು ಮಾತೆಲ್ಲವನ್ನೂ ಆಡಿ ಮುಗಿಸಿದ್ದರು. ಮಾಧವರಾಯರು ತಮ್ಮ ಹೆಂಡತಿ ಆಗಷ್ಟೆ ಅಲ್ಲಿಗೆ ಬಂದುದನ್ನು ನೋಡಿ ನಡೆದುದೇನೂ ಅವಳಿಗೆ ತಿಳಿದಿರಲಿಕ್ಕಿಲ್ಲವೆಂದು ಎದ್ದು ಒಳಗೆ ಹೋದರು.

"ಏನು ಮಾತು?"

" ನೀನೆಲ್ಲಿ ಹೋಗಿದ್ದೆ ? ನಮ್ಮ ವಿಜಯೆಗೆ ಅನುವಾದ ವರ ದೊರೆತಿದ್ದಾನೆ ! "

" ಹುಂ, ಇದನ್ನೆ ! ಇಷ್ಟು ವಿಚಿತ್ರ ಮಾಡಿಕೊಂಡು ಬಂದಿರಾ ನನಗೆ ಹೇಳೋಕೆ ? ಯಾರಿಗೂ ತಿಳಿದಿಲ್ಲ ಅಂತ ನಿಮ್ಮ ಕಲ್ಪನೆಯೊ ? "

" ಅಯ್ಯೋ ಮರುಳೆ, ಆ ವರ ಅಲ್ಲ ಈಗ; ಈಗ ಸಿಕ್ಕಿರೋ ವರ—ದೇವರ ವರ ! "

" ಹೇಳೋದಾದರೆ ಬೇಗ ಹೇಳಿ. ದ್ರಾವಿಡ ಪ್ರಾಣಾಯಾಮ ಯಾಕೆ ಮಾಡ್ತೀರಿ ? "

" ವಿಜಯಳನ್ನ ಅನಂತನಿಗೆ ತೊಗೋತಾರಂತೆ."

" ಅಯ್ಯೋ ! ಇದೇನು ? ಹಾಗಾದರೆ ತೇಜಪಾಲನಿಗೆ ? "

" ಅವನಿಗೆ ಆಗಲೇ ಆಗಿಬಿಟ್ಟದೆ ಮದುವೆ."

" ಯಾವಾಗ ? "

"ಅದನ್ನೆಲ್ಲಾ ಹೇಳೋದಕ್ಕೆ ಈಗ ವೇಳೆ ಇಲ್ಲ. ಎಲ್ಲಿ ಆ ಚೀಲ ಕೊಡು."

" ಏನೋ ಎಲ್ಲಾ ವಿಚಿತ್ರ ಕಾಣುತ್ತೆ ನನಗೆ."

" ವಿಚಿತ್ರ ಏನು ಬಂತು ಇದರಲ್ಲಿ ? ವರಾ-ವಧು ಮಂಟಪದಾಗ ಕೂತ್ಕೊಂಡಿದ್ದರೂ ಎಷ್ಟೋ ಸಲ ಮದುವೆ ತಪ್ಪಿ ಹೋಗೋದಿಲ್ವೆ ? "

" ಹುಡುಗ ಇನ್ನೂ ಕಲೀತಾ ಇದ್ದಾನೆ ; ಮದುವೆ ಈಗ ಬೇಡ ಅಂದರೆ ?"

" ಬೇಡ ಅಂದರೆ ಅದೇ ಮುಹೂರ್ತಕ್ಕೆ ನಿನಗೇ ಮದುವೆ ಮಾಡೋಣ. ವರ ಹೇಗೂ ನಾನೇ ಇದ್ದೇನೆ ! "

" ಅಯ್ಯೋ ! ಇಷ್ಟು ಪ್ರಾಯವಾಯ್ತು, ಇನ್ನೂ ಆಟ ! ಕೇಳಿದ್ದಕ್ಕೆ ಉತ್ತರ ಹೇಳೋದಲ್ಲ, ಕುತರ್ಕ ಮಾಡೋದು."

" ಅದೆಲ್ಲಾ ನೀನು ವಿಚಾರಿಸೋದು ಬೇಡ. ನಿನಗೆ ಅದನ್ನೆಲ್ಲ ಹೇಳಿದೆ ಅಂದರೆ ನೀನು ಊರೆಲ್ಲಾ ಹರಡತಿ."

" ನೀವು ಬಹಳ ಒಳ್ಳೆಯವರಷ್ಟೆ ! " ಎಂದು ಕಾವೇರಮ್ಮ ಒಳಗೆ ಹೋದರು.

ಮನಸ್ಸಿನೊಳಗೊಂದು ಹೊರಗೊಂದು ಇಟ್ಟು ಮಾತನಾಡುವ ಬುದ್ಧಿ ಕಾವೇರಮ್ಮನಿಗೆ ಇಲ್ಲವೆಂದು ಮಾಧವರಾಯರಿಗೆ ಚೆನ್ನಾಗಿ ಗೊತ್ತು. ಆದರೆ

ಎಲ್ಲಾ ಸಂದರ್ಭದಲ್ಲಿಯೂ ಆ ರೀತಿಯಾದರೆ ವಿಪರೀತಕ್ಕಿಡುವುದಲ್ಲವೆ? 'ಎಲ್ಲಿ ಹೇಗೆ ಬೇಕೊ ಹಾಗೆ! ಎಲ್ಲಿ ಎಷ್ಟು ಬೇಕೊ ಅಷ್ಟು!' ಎಂಬಂತಿರ ಬೇಕಲ್ಲವೆ ಲೋಕವ್ಯವಹಾರಗಳು. ಅದು ಕಾವೇರಮ್ಮನಿಗೆ ಗೊತ್ತಿಲ್ಲ— ಯಾರು ಬಂದರೂ ಅವರಿಗೆ ವೀಳ್ಯ ಕೊಟ್ಟು, ತಾವೂ ಕೂತುಕೊಂಡು, ಆದದ್ದು ಹೋದದ್ದು, ಅಜ್ಜಿ ನೆರದದ್ದು, ಅವಳಿಗೆ ಮದುವೆಯಾದದ್ದು....ಎಂದು ಸುರು ಮಾಡುತ್ತಾರೆ. ಅಂತೂ ಯಾರಾದರೂ ಮಾತನಾಡುವುದಕ್ಕೆ ಸಿಕ್ಕಿದರೆ ಸರಿ. ಮಾಧವರಾಯರಿಗೆ ಈ ವಿಷಯ ತಿಳಿದುದರಿಂದ ತಮ್ಮ ಹೆಂಡತಿಯಿಂದ ಗುಟ್ಟು ಉಳಿಯಲಾರದೆಂದರಿತು ಗೂಢವಾದ ವಿಚಾರಗಳನ್ನು ಪತ್ನಿಯ ಮುಂದೆ ಇಡುತ್ತಿರಲಿಲ್ಲ. ಪ್ರಕೃತದಲ್ಲಿ ಮಾಧವರಾಯರು ಪತ್ನಿಯಿಂದ ಬಚ್ಚಿಟ್ಟ ವಿಷಯ ವೆಂದರೆ ಅನಂತ ವಿಜಯೆಗೆ ಬರೆದಿದ್ದ ಪತ್ರವನ್ನು ಮಥುರಾನಾಥರು ತೋರಿ ಸಿದ್ದುದು. ಈ ವಿಷಯ ತಿಳಿದರೆ ಕಾವೇರಮ್ಮ ಎಲ್ಲರಿಗೂ ಹೇಳುವರೆಂಬುದನ್ನು ಮಾಧವರಾಯರು ಚೆನ್ನಾಗಿ ತಿಳಿದಿದ್ದರು.

ಇಡಿ ರಾತ್ರಿ ಸ್ವರ್ಣ ಕಾವೇರಮ್ಮನಿಗೆ ತನ್ನ ಕಥೆಯನ್ನೇ ಹೇಳಿದ್ದಳು ವಿನಃ ಅನಂತ ವಿಜಯರ ವಿಷಯವನ್ನೇನೂ ಹೇಳಿರಲಿಲ್ಲ.

* * * *

" ಅನಂತನೆಂದರೆ ನಿಮ್ಮ ಮಗನೆ, ಅತ್ತಿಗೆ?"

" ಹೌದಮ್ಮ; ಏಕೆ? ನೀನು ನೋಡಿದ್ದೀಯಾ?"

" ಹೌದು. ನಾನು ಹನ್ನೊಂದನೆ ಕ್ಲಾಸಿನಲ್ಲಿದ್ದಾಗ ಅನಂತ ಒಂಬತ್ತನೆ ಕ್ಲಾಸಿನಲ್ಲಿದ್ದ."

" ಸರಿ, ಹಾಗಾದರೆ ಒಳಿತೇ ಆಯ್ತು. ಮತ್ತೆ, ಸ್ವರ್ಣಳ ಗುರುತು ಹೇಗೆ ನಿನಗೆ?"

" ಮಂಗಳೂರಿನಲ್ಲಿ ನಾನು ಶಾಲೆಗೆ ಹೋಗುತ್ತಿದ್ದಾಗ....ಐದನೇ ತರಗತಿ ಯಲ್ಲಿದ್ದೆ, ಸ್ವರ್ಣ ಎಂಟನೆ ತರಗತಿಯಲ್ಲಿದ್ದಳು!"

" ಆಮೇಲೆ?"

" ಆಮೇಲೆ ಸ್ವರ್ಣಳಿಗೆ ಮದುವೆಯಾಯಿತು, ನೆನಪಿದೆ. ನಾವು ಕಾರ ಣಾಂತರಗಳಿಂದ ಊರು ಬಿಡಬೇಕಾಯಿತು. ಬಿಟ್ಟು ಬ್ರಹ್ಮಾವರ ಸೇರಿದೆವು...."

ಹೀಗೆ ಪದ್ಮಮ್ಮನೂ ಮೋಹಿನಿಯೂ ಮಾತಾಡಿಕೊಂಡು ತನ್ನ ಜೀವನ

ಚರಿತ್ರೆಯ ಸಾರಾಂಶವನ್ನು ಪದ್ಮಮ್ಮನಿಗೆ ಮೋಹಿನಿ ಹೇಳಿದಳು. ಪದ್ಮಮ್ಮನಿಗೆ ಆಗ ' ಛಿ !.... ಹೀಗೂ ಇದೆಯೆ ಪ್ರಪಂಚ !.... ಏನಿದು ಲೋಕ !...." ಎಂದು ತೋರಿತು.

ಮೋಹಿನಿ ಪೂರ್ಣ ಗುಣ ಹೊಂದಿದ್ದಳು. ನಾದಿನಿಯರಿಬ್ಬರೂ ಸಂತೋಷ ದಿಂದ ದಿನಗಳೆಯಲಾರಂಭಿಸಿದರು, ಮುದ್ದು ರಂಗನಾಥನೊಂದಿಗೆ. ಆದರೆ ತಾನೂ ಪತಿಯೊಂದಿಗೆ ಹೋಗಿ ಅಲ್ಲಿನ ಸುಖ ಸಂತೋಷಗಳಲ್ಲಿ ಭಾಗಿಯಾಗ ಲಿಲ್ಲವಲ್ಲಾ ಎಂಬ ಬೇಸರವೂ, ಎರಡನೆಯದಾಗಿ ಅನಂತನನ್ನು ನೋಡ ಬೇಕೆಂದಿದ್ದ ಮನಸ್ಸು ಯಾವಾಗಲೂ ಪದ್ಮಮ್ಮನನ್ನು ತುಸು ಭಗ್ನಮಾಡುತ್ತಿತ್ತು. ಕ್ಷಣಾರ್ಧದಲ್ಲಿ ನಡೆದುಹೋದ ಮತ್ತು ನಡೆಯಲಿರುವ ವಿಷಯಗಳ ಕುರಿತು ಪದ್ಮಮ್ಮ ಕೌತುಕ ಪಡುತ್ತಿದ್ದರು. ತಂತಿಯವನು ಹೊರಗಿನಿಂದ " ಅಮ್ಮಾ, ತಾರು " ಎನಲು ಪದ್ಮಮ್ಮ ಮೋಹಿನಿಯನ್ನು ಕರೆದರು. ಪದ್ಮಮ್ಮನ ಎದೆ ಡವಡವ ಬಡಿದುಕೊಳ್ಳುತ್ತಿತ್ತು ! ಮೋಹಿನಿ ಆ ತಾರನ್ನು ಇಸುಕೊಂಡು " ನಾಳೆ ಮುಂಜಾನೆ ಹೊರಟು ಸಂಜೆ ತಲಪುವರು " ಎಂದು ಓದಿ ತಿಳಿಸಿದಳು.

" ಎಲ್ಲರೂ ಕೂಡಿಕೊಂಡು ಬರುವರೆ ? "

" ಮತ್ತೆ ! "

ಗಂಡನ ಪ್ರವಾಸ ಫಲಕಾರಿಯಾಯಿತೆಂದು ತಾರಿನಿಂದ ಕಂಡುಕೊಂಡ ಪದ್ಮಮ್ಮ ಸಂತೋಷಚಿತ್ತರಾದರು.

* * * *

ಮಾಧವರಾಯರ ಮನೆಯಲ್ಲಿ ಅಂದು ಗೊಂದಲ. ಎಲ್ಲರೂ ಮಥುರಾನಾಥ ರಾಯರು ಕರೆದಲ್ಲಿ ತೆರಳಲು ಸಿದ್ಧರಾಗಿದ್ದಾರೆ. ಕಾವೇರಮ್ಮ ನೆರಮನೆಯ ಸಿಂಗಮ್ಮನಿಗೂ ಅವಳ ಗಂಡನಿಗೂ ತಮ್ಮ ಮನೆಯ ಕಡೆ ಗಮನವಿಡುವಂತೆ ಎಚ್ಚರ ಕೊಟ್ಟು ಲಗುಬಗೆಯಿಂದ ತೆರಳಿದರು—ಮುಂದೆ ನಡೆಯುತ್ತಿದ್ದವರ ಬೆನ್ನು ಹಿಡಿಯಲು.

ಸುಬ್ಬರಾಯರಿಗೆ ತೃಪ್ತಿಯಿಲ್ಲ ; ಮನಸ್ಸಿನೊಳಗೆ ಒಂದು ಚಿಂತೆ. ಹೆರವ ರೊಡನೆ ಹೇಳೋಣವೆಂದರೆ—ಯಾರೊಡನೆ ? ತಾವೇ ಮಾಡಬೇಕಾದ ಕಾರ್ಯ. ಕಾಲವಶವಾದನೆಂದರಿತಿದ್ದ ಮಗನು ಇಂದು ಪ್ರತ್ಯಕ್ಷನಾಗಿದ್ದಾನೆ. ಅನಂತ-ವಿಜಯರ ವಿವಾಹದೊಂದಿಗೆ ಕಿಶೋರನಿಗೂ ಒಂದು ಲಗ್ನಮಾಡಿಬಿಡಬೇಕೆಂಬ

ಆಸೆ ಹಂಬಲ ಅವರಿಗೆ. ಅಲ್ಲದೆ ತಾವಿನ್ನು ಉಳಿದರೂ ಎಷ್ಟು ಕಾಲ? ಸ್ವರ್ಣ ಳನ್ನೂ ಆ ಚಿಂತೆ ಬಾಧಿಸದಿಲ್ಲ. ಕಿಶೋರನಾದರೂ ತನಗೆ ವಿವಾಹವೇ ಬೇಡ ಎಂದು ಪ್ರಕಾಶನೊಂದಿಗೆ ಹೇಳಿದ್ದುದು ಸ್ವರ್ಣಳಿಗೆ ತಿಳಿದಿತ್ತು. ಆದರೂ ಕಿಶೋರ ಉದ್ಯೋಗ ಹುಡುಕುತ್ತಿದ್ದನಾದ್ದರಿಂದ ಮದುವೆ ಮಾಡಿಕೊಳ್ಳ ಬೇಕೆಂಬ ಕಲ್ಪನೆ ಅವನ ಮನಸ್ಸಿನಲ್ಲಿರಬಹುದೆಂದು ಅಣ್ಣನಿಂದ ಸ್ವರ್ಣ ಅರಿತಿದ್ದಳು. ಆದ್ದರಿಂದ ಈ ಕಾರ್ಯವೊಂದು ನಡೆದು ಹೋಗಲಿ, ಮತ್ತೆ ನೋಡೋಣ ಎಂದಿದ್ದುಬಿಟ್ಟಳು. ಕಿಶೋರನಿಗೆ ಉದ್ಯೋಗದ ಆವಶ್ಯಕತೆ ಯೇನೂ ಇರಲಿಲ್ಲ. ಸುಮ್ಮನೆ ಕಾಲಿನ ಮೇಲೆ ಕಾಲು ಹಾಕಿ ಕೂತರೂ ಸಾಯುವವರೆಗೆ ತಿಂದರೂ ತೀರದಷ್ಟು ಆಸ್ತಿಯಿದೆ ಹುಣಸೂರಿನಲ್ಲಿ. ಅಂದ ಮೇಲೆ ಕಿಶೋರನಿಗೆ—ಅನ್ಯರ ಮನೆಯಲ್ಲಿ ವಿವಾಹವಾಗಬೇಕೆಂಬ ಅಗತ್ಯ ವಾದರೂ ಏನು? ಜನ ಏನಾದರೂ ಅಂದುಕೊಂಡರೆ? ಕಿಶೋರನಿಗೆ ಮುಂದಕ್ಕೆ ಗೌರವಕ್ಕೆ ಕೊರತೆಯಲ್ಲವೆ? ದೊಡ್ಡ ಹುಣಸೂರು ಗ್ರಾಮಕ್ಕೇ ಅಧಿಕಾರಿಯಾಗಿ ಬಾಳಿದರೇನು, ಕಡೆಗೆ ಯಾರ ಖರ್ಚಿನಲ್ಲಿಯೊ ಬೇರೆಯವರ ಮನೆಬಾಗಿಲಲ್ಲಿ ಮಗನಿಗೆ ಲಗ್ನ ಮಾಡಿಸಿಕೊಂಡು ಬಂದರು ಎಂಬ ಅಪಖ್ಯಾತಿ ಬೇರೆ ಸುಬ್ಬರಾಯರಿಗೆ! 'ನನ್ನ ಮಗಳ ಹಣೆಯಲ್ಲಿ ಹಾಗೆ ಬರೆದಿದ್ದರೆ ನಾನೇನು ಮಾಡಲಿ?' ಎಂದು ಯೋಚಿಸುತ್ತಿದ್ದ ಸ್ವರ್ಣಳಿಗೆ ತಾನೇನನ್ನು ಗಣಿಸುತ್ತಿರುವೆನೆಂಬುದು ತಿಳಿಯದಾಯಿತು.

ಸ್ವರ್ಣ ಮನೆಯನ್ನು ತಲಪಿದ ಕೂಡಲೆ ಮೋಹಿನಿಯ ಕೈಯಿಂದ ಮಗು ವನ್ನು ಹಿಡಿದೆಳೆದುಕೊಂಡಳು. ರಾತ್ರಿ ಕಳೆದು ಬೆಳಗಾಯಿತು. ಸುಬ್ಬರಾಯರಿ ಗಾಗ ಅನಂತ-ವಿಜಯರ ಜಾತಕ ಹೇಗಿದೆ ಎಂಬುದನ್ನು ಅರಿಯಬೇಕಾಗಿತ್ತು. ಇದನ್ನವರು ಮಾಧವರಾಯರಿಗೆ ವ್ಯಕ್ತಪಡಿಸಿದರು. ಈ ಸುದ್ದಿ ಮಥುರಾ ನಾಥರ ಕಿವಿಗೆ ಮುಟ್ಟಲು ಅವರು ನಕ್ಕು "ಇಬ್ಬರ ಮನಸ್ಸೂ ಕೂಡಿದಮೇಲೆ ಇನ್ನಾವ ಜಾತಕದ ಆವಶ್ಯಕತೆ? ಛೇಷಾಗಿದೆ ನಿಮ್ಮ ವಿಚಾರ!" ಎಂದರು. ಸುಬ್ಬರಾಯರಿಗೆ ಆ ಮಾತಿನಿಂದ ತೃಪ್ತಿಯೆಲ್ಲಿಂದಾಗಬೇಕು? ಹೆಸರಿಗಾದರೂ ನೋಡಿ ಬಿಡೋಣ ಎಂದರವರು! ಅಲ್ಲಿನ ಜ್ಯೋತಿಷ್ಕನೊಬ್ಬನನ್ನು ಕರೆಸಿದರು. ಹುಡುಗನ ಹೆಸರು ಅನಂತ, ಹುಡುಗಿಯ ಹೆಸರು ವಿಜಯ ಎಂದು ಕೇಳಲು, ಜ್ಯೋತಿಷ್ಕನು "ಜಾತಕ ನೋಡುವ ಆವಶ್ಯಕತೆ ಇಲ್ಲ, ಅನಂತ-ವಿಜಯ

ಇಂಥಾ ಹೆಸರು ದೊರಕಬೇಕಾದರೆ ಪುಣ್ಯ ಮಾಡಬೇಕು, ಸ್ವಾಮಿ. ಕೊಡಲಿ ಹಾಕಿದರೂ ಬೇರೆಯಾಗದು, ಈ ಮದುವೆ. ಏನೂ ಯೋಚನೆ ಮಾಡದೆ ನೆರವೇರಿಸಿ........" ಎಂದನು. ಸ್ವಲ್ಪ ಹೊತ್ತು ಜ್ಯೋತಿಷ್ಯ ಶಾಸ್ತ್ರದ ಕುರಿತು ಸುಬ್ಬರಾಯರೊಂದಿಗೆ ಮಾತಾಡುತ್ತ ತನ್ನ ದಕ್ಷಿಣೆ ಸ್ವೀಕಾರ ಮಾಡಿ ಎಲ್ಲರಿಗೂ ಅಭಿವಂದಿಸಿ ತೆರಳಿದ. ಮಧುರಾನಾಥರು ಅವನಿಗೆ ವಂದಿಸಿ "ಹೇಗೆ ನನ್ನ ಮಾತು ?" ಎಂದರು ಸುಬ್ಬರಾಯರಿಗೆ.

೨೮

ಮಂಗಳ ಕಾರ್ಯ ! ಅದರಲ್ಲೂ ಮಧುರಾನಾಥರಾಯರ ಮನೆಯಲ್ಲಿ ! ಅವರ ಮಹಾ ಭವನದಲ್ಲಿ ಎಳ್ಳೆಸೆದರೂ ಕೆಳಗೆ ಬೀಳದಷ್ಟು ಜನ ತುಂಬಿದೆ. ಚಪ್ಪರವೂ ಅದರೊಳಗಿನ ಮಂಟಪವೂ ಬಹು ರಮ್ಯ ರೀತಿಯಲ್ಲಿ ನಿರ್ಮಾಣ ವಾಗಿವೆ. ಆ ದಾರಿಯಾಗಿ ನಡೆಯುತ್ತಿದ್ದ ಜನ ಸ್ವಲ್ಪ ಹೊತ್ತು ನಿಂತು ಅದರ ಅಂದಚೆಂದಗಳನ್ನು ನೋಡಿ ಹಿಗ್ಗಿ ಹೋಗುತ್ತಿದ್ದರು. ವಧುವಿಗೆ ತಾಯಿತಂದೆ ಗಳಾಗಿ ತೇಜಪಾಲ ಮೋಹಿನಿಯರೇ ಸಿದ್ಧರಾದರು. ಆಗ ಸ್ವರ್ಣಳ ಹೃದಯದಲ್ಲಿ ಸುಖದುಃಖಗಳ ಸಮ್ಮಿಲನಗಳಾದವು. ಇನ್ನೇನೇನು ಆಗಲಿದೆಯೊ ? ಎಂಬ ಸಮಸ್ಯೆ. ಜೊತೆಗೆ, ಪತಿಯಿರುತ್ತಿದ್ದರೆ ! ಎಂಬ ಚಿಂತೆ ಅವಳಿಗೆ. ಆದರೆ ತನ್ನ ಬಯಕೆಯೊಂದು ದೈವದೊಲುಮೆಯಿಂದ ತಾನಾಗಿ ನೆರವೇರುತ್ತಿರುವುದನ್ನು ಕಂಡು ವಿಶೇಷವಾದೊಂದು ಆನಂದವಾಯಿತು.

ಅನಂತ–ವಿಜಯರು ತಮ್ಮ ಇಚ್ಛೆಯನ್ನು ಪರಮಾತ್ಮನು ಸುಮಾರ್ಗದಲ್ಲಿ ಈಡೇರಿಸುತ್ತಿರುವುದನ್ನು ನೆನೆದು ಪರಮ ಹರ್ಷದಿಂದಿದ್ದರು, ಭವಣೆ ನೀಗಿತೆಂದು ಅವರ ಮನಸ್ಸು ನಲಿದಾಡಿತು ; ಹೃದಯವು ಅರಳಿತು.

ವಿಜಯೆಯನ್ನು ಮಧ್ಯದಲ್ಲಿರಿಸಿ ಸುತ್ತಮುತ್ತಲೂ ತರುಣಿಯರನೇಕರು ಕುಳಿತು ಗೇಲಿಮಾತುಗಳಿಂದ ಅವಳನ್ನು ಅಣಕಿಸಲಾರಂಭಿಸಿದ್ದರು. ಅವಳ ಬಾಲ್ಯಸ್ನೇಹಿತೆ ಸರಸ್ವತಿಯೂ ಬಂದಿದ್ದಳು. ಮೋಹಿನಿ–ಸರಸ್ವತಿಯರೆ ವಿಜಯೆಯನ್ನು ಶೃಂಗರಿಸುವ ಕಾರ್ಯವನ್ನು ಅತ್ಯಾನಂದದಿಂದ ಕೈಗೊಂಡಿದ್ದರು. ಸ್ವರ್ಣ ಅನತಿ ದೂರದಲ್ಲಿ ನಿಂತು ಅಲಂಕೃತಳಾದ ಮಗಳ ಚೆಲುವನ್ನು ಕಂಡು ಆನಂದ ಬಾಷ್ಪ ಉದುರಿಸಿದಳು. ಅವಳ ಹೃದಯದಲ್ಲಿನ ಬಯಕೆ ಈಡೇರಿತು. ಬಾಳುವೆಯ ಮಡಿಲಲ್ಲಿ ಸಂತಸದ ಸವಿಯನ್ನೇ ಕಂಡವಳಲ್ಲ, ಸ್ವರ್ಣ. ಅಂತಹ

ವಳಿಗೆ ಈ ಸಂಭ್ರಮವು ಬ್ರಹ್ಮಾನಂದವನ್ನು ಕೊಟ್ಟಿತು. ಅವಳ ಆತ್ಮಕ್ಕೆ ಶಾಂತಿ ದೊರೆಯಿತು.

ಸಮಯವಾದ ಕೂಡಲೆ ಗಣೇಶ ಶಾಸ್ತ್ರಿಗಳು ವಧುವನ್ನು ಕರೆತರಲು ಮಥುರಾನಾಥರಿಗೆ ತಿಳಿಸಲು ಮೋಹಿನಿಯೂ ಸರಸ್ವತಿಯೂ ಕೂಡಿ ವಧುವನ್ನು ಮಂಟಪಕ್ಕೆ ಕರೆತಂದರು. ಅನಂತ ಬಂದು ಆಗಲೆ ಆಸನದಲ್ಲಿ ಸಿದ್ಧನಾಗಿದ್ದನು. "ಮೋಹಿನಿ, ಅಗೊ ಮಗು ಅಳುತ್ತಿದೆ ನೋಡು; ಸ್ವಲ್ಪ ಹೊಟ್ಟೆಗೆ ಕೊಟ್ಟು ಹೋಗು" ಎಂದು ಪದ್ಮಮ್ಮ ಕೂಗಿದುದನ್ನು ಕೇಳಿ ಮೋಹಿನಿ ಗೋಣು ಮುರಿದಳು. ಹೇಳತೀರದ ಸಿಟ್ಟು ಅವಳಿಗೆ. ನಿರ್ವಾಹವಿಲ್ಲದೆ ಹೋಗಿ ಮಗುವಿಗೆ ಮೊಲೆಯುಣಿಸಿ ಅಲ್ಲಿದ್ದೊಂದು ಮುದುಕಿಯ ಕೈಗೆ ಮಗುವನ್ನೊಪ್ಪಿಸಿ ಹೊರ ಬಂದಳು. ಎಲ್ಲರೂ ವೇಷಭೂಷಣಗಳಿಂದ ಸಜ್ಜಾಗಿ ಜಗಲಿ ಚಪ್ಪರಗಳಲ್ಲಿ ತುಂಬಿದ್ದರು. ತಲೆಬಾಗಿ ಕುಳಿತಿದ್ದ ವಿಜಯೆಯ ಕಣ್ಣುಗಳಲ್ಲಿ ನೀರು ನೋಡಿ ಸರಸ್ವತಿ ತನ್ನ ಕರವಸ್ತ್ರದಿಂದ ಉಜ್ಜಿದಳು. ತನ್ನ ತಾಯಿಯ ಸಾಮೀಪ್ಯ ಇಷ್ಟು ಬೇಗ ಕಳೆಯುವುದಲ್ಲ—ಎಂಬ ಚಿಂತೆ.

ಮಂಗಳಸೂತ್ರ ಮದುಮಗಳ ಕತ್ತನ್ನಲಂಕರಿಸಿತು. ಎಲ್ಲರೂ ವಧೂವರರಿಗೆ ಅಕ್ಷತೆ ಹಾಕಿದರು. ಸ್ವಬಂಧುಗಳ ಪಾದನಮಸ್ಕಾರವಾಯಿತು. ಮಥುರಾನಾಥರು ಅತಿಥಿಗಳಿಗೂ ನಮಸ್ಕರಿಸಲು ಹೇಳಿದರು.

ವಿಜಯಳ ಕೊರಳಲ್ಲಿ ಅನಂತ ಮಾಂಗಲ್ಯಮಣಿ ಕಟ್ಟಲು ಹುಟ್ಟು ಕುರುಡನಿಗೆ ಕಣ್ಣು ಬಂದಂತಾಯಿತು ಸ್ವರ್ಣಳಿಗೆ. ಕಷ್ಟಗಳನ್ನು ಅನುಭವಿಸಿ ದವಳಾದರೂ ಪರಮಾತ್ಮನಿತ್ತ 'ವಿಜಯ' ಯೋಗ್ಯರ ಕೈಸೇರಿಸಿದಳು. ಇನ್ನು ತನ್ನ ಕೆಲಸ ಮುಗಿಯಿತೆಂದಳು.

ಸ್ವರ್ಣ ಒಂದೆಡೆ ಕುಳಿತು ಕಣ್ಣೀರು ಸುರಿಸುತ್ತಿದ್ದಳು. ಎಷ್ಟೇ ಬುದ್ಧಿ ವಂತರಾದರೂ ದುಃಖವೊದಗಿದಾಗ ಒಂದೊಂದು ವೇಳೆ ಮತಿಗೆಡುವರು! ಮಗಳಿಗೆ ಮದುವೆ, ತಾಯಿ ಅಳುವುದೆ? ಜೀವನದ ಕಷ್ಟ ಕಾರ್ಪಣ್ಯಗಳನ್ನು ಅನುಭವಿಸಿ, ದಾರಿದ್ರ್ಯದ ಅಗ್ನಿಕುಂಡದಲ್ಲಿ ಬಿದ್ದು ಬೆಂದು ಬೇಗುದಿ ಗೊಂಡು, ಶೋಕಸಾಗರದಲ್ಲಿ ಈಸಿ ಜಯಿಸಿದ ತರುವಾಯ ಸ್ವರ್ಣಳೀಗ ಚಿಂತಿ ಸುವಳೇಕೆ? ಆದರೂ ವಿಜಯಳಿಗೆ ತಂದೆಯಿರುತ್ತಿದ್ದರೆ ತನಗೆಷ್ಟೊಂದು ಮಾನ ಮರ್ಯಾದೆ ಗೌರವಗಳು ಇರುತ್ತಿದ್ದಿತು—ಎಂಬ ಚಿಂತೆ. ಆ ದಾರಿಯಾಗಿ ಬಂದ

ಮೋಹಿನಿ ಸ್ವರ್ಣಳನ್ನು ನೋಡಿ " ಸ್ವರ್ಣಾ, ಏನಿದು ? ಒಂದಿಷ್ಟು ಬುದ್ಧಿಯಿಲ್ಲ ನಿನಗೆ ! ಮಗಳಿಗೆ ಮದುವೆ—ಎಷ್ಟೊಂದು ಆನಂದದಲ್ಲಿರಬೇಕು. ಬಂದವರಿಗೆ ಮರ್ಯಾದೆ ಮಾಡಿ ಎಲ್ಲರೊಂದಿಗೂ ಕಲೆತು ಸಂತೋಷದಿಂದಿರುವುದು ಬಿಟ್ಟು ಒಂದು ಮೂಲೆಯಲ್ಲಿ ಹೋಗಿ ಕುಳಿತು ಅಳುತ್ತೀಯಾ ?....ಏನು ಮಾಡುವುದು ? " ಎಂದು ಅವಳನ್ನು ಸಂತಯಿಸಿದಳು.

" ಇಲ್ಲ, ಮೋಹಿನಿ ನಾನು ಸಂತೋಷದಲ್ಲಿಯೆ ಇದ್ದೇನೆ. ವಿಜಯೆ ಇನ್ನು ನಿನ್ನ ಮಗಳು ; ಅವಳಿಗಿನ್ನು ಎಲ್ಲಾ ನೀನೇ ! ಬಂದವರಿಗೆ ಮರ್ಯಾದೆಮಾಡುವುದಕ್ಕೆ ನೀವಿಷ್ಟು ಮಂದಿ ಇದ್ದ ಮೇಲೆ ಮಧ್ಯೆ ನಾನೇಕೆ ಒಬ್ಬಳು !.... ಮೋಹಿನಿ, ನೀನೊಬ್ಬಳು ದೊರೆಯದೆ ಹೋಗಿದ್ದರೆ ಈ ಸ್ವರ್ಣ ರಂಗಮ್ಮನೆಂಬ ಹೆಸರಿನಿಂದ ಮಣ್ಣು ಮುಚ್ಚಿ ಹೋಗುತ್ತಿದ್ದಳಲ್ಲವೆ ? ಆಗ ನನ್ನ ಮಗಳ ಪಾಡೇನಾಗುತ್ತಿತ್ತು ? ಸ್ಮರಣೆಗೆ ತಂದುಕೊಂಡರೆ ರೋಮಾಂಚನವಾಗುತ್ತಿದೆ...."

" ಹೌದು. ಸ್ಮರಣೆಗೆ ತಂದುಕೊಳ್ಳಬೇಡ."

" ಆದರೆ ದೇವರು ನಿನ್ನನ್ನು ನನ್ನ ವಿಮೋಚನೆಗಾಗಿ ಹುಟ್ಟಿಸಿರುವಾಗ ಹಾಗೇಕೆ ನಡೆದೀತು ?....ಎಲ್ಲಾ ದೇವರ ತರುವಾಯ ನಿನ್ನ ಕೃಪೆ, ಮೋಹಿನಿ ! "

" ಸಾಕು ಮಾಡು. ಏಳು. ಎದ್ದು ಆಚೀಚೆ ಓಡಾಡುತ್ತಿರು. ನನ್ನ ಕೃಪೆಯಂತೆ ! "

" ಮೋಹಿನಿ, ಹಾಗೆ ಸಿಟ್ಟಾಗಬೇಡ ; ನನಗೇನೂ ಬೇಡ. ಮಗು ರಂಗು ಎಲ್ಲಿದ್ದಾನೆ ? ಇಲ್ಲಿ ತಾ. ಅವನನ್ನು ನಾನು ನೋಡಿಕೊಳ್ಳುತ್ತೇನೆ."

ಈ ಮಾತನ್ನು ಕೇಳಲು ಮೋಹಿನಿಯ ಎದೆಯಲ್ಲಿ ಕರುಣ ರಸ ಉಕ್ಕಿತು. ಸ್ವರ್ಣ ತನ್ನ ಜೀವಮಾನದಲ್ಲಿ ಎಷ್ಟೊಂದು ಕಷ್ಟಗಳಿಗೆ ತುತ್ತಾದಳೊ ? ಅದೂ ಕಾರಣವಿಲ್ಲದೆ ಅವುಗಳನ್ನೆಲ್ಲಾ ನೆನಸುವಾಗ ಯಾರಿಗೆ ತಾನೆ ದುಃಖವಾಗದೆ ಇದ್ದೀತು ? ನೆನಸದೆ ಇರುವುದಾದರೂ ಹೇಗೆ ? ಮೋಹಿನಿ ಎದ್ದು ಹೋಗಿ ಮಗುವನ್ನು ತಂದು ಸ್ವರ್ಣಳ ಕೈಗೊಪ್ಪಿಸಿ ಹೊರಟಳು. ಮಗು ಕೂಗಿದಾಗ ಸ್ವರ್ಣ ಅದನ್ನು ಎತ್ತಿಕೊಂಡು ಹಿತ್ತಲ ಕಡೆ ನಡೆದಳು.

ಅಲ್ಲಿ—

" ನಾನು ಬೇಡವೇ ಬೇಡಾಂದೆ ಅವರಿಗೆ. ಆದರೆ ಅವರು ನಮ್ಮ ಮನೇಲಾದ ಒಳ್ಳೇ ಕಾರ್ಯಗಳಿಗೆಲ್ಲಾ ಬಂದಿದ್ದಾರೆ ; ಒಂದು ರೂಪಾಯಿ

ಅದೂ ಇದೂಂತ ಇಟ್ಟಿದ್ದಾರೆ! ಹಾಗಿರುವಾಗ ಈಗ ನಾವು ಹೋಗದಿದ್ದರೆ ಅವರೇನಾದರೂ ಕಲ್ಪಿಸಿಕೊಂಡಾರು, ಅಂದರು. ಅದಕ್ಕೇನು ಹೇಳೋದು ಬದಲು ? ' ಹೂಂ ! ' ಅಂದುಕೊಂಡು ಹೊರಟೆ, ಉಪಾಯವಿಲ್ಲದೆ."

"ನಮ್ಮ ಮನೇಲೂ ಹಾಗೆ ಹೇಳಿದರು. ನಾನೂ ಹಾಗೆ ಉಪಾಯ ವಿಲ್ಲದೇನೆ ಬಂದೆ. ಮಾವನೊಂದಿಗೆ ಅವರು ಕಳಿಸಿಕೊಟ್ರು........ಹೌದು, ಹುಡುಗೀ ತಾಯಿ ವೈದುನನ ಒಟ್ಟಿಗೆ ಓಡಿಹೋಗಿದ್ದಳು ಅಂತಾರಲ್ಲ, ಅದು ನಿಜವೇನಕ್ಕ ? "

" ಮೆಲ್ಲನೆ ಮಾತಾಡು ತಾಯಿ ; ದೊಡ್ಡವರ ಮನೆಯ ಗೋಡೆಗೂ ಕಿವಿ ಯಿದ್ದೀತು ! ಹಾಗೇನೊ ಅಂದುಕೊಳ್ತಿದ್ದಾರೆ. ಇಲ್ಲದೇ ಇಲ್ಲದ ಸಂಗತಿ ಹುಟ್ಟೋದು ಅಂದರೇನು ? ಏನೂ ಸ್ವಲ್ಪ ಹಸಿವೆ ಜೋರಾಗಿರ್ಬೇಕು, ವೈದುನ ನಿಗೂ ಒಳ್ಳೇ ಸಮಯ—ಪ್ರಾಯ ನೋಡು, ಕರೆದಿರಬೇಕು ! ಜೇನುತುಪ್ಪ ತಗೊ ಅಂದರೆ ಬೇಡಾ ಅಂದಾರೆ ಯಾರಾದರೂ ? ಹಿಂದೆ ಹೊರಟುಬಿಟ್ಟಳು. ಸ್ವಲ್ಪ ಸಮಯ ಚೆನ್ನಾಗಿ ಶೋಕಿ ಮಾಡಿರಬೇಕು. ಅತ್ತಿಗೆಗೆ ಉದರ ಉಬ್ಬಿ ತೆಂದಾಗ ಅವನು ಬಿಟ್ಟು ಓಡಿಹೋಗಿರಬೇಕು."

" ಹ್ಹ ಹ್ಹ ಹ್ಹ ! "

" ಅವನು ಎಷ್ಟಂದ್ರೂ ಗಂಡು ನೋಡು ; ಕೆಸರು ಕಂಡೆಡೆ ತುಳಿದಾನು, ನೀರು ಕಂಡೆಡೆ ತೊಳೆದಾನು ! ಹೆಂಗಸರು ಹಾಗೆಯೆ ! ಒಮ್ಮೆ ಆಯ್ತು ಅಂದರೆ ಆಯ್ತು, ಜೀವನ ಪರ್ಯಂತ ! ಎಂಥಾ ಸುಳ್ಳೇ ಆಗಲಿ ಕಳವೇ ಆಗಲಿ ಒಂದಲ್ಲಾ ಒಂದು ದಿನ ಹೊರಗೆ ಬೀಳಲೆ ಬೇಕು ! ಅವನು ಬಿಟ್ಟು ಓಡಿಹೋದ ಅಂದಮೇಲೆ ಇವಳೇನು ಮಾಡೋದಿನ್ನು ? ಉಪಾಯದಿಂದ ಮಗೂನ್ನ ಆಶ್ರಮಕ್ಕೆ ಸೇರಿಸಿದಳು. ತಾನೂ ಕೆಲಸಕ್ಕೆ ಸೇರಿಬಿಟ್ಟಳು. ಅನಂತರ ಆದದ್ದೆಲ್ಲಾ ನಿನಗ್ಗೊತ್ತಿದೆ."

" ಹೌದು. ಹಾಗಾದ್ರೆ ಕಥೆ ಹೀಂಗೆ ? "

" ಮತ್ತೇಗೆ ? ಹೀಗಲ್ಲದೆ ! ಇಬ್ಬರೂ ಒಂದೇ ದಿನ ಹೋಗ್ಬೇಕಂತಾದ್ರೆ ಹಾಗೆ ಆಗರಲಿಕ್ಕೇ ಬೇಕಲ್ಲವೆ ? "

" ನಿಜ, ನಿಜ ! —ಮತ್ತೆ ಆ ಮೋಹಿನಿ ವಿಷಯ ಏನು ? "

" ಅದೇ ! ಅದು ಇಡೀ ರಾತ್ರಿ ಹಗಲು ಹೇಳಿದರೂನೂ ಮುಗಿಯೋ

ವಿಷಯ ಅಲ್ಲ. ಅವಳು ಸೂಳೇ ಮಗಳು........ಅವಳ ತಾಯಿ ರತ್ನಾಂತ. ಮದು ಮಗನ ತಂದೇಗೆ ಏನೋ ಸಂಬಂಧ ಆಗ್ಬೇಕಂತೆ!........"

" ಅವರಲ್ಲಿ ಯಾರಾದರೂ ಇದ್ದಾರೇನೀಗ ? "

" ಎಲ್ಲಾ ಮಣ್ಣು ತಿಂದು ಹೋದರು ! "

" ನೋಡಿದೆಯಾ, ಇದನ್ನೆಲ್ಲಾ ಅವರು ಹೊರಗೆ ಬಿಡ್ತಾರಾ ? ದೊಡ್ಡವರಲ್ವೆ, ಏನು ಮಾಡಿದರೂ ನಡೆದೀತು. ನಮ್ಮಂತಹ ಬಡವರಲ್ಲಿ ಹೀಗೇನಾದರೂ ಆಗಿದ್ರೆ ಊರೆಲ್ಲಾ ಡಂಗುರ ಹೊಡಿಸಿಬಿಡುತಿದ್ದರು. ಎಲ್ಲಾ ಹಣ ನೋಡಮ್ಮ, ಹಣ !........ಹಣ ಇದ್ದರೆ ಅರಸನ ಮಗಳೇ ಬೇಕೆಂದರೂ ಬರ್‍ತಾಳೆ; ಸೂಳೇ ಮಗಳು ಎಂದರೂ ಆಗ್ತದೆ ! "

" ಚೆನ್ನಾಗಂದಿ ಅಕ್ಕ ! ನನ್ನ ತಂಗೀನ್ ನೋಡು, ಆ ತೆಂಗಿನ ತೋಟದ ಗೋವಿಂದರಾಯರ ಹಿರಿ ಮಗನಿಗೆ ಕೊಟ್ಟಿತ್ತು. ಅವಳು ಒಂದು ದಿನ— ನೀರೊ ಕಾಫಿಯೊ ಏನೊ ಮೈದುನನಿಗೆ ತಂದುಕೊಟ್ಟಳಂತೆ; ಆಗ ಅವಳ ಕೈಬೆರಳು ಅವನದಕ್ಕೆ ಸೋಕಿತಂತೆ. ಇದನ್ನು ಯಾರೋ ನೋಡಿಕೊಂಡು ಹೋಗಿ ಅವಳ ಅತ್ತೆಯ ಕಿವಿಗೆ ಹಾಕಿಬಿಟ್ಟರಂತೆ. ಆ ಕೂಡಲೆ ಅವನನ್ನು ಹೊರಗೆ ಹಾಕಿಬಿಟ್ಟಳಂತೆ ಆ ಪುಣ್ಯಾತ್ಗಿತ್ತಿ ! "

" ತನ್ನ ಹೊಟ್ಟೆಮಗನನ್ನೆ ? "

" ಊಂಹುಂ ! ಗಂಡನ ತಮ್ಮನ ಮಗ........ತಂದೆ ತಾಯಿ ಯಾರಿಲ್ಲ ಅವನಿಗೆ; ದೊಡ್ಡಪ್ಪನಿಗೆ ಅವನ ಮೇಲೆ ಬಹಳ ಪ್ರೀತಿ; ದೊಡ್ಡಮ್ಮನಿಗೆ ಆಗದು !........ಹೊಟ್ಟೆ ಮಗಾಂತಾದ್ರೆ ಪೂಜಿಸ್ತಿದ್ದಳು ! "

" ಹೂಂ ! ಅನಂತರ ಏನಾಯಿತು ? ಗುಟ್ಟು ಹೊರಗೆ ಬಂತೆ ? "

" ಹುಡುಗ ಅಲ್ಲಿ ವಿದ್ಯಾಭ್ಯಾಸ ಮಾಡ್ತಿದ್ದ. ಹೋಟಲಲ್ಲಿ ವಾಸಮಾಡಲಾರಂಭಿಸಿದ."

" ಖರ್ಚು ? "

" ಹೊರಗೆ ಹಾಕಿದ್ದು ಸಾಲದೆ ಖರ್ಚಿಗೆ ಕೊಡೋದನ್ನೂ ನಿಲ್ಲಿಸಿದಳು, ಗಂಡನನ್ನು ತಡೆಗಟ್ಟಿ. ಹುಡುಗ ಬುದ್ಧಿವಂತನಾದ್ದರಿಂದ ಅದನ್ನು ಯಾರೋ ಒಬ್ಬ ಪುಣ್ಯಾತ್ಮರು, ಆ ಶಾಲೆ ಒಳಗಿನವರೆ ವಹಿಸಿಕೊಂಡರು ! ಈಗ ಅವನು ಅವರ ಮಗಳನ್ನೇ ಮದುವೆ ಮಾಡಿಕೊಂಡು, ಇವರೇ ಖರ್ಚಿಗೆ ಇಲ್ಲೆನ್ನುವಾಗ ಅವನೆ ಕೊಡ್ತಾನೆ. ನೋಡು ಪ್ರಪಂಚ ! "

"ಹೌದಮ್ಮ. ಹೀಗೇನೆ ಇದೆ ಈಗಿನ ಅಂಧ ಪ್ರಪಂಚ. ಜನಕ್ಕೆ ಆನೆ ಹೋಗೋದು ಕಾಣೋದಿಲ್ಲ, ಸಾಸಿವೆ ಎಲ್ಲಿ ಉರುಳುತ್ತಿದೆ ಅಂತ ನೋಡಿ ಅದನ್ನು ಕಂಡು ಹುಡುಕಿ ದೊಡ್ಡದು ಮಾಡಿಬಿಡ್ತಾರೆ."

"ಮತ್ತೆ ಮೋಹಿನಿ ವಿಷಯಾನೆ ಹೇಳಲಿಲ್ಲ ನೀನು ?"

"ರತ್ನ ಅವಳನ್ನು ಹೆತ್ತು, ಮಗುವಿಗೆ ಮೂರು ವರ್ಷ ಆಗ್ಬೇಕಾದ್ರೆ ಅವಳ ಗಂಡ, ಯಾವುದೋ ಕಾರ್ಖಾನೇಲಿ ಮುಷ್ಕರದ ಮುಖಂಡನಾಗಿ, ಆ ಗಲಾಟೇಲೇನೊ ಸ್ವಲ್ಪ ಹೆಚ್ಚುಕಡಿಮೆ ಏನೋ ಆಗಿ ಸತ್ತನಂತೆ. ಆಮೇಲೆ ಹೊಟ್ಟೆಪಾಡು ಆಗಬೇಕಲ್ಲ! ಕೆಲಸಕ್ಕೆ ನಿಂತಳಂತೆ. ಯಜಮಾನನಿಗೂ ಇವಳಿಗೂ ಸ್ನೇಹ ಬೆಳೆಯಿತು. ವ್ಯಾಪಾರ ನಡೆಸಿದಳಂತೆ!"

"ಸ್ವರ್ಣಳ ವಿಷಯ ಹೆಚ್ಚಿಗೇನು ?"

"ಇನ್ನೇನಿದೆ ಹೇಳೋದಕ್ಕೆ ? ಇನ್ನು ಬೇಗನೆ ಹೇಗಾದ್ರೂ ಎಲ್ಲಾದ್ರೂ ಒಂದು ಹೆಣ್ಣು ನೋಡಿ ಮದುವೆ ಮಾಡಿಸಿಬಿಡ್ತಾರೆ. ಮತ್ತೆ ಅವನು ಸ್ವರ್ಣಳನ್ನ ಬಿಡ್ತಾನೇನು ?"

"ಚೆನ್ನಾಗಂದೆ, ಮಹಾರಾಯ್ತಿ! ಇಷ್ಟನ್ನೆಲ್ಲಾ ಎಲ್ಲಿಂದ ಸಂಗ್ರಹ ಮಾಡಿದೆ ?"

ಮಾತು ಮುಗಿಯಲು ಎಲ್ಲರೂ ಒಂದು ಸಲ ಹಲ್ಲುಬಿಟ್ಟು ಗೊಳ್ಳೆಂದು ನಕ್ಕರು.

ಮೋಹಿನಿ ಹೆಂಗಸರ ಊಟಕ್ಕೆ ಸಜ್ಜುಮಾಡಿ, "ಮತ್ತೆ ಮಾತಾಡಿ; ಊಟವಾಗಲಿ, ನಾಗೋಲ್ಲಿಗೆ ಮಂಟಪದಲ್ಲಿ ಮಾಡಬೇಕಾದ ಕೆಲಸ ತುಂಬಾ ಇದೆ" ಎಂದು ಕೂಗಿ ಕರೆದೆಬ್ಬಿಸಿದಳು.

ಎಲ್ಲರನ್ನೂ ಕಂಡ ಮೋಹಿನಿ ಸ್ವರ್ಣಳನ್ನು ಮಾತ್ರ ಕಾಣಲಿಲ್ಲ. ಹಿತ್ತಿಲ ಬಾಗಿಲ ಕಡೆ ನಡೆದಳು. ಅಲ್ಲಿ ಯಾವುದೋ ಯೋಚನೆಯಲ್ಲಿ ಮಗ್ನಳಾಗಿ ಕುಳಿತಿದ್ದಳು, ಸ್ವರ್ಣ. ಮುಖವು ಆರಕ್ತವಾಗಿದ್ದಿತು. ಕಣ್ಣೀರು ಸುರಿದು ಹೋದ ಗುರುತು ಅವಳ ಕಪೋಲಗಳ ಮೇಲೆ ಚೆನ್ನಾಗಿ ಮೂಡಿತ್ತು. ಅವಳ ಮಡಿಲಲ್ಲಿದ್ದ ಮಗು ನಿದ್ರಿಸುತ್ತಿದ್ದಿತು. ಮಹಿಳೆಯರಾಡಿದ ಮಾತುಗಳು ಸ್ವರ್ಣಳ ಕಿವಿಗೆ ಬಿದ್ದಿರಬೇಕು!

"ಸ್ವರ್ಣಾ! ಇಲ್ಲೇನು ಮಾಡ್ತಿದ್ದಿ ಇಷ್ಟು ಹೊತ್ತು ? ಮಗು ನಿದ್ದೆ ಮಾಡುತ್ತಿದೆಯಲ್ಲ."

" ನಾನು ನೋಡಲೆ ಇಲ್ಲ ! "

" ಚೆನ್ನಾಗಿ ಹೇಳಿದೆ ಬಿಡು, ಮಗು ನಿದ್ರಿಸಿದ್ದು ನೋಡ್ಲೆ ಇಲ್ಲಾಂದ್ರೆ. ಸರಿ ! ಬಾ, ಅಡಿಗೆ ತಣ್ಣಗಾದೀತು."

" ಎಲ್ಲರದೂ ಆಯಿತೆ ! ನಾನು ಆಮೇಲೆ ಮಾಡುವೆ, ಮೋಹಿನಿ, ಈಗ ಹಸಿವಿಲ್ಲ."

" ಏನು ಹಸಿವಿಲ್ಲ ? ಏಳು, ನೀನು ಹೀಗೆ ಕುಳಿತರೆ...."

ಮೋಹಿನಿಯ ಮಾತು ಸ್ವರ್ಣಳಿಗೆ ಸರಿ ಎನಿಸಿ, ಮಗುವನ್ನೆತ್ತಿಕೊಂಡು ಒಳಗೆ ನಡೆದಳು. ಮಗುವನ್ನು ತೊಟ್ಟಿಲಲ್ಲಿ ಮಲಗಿಸಿ ಊಟಕ್ಕೆ ಹೋದಳು. ಅದೇ ಹೊತ್ತಿಗೆ ಸರಸ್ವತಿಯೂ ಸ್ವರ್ಣಳನ್ನು ಹುಡುಕುತ್ತ ಅಲ್ಲಿಗೆ ಬಂದಳು.

ಮಗಳ ಮದುವೆಯಾದರೇನು ? ಮನಸ್ಸಿಗೆ ಶಾಂತಿ, ನೆಮ್ಮದಿ ಇದ್ದರೆ ತಾನೆ ಎಲ್ಲಾ ! ಮೋಹಿನಿಗೆ ಸ್ವರ್ಣ ಅಷ್ಟಾದರೂ ಮಾಡಿದಳಲ್ಲಾ ಎಂದು ಸಮಾಧಾನವಾಯಿತು. ತಾನು ಊಟ ಮಾಡಿದೆನೆಂದು ಎಲ್ಲರೂ ತಿಳಿದು ಕೊಳ್ಳಲಿ ಎಂದು ಸ್ವರ್ಣ ಒಂದೆರಡು ತುತ್ತು ಹೊಟ್ಟೆಗೆ ಹಾಕಿದಳು.

'ನನ್ನ ಕರ್ತವ್ಯವನ್ನು ನಾನು ನೆರವೇರಿಸಿದೆನು. ಅಲ್ಲ ! ಜಗದೊಡೆಯ ನಡೆಯಿಸಿದ ! ಪರಲೋಕದಲ್ಲಿ ಸತ್ತು ದೈವವಾಗಿ ನಿಂತು ತನ್ನ ಮಗಳಿಗೆ ವಿವಾಹ ವಾಗುತ್ತಿರುವುದನ್ನು ನನ್ನ ಪ್ರಾಣೇಶ್ವರನು ನೋಡಿ ಆನಂದಪಡುತ್ತಿರಬಹು ದಲ್ಲವೆ ? ಅದೇ ನನಗೆ ಸಂತೋಷ, ಸ್ವರ್ಗ ! ನನ್ನ ಸತ್ಯಾಸತ್ಯವನ್ನು ದೇವನೂ ಅವರೂ ಅರಿವರು ! ನನ್ನನ್ನು ತಮ್ಮೆಡೆಗೆ ಕರೆದುಕೊಳ್ಳಬಾರದೇಕೆ ?........ ಸಾಕು, ಈ ಜೀವನ ! ಯಾವ ಜನ್ಮದಲ್ಲಿ ಯಾವ ಪಾಪವನ್ನು ಮಾಡಿ ದ್ದೆನೊ ?—ಇನ್ನು ಈ ಜನರ ಮುಂದೆ ನನಗೆ ಮುಚ್ಚುಮರೆಯಾಗಿ ನಿಂತು ಬಾಳುವುದು ಸಾಧ್ಯವಿಲ್ಲ !' ಎಂದು ಮುಂತಾಗಿ ಹಂಬಲಿಸಿ ಮನದೊಳಗೆ ಹಲಬಿದಳು ಸ್ವರ್ಣ.

ಅನಂತ-ವಿಜಯರ ವಿವಾಹವಾಗಿ ಹತ್ತಾರು ದಿನ ಕಳೆದುಹೋದವು. ಅವರಿಗೆ ಔತಣದೂಟ ನಡೆಯುತ್ತಲೆ ಇತ್ತು. ಮಾಧವರಾಯರು ಮಾತ್ರ ಪತ್ನಿಯೊಂದಿಗೆ ಪ್ರಕಾಶನಿಗೆ ವಧು ನೋಡಿಕೊಂಡು ಬರಲು ಬ್ರಹ್ಮಾವರದಿಂದ ಹತ್ತಾರು ಮೈಲು ದೂರವಿರುವ ಕರುಣಾಕರರಾಯರ ಮನೆಗೆ, ಮದುವೆಗೆಂದು ಬಂದಿದ್ದ ಅವರೊಂದಿಗೆ ತೆರಳಿದ್ದರು. ಪ್ರಕಾಶನಿಗೆಂದು ನಿಶ್ಚಯಮಾಡುವ

ಹುಡುಗಿ ಚಿಕ್ಕದು, ಇನ್ನೊಂದು ಹುಡುಗಿ ಇದೆ ಎಂದು ಗುಟ್ಟಾಗಿ ತಿಳಿದ ಸುಬ್ಬರಾಯರು, ಅದನ್ನೂ ಕೊಡುವುದಾದರೆ ಕಿಶೋರನಿಗೆ ನಿಶ್ಚಯ ಮಾಡಿಕೊಂಡೇ ಬಂದುಬಿಡಿ ಎಂದು ಮಾಧವರಾಯರಿಗೆ ಸೂಚನೆ ಕೊಟ್ಟಿದ್ದರು, ಹೊರಡುವಾಗ. ಮಾಧವರಾಯರು, "ನೀವು ಅಥವಾ ಕಿಶೋರ ನೋಡೋದು ಬೇಡವೆ?" ಅಂದುದಕ್ಕೆ, "ಅದೆಲ್ಲಾ ನೀವಿಬ್ಬರೂ ನೋಡಿ ಕೂಡಿಸಿದ್ರೆ ಸರಿ" ಎಂದರು ಸುಬ್ಬರಾಯರು. "ಹಾಗೇ" ಎಂದು ಹೇಳಿ ಮಥುರಾನಾಥರ ಅಭಿಪ್ರಾಯವನ್ನು ತಿಳಿದುಕೊಂಡು ಮಾಧವರಾಯರು ಹೊರಟುಹೋಗಿದ್ದರು. ತೇಜಪಾಲ ಪತ್ನಿಯೊಂದಿಗೆ ಮದನಪಲ್ಲಿಗೆ ಅದಾಗಲೆ ಹೊರಟುಹೋಗಿದ್ದನು. ಮಾಧವರಾಯರು ಬರುತ್ತಲೆ ಸ್ವರ್ಣಳನ್ನು ಕೂಡಿಕೊಂಡು ಮಂಗಳೂರಿಗೆ ಕಂಬಿ ಕೀಳುವುದು ಎಂದು ನಿಶ್ಚಯಿಸಿದ್ದರು ಸುಬ್ಬರಾಯರು. ಪ್ರಕಾಶ ಕಿಶೋರರು ಮಂಗಳೂರಿಗೆ ಹೋಗಿದ್ದರು. ಸುಬ್ಬರಾಯರು ಮಥುರಾನಾಥರಾಯರ ಕೈಗೊಪ್ಪಿಸಿದ್ದ ಆಸ್ತಿಯೆಲ್ಲವನ್ನೂ—ಸ್ವರ್ಣಳಿಗೆಂದು ಉಯಿಲು ಬರೆಯುವಾಗ, ಅವಳು ಅದನ್ನು ಮಗಳ ಹೆಸರಿಗೆ ಬರೆಯಲು ಹೇಳಿದಳು. ಉಳಿದುದನ್ನು ಕಿಶೋರನ ಹೆಸರಿನಲ್ಲಿ ಮಾಡಿದರು. ವಿಜಯಳ ಪಾಲಿಗೆ ಬಂದ ಆಸ್ತಿಯನ್ನು ಬಡಮಕ್ಕಳ ವಿದ್ಯಾಶಾಲೆಗೆ ಕೊಟ್ಟು 'ವಿನಂತ-ವಿಜಯ ಕೈಗಾರಿಕಾ ಮತ್ತು ವಿದ್ಯಾಶ್ರಮ' ಎಂದು ಶಾಲೆಗೆ ಹೆಸರಿಟ್ಟರು. ಹುಣಸೂರು ಗ್ರಾಮದಲ್ಲಿ ಶಾಲೆ ಪ್ರಸಿದ್ಧಿ ಪಡೆಯಿತು.

## ೨೯

ಸಮಾಜದೊಳಗೆ ಮರ್ಯಾದೆಗೆಟ್ಟು ಜೀವಿಸುವುದಕ್ಕಿಂತ ಕೆರೆ ಬಾವಿ ಅರಸುವುದೆ ಲೇಸೆನ್ನುವರು ಕೆಲವರು. ಅದರಲ್ಲೂ ಸ್ವರ್ಣಳನ್ನು ತಿಳಿಯದೆ, ಅವಳ ಹೃದಯವನ್ನರಿಯದೆ ಹೀನೈಸುವುದನ್ನು ಕೇಳಿ ಅವಳು ಸಹಿಸಿಯಾಳೆ? ಹೊಟ್ಟೆ ಮಗಳಿಗಾಗಿ ಈ ವರೆಗೆ ಬದುಕಿಯಾಯಿತು. ಅನಂತ-ವಿಜಯರ ಮದುವೆ ನೋಡಬೇಕೆಂದಿದ್ದ ಅಭಿಲಾಷೆ ಸಾಧಿಸಿಯಾಯಿತು. ಉಳಿದಿರುವುದು ಯಾವುದೂ ಇಲ್ಲ. ಸ್ವರ್ಣಳೀಗ ಹಸೆ ಹಿಡಿದಿದ್ದಾಳೆ.—ಎಲ್ಲರಿಗೂ ದುಃಖ!

ಅಂದು ರಾತ್ರಿ ಎಲ್ಲರೂ ನಿದ್ದೆಯಲ್ಲಿದ್ದರು. ಅನಂತ-ವಿಜಯರು ನಿದ್ರಿಸಿರಲಿಲ್ಲ. ವಿಜಯೆ ಅಳುತ್ತಿದ್ದಳು. ಅನಂತ ಅವಳನ್ನು ಸಂತೈಸುತ್ತಿದ್ದ.

"ಅಮ್ಮನ್ನೊಮ್ಮೆ ನೋಡಿ ಬರಲೆ ?" ಎಂದು ಅನಂತನ ಸಮ್ಮತಿ ಪಡೆದಳು.

ಸ್ವರ್ಣ ವಿಜಯಳನ್ನು ಏಕಾಂತದಲ್ಲಿ ಕಂಡು ಎರಡು ಮಾತಾಡಬೇಕೆಂಬ ಆಸೆಯಿದ್ದರೂ ಅದು ಅಶಕ್ಯವಾಗಿದ್ದಿತು. ಪದ್ಮಮ್ಮ ವಿಜಯೆಯನ್ನು ಹೆಚ್ಚಾಗಿ ಸ್ವರ್ಣಳ ಪಕ್ಕದಲ್ಲಿ ಸುಳಿಯಬಿಡುತ್ತಿರಲಿಲ್ಲ.

ವಿಜಯೆ ಪ್ರವೇಶ ಮಾಡಿದೊಡನೆ ಬಿಳುಪಾಗಿ ಆರಕ್ತವಾಗಿದ್ದ ಸ್ವರ್ಣಳ ಮುಖದಲ್ಲಿ ಆಶಾಪೂರಿತ ನಗುವೊಂದು ತುಟಿಗಳ ಮಧ್ಯೆ ನಲಿಯಿತು. ವಿಜಯೆ ಅಲ್ಲಿದ್ದ ಹಾಲು ತಾಯಿಗೆ ಕುಡಿಸಿದಳು. ಸ್ವಲ್ಪ ಚೇತರಿಸಿಕೊಂಡು,

"ಮಗೂ! ವಿಜಯಾ, ನಿನ್ನನ್ನೇ ಕಾಯುತ್ತಿದ್ದೆ. ಕೊನೆಯ ಸಲ ನಿನ್ನನ್ನು ನೋಡಿ ಒಂದೆರಡು ಮಾತಾಡ್ಬೇಕೆಂದಿದ್ದೆ....ಆ ಭಾಗ್ಯ ನನಗಿದೆಯೊ ಇಲ್ಲೊ ಎಂಬ ಚಿಂತೆಯಲ್ಲಿದ್ದೆ. ಆದರೆ ನನ್ನ ಅಂತರ್ಯ ಯಾರಿಗೂ ಗೊತ್ತಾಗದಿದ್ದರೂ ಆ ಪರಮಾತ್ಮನೊಬ್ಬನಿಗೆ ಗೊತ್ತು. ಅವನೇ ಈಗ ನಿನ್ನನ್ನಿಲ್ಲಿಗೆ ಕಳಿಸಿದ!" ಎಂದಳು ಸ್ವರ್ಣ.

"ಅಮ್ಮಾ! ಏನು ಮಾತಾಡ್ತಿ ? ಹುಚ್ಚಿಯಂತೆ........"

"ಹೌದು, ನನಗೊಂದು ಹುಚ್ಚು! ಪ್ರಪಂಚವೆ ಒಂದು ಹುಚ್ಚು. ಅದರೊಳಗೆ ನಾನೊಬ್ಬಳು!"

"ಅಮ್ಮಾ! ನೀನು ಸುಮ್ಮನೆ ಅಂಥಾ ಮಾತುಗಳಲ್ಲಿ ಹೃದಯ ಬಲಹೀನ ಮಾಡಿಕೊಳ್ಳಬೇಡ. ನನ್ನೊಡನೆ ಹೇಳು."

"ಹೆಚ್ಚೇನೂ ಇಲ್ಲ ಮಗು, ಒಂದೆರಡು ಮಾತು. ಪತಿವ್ರತೆಯಾಗಿ ಬಾಳು! ಅನಂತನಂಥಾ ಪತಿ ನಿನಗೆ ದೊರೆತಾನೆಂದು ನಾನು ಕನಸಿನಲ್ಲೂ ಎಣಿಸಿರಲಿಲ್ಲ. ಎಲ್ಲಾ ಭಗವಂತನ ಕೃಪೆ....ಲೋಕದ ಮಾತಿಗೆ ಹೆದರಬೇಡ; ಆದರೆ ಸತ್ಯವನ್ನು ಕೈಬಿಡಬೇಡ. ಮತ್ತು ಪತಿಯೇ ದೈವವೆಂದು ಭಾವಿಸಿ ಸದಾ ಆತನನ್ನೇ ಮನಸ್ಸಿನೊಳಗೆ ತ್ರಿಕರಣಪೂರ್ವಕ ಪೂಜಿಸು. ಅದೇ ನಿನಗೆ ಸುಖವುಂಟುಮಾಡುತ್ತೆ....ಅತ್ತೆಮಾವಂದಿರಿಗೂ ಹಾಗೇ ಸದಾ ವಿಧೇಯಳಾಗಿರಬೇಕು. ಒಳ್ಳೇ ಸ್ತ್ರೀಯರ ಸ್ನೇಹಮಾಡು. ಮನೆಯ ಮಾತುಗಳನ್ನು ಎಷ್ಟು ಮಾತ್ರಕ್ಕೂ ಹೊರಗೆಡಹಬಾರದು। ಎಲ್ಲರನ್ನೂ ಸಮಾನದೃಷ್ಟಿಯಿಂದ ನೋಡು. 'ಎಲ್ಲರ ಬಾಯಲ್ಲೂ ಒಳ್ಳೆಯವಳೆಂತ ಕೇಳಲು ಪ್ರಯತ್ನಿಸು.

ಕಡೆಯದಾಗಿ ನನ್ನದೊಂದು ಆಸೆ ಇದೆ, ಚಿನ್ನ—ಅದು ಸಫಲ ಆಗುತ್ತೊ ಇಲ್ಲವೊ ?"

" ನೀ ಯಾಕಮ್ಮಾ ಈ ರೀತಿ ಆಡ್ತಿ ಇವತ್ತು ? ಏನದು ? ನನ್ನೊಂದಿಗೆ ಹೇಳು " ಎಂದು ವಿಜಯೆ ಕಂಬನಿದುಂಬಿದವಳಾಗಿ ತಾಯಿಯ ಮುಖವನ್ನು ನೋಡುತ್ತಾ ಕೇಳಿದಳು.

" ಮಗೂ ! ಅಳುತ್ತೀಯ—ಏಕೆ ? ನಾನು ಸತ್ತುಹೋಗುತ್ತೇನೆಂದೆ ? ಛಿ ! ಹುಚ್ಚು ! ನಾನೇನು ಸಾಯೋದಿಲ್ಲ...." ಎಂದು ಮಗಳನ್ನು ಸಂತೈಸಿ ತಲೆಗೂದಲನ್ನು ಹಿಂದೆ ಸರಿಸಿ, ಅವಳ ಕಣ್ಣುಹನಿಗಳನ್ನು ತನ್ನ ಕೈಬೆರಳು ಗಳಿಂದ ತೊಡೆದಳು.

" ಇಲ್ಲ, ಅಮ್ಮ ! ನಾನು ನಿನ್ನನ್ನು ಸಾಯಗೊಡೆ ! ಈ ತನಕ ಇಲ್ಲದ ಕಾಯಿಲೆ ಈಗ ನಿನಗೆಲ್ಲಿಂದ ಬಂದಿತು ?"

" ಅಂಹ್ಹ ! ಅದರ ಚಿಂತೆ ಏಕೆ ಮಾಡ್ತಿ ನೀನು ! ಅಧೆಲ್ಲ ನನ್ನ ಕರ್ಮದ ಫಲ. ಕಷ್ಟ ಕಾಯಿಲೆ ಮನುಷ್ಯನಿಗಲ್ಲದೆ ಮತ್ತಾರಿಗೆ ಬರುತ್ತೆ ! ಅವರವರ ಕರ್ಮ. ದೇವರು ಅದಕ್ಕೆ ಹೊಣೆಯಲ್ಲ, ಚಿನ್ನ."

" ಆದರೆ ಈ ತನಕ ಪಟ್ಟ ಕಷ್ಟ ಸಾಲದೆ ಇನ್ನೂ ಕಷ್ಟವನ್ನೆ ಕೊಡ್ತಿದ್ದಾ ನಲ್ಲ ದೇವರು !"

" ಹಾಗೆ ದೇವರನ್ನು ಹಳಿಯಬೇಡ. ನಾನೆಲ್ಲಿ ಕಷ್ಟ ಅನುಭವಿಸಿದೆ ? ನಾನನುಭವಿಸಿದಷ್ಟು ಸುಖ, ಸಂತೋಷ ಬೇರೆ ಯಾರನುಭವಿಸಿದ್ದಾರೆ ? ನಾನು ಹೋದೆಡೆಯಲ್ಲೆಲ್ಲಾ ಆಶ್ರಯ ದೊರೆತಿದೆ. ಅದನ್ನು ಯಾರು ದೊರಕಿಸಿದರು ಬಲ್ಲೆಯಾ ? ನಿನ್ನ ಮದುವೆ—ಕೈಗೂಡಿಸಿ ಮಾಡಿಸಿದವ ದೇವರು ! ಇಷ್ಟೆಲ್ಲ ನಡೆದದ್ದು ದೇವರ ದಯೆಯಿಂದ."

" ಆಗಲಿ ' ನನಗೊಂದು ಆಸೆಯಿದೆ ' ಎಂದು ಅಂದೆಯಲ್ಲ, ಯಾವದು ? ಹೇಳು."

" ಮಗು ತೀರಿಹೋಗಿ ಅತೀವ ದುಃಖಕ್ಕೆ ಈಡಾದ ತುಳಸಿ ನಿನ್ನ ಲಗ್ನಕ್ಕೆ ಬರಲಿಲ್ಲ. ಈಗ ಆಕೆ ಕೂಡ ಕಾಯಿಲೆ ಇದ್ದಾಳಂತೆ; ಆಕೆಯನ್ನೊಮ್ಮೆ ನೋಡಬೇಕೆಂತ...."

" ಇಷ್ಟೆ ತಾನೆ ? ನಾಳೆನೆ ಬರೋಹಾಗೆ ಮಾಡ್ತೀನಿ ಚಿಕ್ಕಮ್ಮನನ್ನು !"

" ವಿಜಯಾ, ಬೇಡ ಚಿನ್ನಾ ! ಅನಂತನಿಗೆ ಈ ವಿಷಯ ಹೇಳಬೇಡ."

" ಮತ್ತೇನು ? ಬೇರೆ ಯಾರೊಂದಿಗೆ ಹೇಳಲಿ ? "

" ಏನೆಂತ ಹೇಳುತ್ತಿ ? "

" ಒಂದು ತಾರು ಕೊಡಿ ಅಂತ."

ವಿಜಯಳ ಈ ಮಾತಿಗೆ ಸ್ವರ್ಣ ಉತ್ತರವೀಯಲಿಲ್ಲ. ಸಮ್ಮತಿಯ ಮೌನ ವನ್ನು ಸೂಚಿಸಿದಳಷ್ಟೆ.

* * * *

" ಏನಂತೆ ? "

" ನಿನ್ನ ಅಕ್ಕ ನಿನ್ನನ್ನೊಮ್ಮೆ ನೋಡ್ಬೇಕೆಂತ ಅಂದುಕೊಳ್ತಿದ್ದಾಳಂತೆ. ಬಹಳ ಕಾಯಿಲೆ."

" ಯಾರು ಕೊಟ್ಟಿದ್ದಾರೆ ತಾರು ? "

" ಅನಂತರಾಯ."

" ಅಕ್ಕನ ಅಳಿಯನೇನು ! " ಆಶ್ಚರ್ಯದಿಂದ ಕೂಡಿದವಳಾಗಿ, " ಹೋಗೋಣ ಬೇಡವೆ ? " ಎಂದು, ಹೇಗಾದರೊಮ್ಮೆ ಹೋಗಿ ನೋಡಿ ಬರಲೇಬೇಕೆಂಬ ಅರ್ಥಸೂಚಕ ರೀತಿಯಲ್ಲಿ ಮಧುಕರನನ್ನು ಪ್ರಶ್ನಿಸಿದಳು— ತುಳಸಿ.

" ಸರಿ " ಎಂದು ಹೆಂಡತಿಯ ಹೃದಯವನ್ನರಿತವನಾಗಿ ಮಧುಕರನು ಸಹಕಾರದ ಚಿಹ್ನೆಯನ್ನು ತೋರಿಸಿದನು.

* * * *

ಕಿಶೋರ-ಪ್ರಕಾಶರಿಗೆ ವಧು ನಿಶ್ಚಯಮಾಡಲು ತೆರಳಿದ ಮಾಧವ ರಾಯರು ಹೆಂಡತಿಯೊಂದಿಗೆ ಬ್ರಹ್ಮಾವರ ತಲಪಿದರು. ಸ್ವರ್ಣ ಹಸೆ ಹಿಡಿ ದಿರುವಳೆಂದು ಕೇಳಿದಾಗ ಇಬ್ಬರಿಗೂ ವ್ಯಥೆಯಾಯಿತು. ಪದ್ಮಮ್ಮ ಕಾವೇ ರಮ್ಮನಿಗೆ ಸಮಾಧಾನೋಕ್ತಿಗಳನ್ನು ಹೇಳಿದರಾದರೂ ಅವರು ಮಗಳನ್ನು ಬಿಟ್ಟು ಕದಲಲಿಲ್ಲ. ವಿಜಯೆಯ ಮನಸ್ಸಿಗೆ ತೃಪ್ತಿ !

" ಅಮ್ಮಾ ! "

" ಸ್ವರ್ಣಾ ! "

" ಜನ ನನ್ನ ಕುರಿತು ಏನನ್ನುತ್ತಿದೆ ನಿನಗ್ಗೊತ್ತಾ ? "

" ಏನನ್ನೋದಿದೆ ಮಗು ? "

" ನಿನಗ್ಗೊತ್ತಿಲ್ಲವೆ ? "

ಕಾವೇರಮ್ಮನ ಮುಖ ಕಂದಿತು. ಸ್ವರ್ಣಳ ಈ ಪ್ರಶ್ನೆಗೆ ಯಾವ ಉತ್ತರ ಕೊಡಬೇಕೆಂಬುದು ತಿಳಿಯದಂತಾಯಿತು.

" ಏಕೆ, ಮಗೂ ? ಅಳಬೇಡವ್ಮಾ ! "

" ಇಲ್ಲ. ನಾನೇಕೆ ಅಳಬೇಕು ? ಆನಂದಸಾಗರದಲ್ಲಿ ಮುಳುಗಿರೋ ನನಗೆ ಅಳು ಬರೋದೆ ? ಇದು ಆನಂದಾಶ್ರು. ಪರಮಾತ್ಮ ಕರೆಯುತ್ತಿದ್ದಾನೆ. ನನ್ನ ಬರವನ್ನೇ ಇದಿರು ನೋಡುತ್ತಿರುವಂತಿದೆ. ಇನ್ನು ನಾನು ಬಾಳಿದರೂ ಎಷ್ಟು ದಿನ ? ಪತಿಯ ವಿಯೋಗದುಃಖವನ್ನು ಇಷ್ಟು ದಿನ ಅನುಭವಿಸಿದೆ. ನನ್ನ ಕಾರ್ಯ ಸಾಧಿಸಿತು. ಇನ್ನೇಕೆ ಈ ಬಾಳು ! ಆದರೆ ಅದರ ಮೊದಲು ಕೆಲವು ಮಾತುಗಳನ್ನಾಡಬೇಕೆಂಬ ಇಚ್ಛೆ."

" ಸ್ವರ್ಣಾ ! ಯಾಕೆ ಹೀಗೆಲ್ಲಾ ಹಲಬುತ್ತಿ, ಮಗೂ ? "

" ಹಲಬೋದಲ್ಲಮ್ಮ ! ನೀವೆಲ್ಲಾ ನನ್ನ ಎದೆಯಲ್ಲಿ ಮಾಡಿರುವ ಗಾಯವನ್ನು ಮಾಯಿಸೋದು ! "

ಮಗಳ ಗಂಭೀರ ಮಾತು ತಾಯಿಯ ಎದೆಯನ್ನು ನಾಟಿತು.

" ವಿಜಯ ಗರ್ಭದಲ್ಲಿದ್ದು ನಾನು ಮನೆ ಬಾಗಿಲಿಗೆ ಬಂದಾಗ ನನ್ನನ್ನು ಅಪ್ಪನೂ ನೀನೂ ಯಾವ ಭಾವನೆಯಿಂದ ಹೊರದೂಡಿದಿರಿ ? ನಾನು ಪರ ಪುರುಷನ ವಾಸನೆಗೆ ಒಳಗಾದೆ ಎಂಬ ಹೀನಭಾವನೆಯಿಂದ ! ನೋಡಲು ದೇವರಿದ್ದಾನೆ. ನಾನು ಹುಣಸೂರು ಮನೆಯಿಂದ ಕಾಣೆಯಾದೆ ಎಂದ ದಿನವೇ ಕಿಶೋರನೂ ಕಾಣೆಯಾದ. ನೀವೆಲ್ಲಾ ನನ್ನ ಮೇಲೆ ಶಂಕೆ ತಾಳಿದಿರಿ ! ಅಲ್ಲವೆ ? "

" ನಾವು ಯಾರೂ ಹಾಗೆ ಭಾವಿಸಲಿಲ್ಲ, ಮಗು ! ನಾವದನ್ನೆಲ್ಲಾ ಮರೆತಿದ್ದೇವಮ್ಮಾ ! "

" ಹೌದು, ಮರೆತಿದ್ದೀರಿ ! ಆದರೆ ಸಂಶಯಪಿಶಾಚಿ ನಿಮ್ಮನ್ನು ಬಿಟ್ಟು ಹೋಗಿಲ್ಲ. ಈ ತನಕ ಅರಿವಿಲ್ಲದೆ ಮಾತಾಡಿದೆ—ಒಂದು ವ್ಯಕ್ತಿ ಇನ್ನೊಂದು ವ್ಯಕ್ತಿಯ ಮೇಲೆ ಸಂಶಯ ತಾಳಿತೆಂತಾದರೆ, ಅದು ಎಷ್ಟೇ ಸತ್ಯವೆಂದು ತಿಳಿದು ಬಂದರೂ, ಆ ವ್ಯಕ್ತಿ ಅಳಿಯೋ ತನಕ ಆ ಸಂಶಯಪಿಶಾಚಿ ಅವರನ್ನು ಬಿಟ್ಟು

ಹೋಗದು. ಇನ್ನೆಷ್ಟು ದಿನ ಈ ಹೀನಜನರ ಅಶ್ಲೀಲ ಮಾತುಗಳನ್ನು ಕೇಳಿ ಕೊಳೆಯಬೇಕು ?.........ನನ್ನ ಹಣೆಬರಹ ಹಾಗಿದ್ದರೆ ಯಾರದನ್ನು ತಪ್ಪಿ ಸೋದು ಸಾಧ್ಯ ? " ಎಂದು ಸ್ವರ್ಣ ನಿರಾಶೆಯ ನಿಟ್ಟುಸಿರೊಂದನ್ನು ಬಿಟ್ಟಳು.

" ಸ್ವರ್ಣಾ! ಈ ರೀತಿ ಯಾಕೆ ಮಾತಾಡ್ತಿ? ಜೀವನದಲ್ಲಿ ನಿರಾಶ ಳಾಗೋದಾದರೂ ಏಕೆ? ತಂದೆ ತಾಯಿ ಅಲ್ಲದೆ ಸಂಬಂಧಿಕರು ಸ್ವಜನ ಬೇಕಾದಷ್ಟಿದೆ. ನಿನಗೇನು ಮಗೂ ? "

" ಅಮ್ಮಾ ! ನೀರು...."

" ನೋಡಿದೆಯಾ ? ಸುಮ್ಮನೆ ಮಾತಾಡಬೇಡ ; ಎದೆ ಆರೀತು."

" ಅಮ್ಮಾ, ವಿಜಯ ಎಲ್ಲಿದ್ದಾಳೆ, ಕರಿ."

ಕರೆದ ಕೂಡಲೆ ವಿಜಯೆ ಅಲ್ಲಿಗೆ ಬಂದು " ಅಮ್ಮಾ, ಚಿಕ್ಕಮ್ಮ ನಾಳೇನೆ ಹೊರಟುಬರ್ತೀನೆಂತ ಮರು ತಾರು ಕೊಟ್ಟಿದ್ದಾರೆ " ಎಂದಳು.

* * * *

ಮಾಧವರಾಯರು ಪ್ರಕಾಶ-ಕಿಶೋರರಿಗೆ ವಧು ನೋಡಿ ನಿಶ್ಚಯಮಾಡಿ ಎಲ್ಲಾ ಲೆಕ್ಕಾಚಾರ ಮುಗಿಸಿಬಿಟ್ಟು, ಚೈತ್ರಮಾಸದಲ್ಲಿ ಲಗ್ನಮುಹೂರ್ತವನ್ನೂ ಇಟ್ಟುಬಿಟ್ಟು, ಲಗ್ನದ ಪಟ್ಟಿಯನ್ನು ಬರೆದುಕೊಂಡು ಬಂದಿದ್ದರು. ವಧುವಿನ ಕಡೆ ಜನ ಬಹಳವಿದ್ದದ್ದರಿಂದ ಮದುವೆ ವಧುವಿನ ಮನೆಯಲ್ಲೇ ನಡೆಯ ಬೇಕಾಗಿತ್ತು. ಆದರೆ ಒಂದು ಕಷ್ಟ. ಕರುಣಾಕರರಾಯರು—ವಧುವಿನ ತಂದೆ ಧನಿಕರು. ಆದ್ದರಿಂದ ಅವರ ಯೋಗ್ಯತೆಗೆ ತಕ್ಕಂತೆ ಒಡವೆ ವಸ್ತ್ರಗಳನ್ನು ಗಂಡಿನವರು ಒದಗಿಸಿದರು.

ಮಾಧವರಾಯರು ತಮ್ಮ ಹೆಂಡತಿಗೆ " ಏನು ಮಾಡ್ತಿದ್ದಾಳೆ ಸ್ವರ್ಣ ? " ಎಂದು ಕೇಳಿದರು.

" ಆಯಾಸದಿಂದ ಒಂದಿಷ್ಟು ರೊಟ್ಟಿ ಕಷಾಯ ತೆಗೆದುಕೊಂಡು ಹಾಯಾಗಿ ಮಲಗಿ ನಿದ್ದೆ ಮಾಡ್ತಿದ್ದಾಳೆ ; ಒದರಬೇಡಿ, ಎಚ್ಚರಾದೀತು."

" ಅದೇ ನಾನೂ ಕೇಳಿದೆ. ಪ್ರಶಾಂತಾಗಿದ್ದಾಳಲ್ವೆ ? ನೀನು ಸ್ವಲ್ಪ ಇಲ್ಲಿ ಬಾ."

" ಯಾಕೆ ? "

" ಇಲ್ಲಿ ಬಾರೆ ! "

ರಾಗಿದ್ದರು. ಆಗಲೆ ಕರುಣಾಕರರಾಯರು ತಮ್ಮ ಪಟ್ಟದರಸಿಯಾಗಿದ್ದ ಐದನೆ ಹೆಂಡತಿಯನ್ನು ಪರಲೋಕಕ್ಕೆ ಕಳುಹಿಸಿದ್ದರು. ಸುಲೋಚನೆಯನ್ನು ಹಿಡಿದೆತ್ತಿ ಉದ್ಧರಿಸಲು ಟೊಂಕ ಕಟ್ಟಿದವರಂತೆ ಸಿದ್ಧರಾಗಿ ಕರುಣಾಕರರಾಯರು ಎರಡೂ ಕಡೆಯ ಖರ್ಚನ್ನು ತಾವೇ ವಹಿಸಿ ಸುಲೋಚನೆಯನ್ನು ಮದುವೆಯಾದರು. ಅನೇಕರು ರಾಯರ ಉದಾರ ಗುಣವನ್ನು ಮೆಚ್ಚಿ ಕೊಂಡಾಡಿದರು. ಕೆಲವರು ರಾಯರನ್ನು ಶಪಿಸಿದರು. ಕೆಲವರು ನೋಡಿ ನಕ್ಕರು.

ಯಾರು ಬೈದರೇನು, ಮುಳಿದರೇನು, ನಕ್ಕರೇನು ? ಅದೊಂದನ್ನೂ ಲೆಕ್ಕಿಸದೆ ರಾಯರು ಸಂಸಾರ ರಥದ ಸೂತ್ರವನ್ನು ಗಟ್ಟಿಯಾಗಿ ಹಿಡಿದು ಸಾಗಿಸಿದರು. ಸುಲೋಚನೆಯಾದರೊ ತನ್ನ ಅದೃಷ್ಟವನ್ನು ಹಳಿದಳೇ ವಿನಃ ಯಾರನ್ನೂ ದೂರಲಿಲ್ಲ. ವೃದ್ಧ ಪತಿಯೊಡನೆ ಸಂಸಾರವನ್ನು ಸುಖಮಯವಾಗಿ ಸಾಗಿಸುತ್ತಿದ್ದಳು.

೩೧

ತುಳಸಿ ಹಿಂದಿನ ದಿನವೆ ಬ್ರಹ್ಮಾವರಕ್ಕೆ ಗಂಡನೊಂದಿಗೆ ಹೊರಟು ಬಂದಿದ್ದಳು. ಮಾವನ ಆಜ್ಞೆ ಮೇರೆಗೆ ತುಳಸಿಯನ್ನು ಬಿಟ್ಟು ಮಧುಕರ ಮದ್ರಾಸಿಗೆ ಹೋಗಿದ್ದ.

ಸ್ವರ್ಣಳಿಗೆ ಜ್ವರ ಕಡಿಮೆಯಾಗಿತ್ತಾದರೂ ಹೃದಯವೇದನೆ ಆರಂಭವಾಗಿತ್ತು. ಮಾಧವರಾಯರು ಹಿಂದೆ ಆಲೋಚಿಸಿದಂತೆ ಆ ರಾತ್ರಿ ಕಳೆದು ಮರುದಿನ ಮಂಗಳೂರಿಗೆ ಹೋಗಲಿದ್ದರು.

ವೈದ್ಯರ ಸೂಚನೆ ಮೇರೆಗೆ ಸ್ವರ್ಣಳ ಎದೆಗೆ ಶಾಖ ಕೊಟ್ಟು ಆಗಿತ್ತು. ನೋವು ಒಂದಿಷ್ಟು ಕಮ್ಮಿಯಾಗಿತ್ತು. ಸ್ವರ್ಣ ನಿದ್ರಾವಶಳಾಗಿದ್ದಳು. ಎರಡು ಮೂರು ದಿವಸಗಳಿಂದ ನಿದ್ದೆಯಿಲ್ಲದೆ ಬಳಲಿದ್ದ ಕಾವೇರಮ್ಮ ತುಳಸಿಯನ್ನು ಕುರಿತು, " ಸ್ವಲ್ಪ ನೋಡಿಕೋಮ್ಮ ಅಕ್ಕನನ್ನು, ಫಕ್ಕನೆ ಎಚ್ಚರಾದಾಳು. ನಾನೊಂದಿಷ್ಟು ಅಡ್ಡಾಗ್ತೇನೆ. ಹಾಲು-ಗೀಲು ಬೇಕಾದ್ರೆ ಕೊಡು. ಮತ್ತೆ, ಎಚ್ಚರಾಗಿ ಏನಾದರೂ ಅಂದಾಳು, ಭಯಪಡಬೇಡ" ಎಂದು ಎಚ್ಚರಿಸಿ ಕೈಯನ್ನೆ ದಿಂಬುಮಾಡಿ ಅಡ್ಡಾದರು.

ತುಳಸಿ ಅಕ್ಕನ ಬಳಿ ಕುಳಿತು ಆವಳ ಭವಿಷ್ಯತ್ತನ್ನು ನೆನೆದು, ಈಗಿನ

ಅವಳ ಸ್ಥಿತಿ ನೋಡಿ ಕಂಬನಿ ಸುರಿಸುತ್ತಿದ್ದಳು. ಸ್ವರ್ಣ ಸತ್ತುಹೋದಳೆಂದು ಭಾವಿಸಿ ಏನೇನೋ ಬರೆದುಬಿಟ್ಟಿದ್ದಳೇನೋ. ಆದರೆ ಈಗ? ಒಡಹುಟ್ಟಿದ ಜೀವ ಹಾರುತ್ತಿದೆ! ಪ್ರೇಮ ಅವಳೆದೆಯಲ್ಲಿ ಉಕ್ಕಿಬರುತ್ತಿತ್ತು.

ನಿದ್ರಿಸುತ್ತಿದ್ದ ಸ್ವರ್ಣಳ ಮುಖ ದೀಪದ ಬೆಳಕಿಗೆ ಸ್ವರ್ಣಕಮಲದಂತೆ ಬೆಳಗುತ್ತಿತ್ತು. ಎಂದೂ ಇಲ್ಲದ ಸೌಂದರ್ಯ ಮುಖದಲ್ಲಿ ಪ್ರಜ್ವಲಿಸುತ್ತಿದೆ. ಸ್ವರ್ಣ ಶೀಘ್ರದಲ್ಲಿ ಗುಣಹೊಂದಿ ಸಹೋದರ ಪ್ರಕಾಶನ ವಿವಾಹವನ್ನು ನೋಡಬೇಡವೆ ?

ಅತ್ತು ಅತ್ತು ತುಳಸಿಯ ಕಂಗಳುಬ್ಬಿದವು. ಕೋಳಿ ಕೂಗಿತು. ಸ್ವರ್ಣ ಇನ್ನೂ ನಿದ್ರಿಸುತ್ತಿದ್ದಳು. ತುಳಸಿಗೆ ಒಂದರೆನಿಮಿಷ ಅಡ್ಡಾಗೋಣವೆನಿಸಿತು. ತಾಯಿಯ ಸಮೀಪದಲ್ಲೆ ತುಳಸಿ ಒರಗಿದಳು.

" ಕಾಲನು ಬರುತ್ತಿರುವನೆ ? ಬರಲಿ ! ಇನ್ನು ನನಗೇತರ ಕೆಲಸ ಇಲ್ಲಿ ? ನನ್ನನ್ನು ಕರೆದೊಯ್ಯಲಿಕ್ಕೆ ಬಂದಿರಾ ? ಎಲ್ಲ ಕೆಲಸವನ್ನೂ ನೀವೇ ನನ್ನಿಂದ ಮಾಡಿಸಿದಿರಿ....ತಪ್ಪಾಯಿತು, ಕ್ಷಮಿಸಿ ! ದೇವರು ನಮ್ಮಿಬ್ಬರ ಇಚ್ಛೆಯನ್ನು ನೆರವೇರಿಸಿದ !....ಸಮೀಪ ಬರಬಾರದೆ ?....ಎಲ್ಲರೂ ಎಚ್ಚರಾಗಿ ಅವರೂ ತಿಳಿದನಂತರ ಬಂದರೆ ಸಾಕೆ ?....ಹೌದು ! ಇಲ್ಲವಾದರೆ ಅಮ್ಮನನ್ನೂ ತಂಗಿಯನ್ನೂ ಎಲ್ಲರೂ ಬೈದಾರು ! ಅಲ್ಲದೆ ಎಲ್ಲರಿಗೂ ಚಿಂತೆಯ ಮೇಲೆ ಎದೆಗೆ ಉರಿವ ಕೊಳ್ಳಿ ಇಟ್ಟಂತಾಗುವುದು, ಅಲ್ಲವೆ ?....ಇನ್ನು ನನ್ನನ್ನು ಬಿಟ್ಟು ಹೋಗಬೇಡಿ ! ಸಾಕು ಈ ಜನ್ಮ ! ಎಲ್ಲರೂ ಪಾಪದೃಷ್ಟಿಯನ್ನೇ ಬೀರುತ್ತಾರೆ ! ವಿಧಿ ನನ್ನನ್ನು ಈ ಗತಿಗೆ ತಂದಿತು ! ಶ್ರೀಮಂತರಿಗೆ ' ವಿಧಿ ' ಎಂಬುದು ಸುಳ್ಳಾಗಿ ಕಾಣಬಹುದು ! ಕೈಯಲ್ಲಿ ಹಣ ಇರುವವರೆಗೆ ! ಪಾಪಪುಣ್ಯಗಳನ್ನು ಪರಿಗಣಿಸದೆ, ಬೇಕಾದುದನ್ನು ಮಾಡುವರು. ಹಣ ಹೋದಮೇಲೆ ವಿಧಿಯ ಮನವರಿಕೆಯಾಗುತ್ತದೆ ! ಇನ್ನಾದರೂ ನನ್ನನ್ನು ಕರೆದೊಯ್ಯುವಿರಲ್ಲವೆ ? ಒಂದು ಭಿಕ್ಷೆ ಇದೆ—ನಿಮ್ಮ ಭಾವನ ಮತ್ತು ತಮ್ಮನ ವಿವಾಹ ಯಾವ ತೊಡಕೂ ಇಲ್ಲದೆ ನಡೆಯಲಿ. ನನಗಿನ್ನೇತರ ಆಸೆಯೂ ಇಲ್ಲ ! ದೇವರ ನಾಮ ವನ್ನು ಜಪಿಸುವೆ."

ಕಾವೇರಮ್ಮನಿಗೆ ಎಚ್ಚರವಾಯಿತು. ಸಮೀಪದಲ್ಲೇ ತುಳಸಿ ಮಲ ಗಿದ್ದುದನ್ನು ನೋಡಿ ಎಬ್ಬಿಸಿದರು. ತುಳಸಿ ಕೂಡಲೆ ಎದ್ದು ಸ್ವರ್ಣಳ ಕಡೆ

ಓಡಿಬಂದಳು. ಸ್ವರ್ಣಳಿನ್ನೂ ಕಣ್ಣು ಬಿಟ್ಟಿರಲಿಲ್ಲ. ಸ್ವರ್ಣಳನ್ನು ನೋಡಿ ಗಾಬರಿಗೊಂಡವಳಾಗಿ ತಾಯಿಯೆಡೆಗೆ ಓಡಿ "ಅಮ್ಮಾ! ಅಕ್ಕ ಕಣ್ಣು ಮುಚ್ಚಿ ಕೊಂಡೆ 'ರಾಮ, ರಾಮ' ಎಂತ ಜಪಿಸ್ತಿದ್ದಾಳಮ್ಮ!" ಎಂದಳು. ಕಾವೇ ರಮ್ಮನಿಗೆ ಜೀವ ಹಾರಿದಂತಾಯಿತು. ಎಲ್ಲರೂ ಎದ್ದರು. ಸ್ವರ್ಣ ರಾಮನಾಮ ವನ್ನು ಶಾಂತವಾಗಿ ಉಚ್ಚರಿಸುತ್ತಿರುವುದನ್ನು ನೋಡಿ ಎಲ್ಲರೂ ವಿಸ್ಮಯ ಗೊಂಡರು.

ಮಥುರಾನಾಥರಾಯರು "ಸ್ವರ್ಣ" ಎಂದು ಹೆಸರು ಹಿಡಿದು ಕೂಗಿ ಕರೆಯಲು ಯಾರನ್ನೂ ಬಿಡಲಿಲ್ಲ. ಯಾರೂ ಕರೆಯಲೂ ಇಲ್ಲ. ಎಲ್ಲರೂ ಮೌನವಾಗಿ ಕಣ್ಣೀರು ಸುರಿಸುತ್ತಿದ್ದರು. ವಿಜಯೆ ತಾಯಿಯ ಸಮೀಪದಲ್ಲಿ ನಿಂತು ಒತ್ತಿಬರುತ್ತಿದ್ದ ಅಳುವನ್ನು ತಡೆದು ಶಾಂತತೆ ಒಡೆಯದಿರಲು ಪ್ರಯ ತ್ನಿಸಿದಳು. ತುಳಸಿ ವಿಜಯೆಯನ್ನು ಹಿಡಿದಿದ್ದಳು. ಅನಂತನು ಇದೆಲ್ಲವನ್ನೂ ನೋಡಿ ತಡೆಯಲಾರದೆ ತನ್ನ ಮೇಜಿನ ಮೇಲೆ ಒರಗಿ ಅಳುತ್ತಿದ್ದನು.

ಸ್ವರ್ಣ ಕಣ್ಣು ಬಿಟ್ಟು ಅಲ್ಲಿದ್ದ ಎಲ್ಲರನ್ನೂ ಒಮ್ಮೆ ನೋಡಿದಳು! ವಿಜಯೆಯನ್ನು ತನ್ನ ಎಡಭಾಗದಲ್ಲಿ ಕರೆದು ಕುಳ್ಳಿರಿಸಿದಳು. "ಅನಂತ" ಎಂದಳು. ಮಥುರಾನಾಥರು ಅವನು ಅಲ್ಲಿಲ್ಲದ್ದನ್ನು ನೋಡಿ ಕೋಣೆಯಿಂದ ಕರೆದುಕೊಂಡು ಬಂದರು. ಅನಂತನನ್ನು ಸ್ವರ್ಣ ಬಲಭಾಗದಲ್ಲಿ ಕುಳಿತು ಕೊಳ್ಳಲು ಹೇಳಿ ಮತ್ತೊಮ್ಮೆ ಇಬ್ಬರನ್ನೂ ನೋಡಿದಳು. ಮೃದುಹಾಸವೊಂದು ಅವಳ ತುಟಿಗಳ ಮಧ್ಯೆ ನಲಿದಾಡಿತು. ಇಬ್ಬರ ಶಿರಗಳ ಮೇಲೂ ಕೈಯಾಡಿಸಿ ದಳು. ಅನಂತ ಮತ್ತು ವಿಜಯರ ಬಲಹಸ್ತಗಳನ್ನು ಎತ್ತಿ ತನ್ನ ಕಣ್ಣುಗಳಿಗೆ ಒತ್ತಿಕೊಂಡು ಮಥುರಾನಾಥರಾಯರ ಕಡೆ ನೋಡಿದಳು. ಅವರೂ ಸಮೀಪ ಬಂದರು. ಪದ್ಮಮ್ಮನೂ ಅಲ್ಲಿಗೆ ಬಂದರು. ಸ್ವರ್ಣ ವಿಜಯೆಯನ್ನೂ ಅವ ರಿಬ್ಬರನ್ನೂ ನೋಡಿದಳು: "ವಿಜಯೆಯನ್ನು ನನ್ನ ಮಗಳಂತೆ ನೋಡಿ ಕೊಳ್ಳುವೆ" ಎಂದು ಹೇಳಿ ಮಥುರಾನಾಥರು ಮುಂದೆ ಮಾತಾಡಲಾರದೆ ಕುತ್ತಿಗೆ ಬಿಗಿದಂತಾಗಲು ಅಲ್ಲಿಂದ ಜಗಲಿಗೆ ನಡೆದುಬಿಟ್ಟರು. ಅನಂತರ ಸ್ವರ್ಣ ತಂದೆತಾಯಿಗಳ ಮುಖವನ್ನು ನೋಡಿ 'ಹೋಗಿ ಬರಲೆ!' ಎಂಬು ದಕ್ಕೆ ಸನ್ನೆಯಾಗಿ ಗಲ್ಲವನ್ನು ಆಡಿಸಿದಳು. ತುಳಸಿ ಸ್ವರ್ಣಳ ಕಾಲ ಬುಡದಲ್ಲಿ ಕುಳಿತಿದ್ದಳು: ಅವಳೂ ಸಮೀಪ ಬಂದಳು. ಸ್ವರ್ಣ ತಂಗಿಯ ಮೈಮೇಲೆ

ಕೈಯಾಡಿಸಿದಳು. ಸ್ವರ್ಣ ಬಾಯಿ ಬಿಟ್ಟಳು! ಕಾವೇರಮ್ಮ ಅಲ್ಲಿದ್ದ ತೀರ್ಥದ ಪಾತ್ರೆಯನ್ನು ತೆಗೆದು ವಿಜಯಳ ಕೈಯಿಂದ ಅವಳ ಬಾಯಿಗೆ ತೀರ್ಥ ಹಾಕಿಸಿದರು.

ಸ್ವರ್ಣ ಕಣ್ಣು ಮುಚ್ಚಿದಳು! ಕಾವೇರಮ್ಮ ಕೂಡಲೆ ನಿಂತಂತೆ ನೆಲದ ಮೇಲೆ ಬಿದ್ದು "ಅಯ್ಯೋ, ಮಗಳೆ! ನಿನ್ನನ್ನು ಕೊಂಡುಹೋದ ದೇವರು ನನ್ನನ್ನು ಕೊಂಡುಹೋಗಬಾರದಾಗಿತ್ತೆ!" ಎಂದು ಎಲ್ಲರ ಎದೆ ಬಿರಿಯುವಂತೆ ಪ್ರಲಾಪಿಸಿದರು.

ಹೆಂಗಸರೊಳಗೆ ಅಲ್ಲಿ ಸಂತೈಸುವವರು ಯಾರೂ ಇದ್ದಿಲ್ಲ. ಮಥುರಾನಾಥರೇ ದುಃಖವನ್ನು ತಡೆದುಕೊಂಡು ಧೈರ್ಯದ ಮಾತುಗಳನ್ನು ಹೇಳಿದರು. "ತುಳಸಿ, ನೀನೇ ಹೀಗೆ ಅತ್ತರೆ, ಮಗು ವಿಜಯ ಏನು ಮಾಡಿಯಾಳಮ್ಮಾ? ಸ್ವಲ್ಪ ಸಮಾಧಾನ ತಂದುಕೊ. ನಮ್ಮ ಭಾಗ್ಯ...." ಎಂದು ಬೆನ್ನು ತಿರುಗಿಸಿ ನಿಂತರು. ಅಲ್ಲಿ ಮಾಧವರಾಯರು ಸಣ್ಣ ಮಕ್ಕಳಿಗಿಂತಲೂ ಕಡೆಯಾಗಿ, "ಅಯ್ಯೋ! ನಾನೆಂಥಾ ಪಾಪಿ! ನಾನೆಷ್ಟು ಕಷ್ಟಪಡಿಸಿದೆ ನನ್ನ ಮಗಳನ್ನು! ಹೀಗಾದೀತೆಂದು ನಾನು ಕನಸಿನಲ್ಲೂ ನೆನಸಿರಲಿಲ್ಲ! ದೇವರೆ! ನನ್ನ ಮಗಳು ನನ್ನ ಮುಂದೆ ಹೋದಳು! ಜೀವನದಲ್ಲಿ ಸುಖ ಕಾಣದೆ ಮರೆಯಾದೆಯಲ್ಲಾ! ನನಗಿನ್ನು ದೇವರು ಯಾವ ಗತಿಯನ್ನು ಇಟ್ಟಿರುವನೊ! ನನ್ನನ್ನು ಕೊಂಡು ಹೋಗಬಾರದಾಗಿತ್ತೆ? ನನ್ನ ಮಗು....ನನ್ನ ಹೊಟ್ಟೆಯ ಮಗು ಈ ಚಿಕ್ಕ ಪ್ರಾಯದಲ್ಲಿ ಏನೆಲ್ಲಾ ಕಷ್ಟ ಅನುಭವಿಸಿತೊ!" ಎಂದು ಅತ್ತರು.

ವಿಜಯೆ ಅಳುತ್ತಿರಲು ಪದ್ಮಮ್ಮನೂ ತುಳಸಿಯೂ ಕೂಡಿ "ಬೇಡಮ್ಮ; ಅಳಬೇಡ. ನಾವೆಲ್ಲ ಇಲ್ಲವೆ ನಿನಗೆ. ಅವಳ ಆಯುಷ್ಯ ಮುಗಿಯಿತು, ಅವಳು....!" ಎಂದು ವಿಜಯೆಯನ್ನು ಶಾಂತಪಡಿಸುತ್ತಿದ್ದರೂ ಪದ್ಮಮ್ಮನ ಕಣ್ಣುಗಳಲ್ಲಿ ನೀರು ತುಂಬುತ್ತಲೆ ಇತ್ತು. "ನನಗಾಗಿ ನೀನು ಎಷ್ಟು ಕಷ್ಟ ಪಟ್ಟೆ ಅಮ್ಮಾ! ಅಜ್ಞಾತವಾಸವನ್ನು ಅನುಭವಿಸಿ, ಮನೆಯ ತೊತ್ತಾಗಿ ಜೀವಿಸಿದೆಯಲ್ಲಾ! ನನ್ನನ್ನೂ ನಿನ್ನೊಂದಿಗೆ!...." ಎಂದ ವಿಜಯಳ ಮಾತು ಕೇಳಿ ಯಾರಿಗೂ ದುಃಖ ತಡೆಯಲಿಲ್ಲ. "ಛಿ! ಹುಚ್ಚು ಹುಡುಗಿ!" ಎಂದು ವಿಜಯೆಯ ಬಾಯನ್ನು ಪದ್ಮಮ್ಮ ಮುಚ್ಚಿದರು.

ಮಥುರಾನಾಥರು ಡ್ರೈವರನ ಮೂಲಕ ಮಂಗಳೂರಿಗೊಂದು ಮದನ್ನ

" ಸ್ವಲ್ಪ ನಿಲ್ಲಿ, ಬಂದೆ."

" ನಾಳೆ ತುಳಸಿ ಬಂದಮೇಲೆ ಏನು ಮಾಡೋದು ? ಸ್ವರ್ಣ ಹೀಗಿದ್ದಾಳೆ. ಐದಾರು ದಿವಸದಲ್ಲಿ ಹೋಗಬಹುದೇನು ? "

" ನೋಡೋಣ. ಒಂದೆರಡು, ಕಡೆಗೆ ಒಂದಾದರೂ ಸ್ನಾನಾಗದೆ ಹೇಗೆ ಕರಕೊಂಡು ಹೋಗೋದು ? ಅಲ್ಲದೆ ಗಾಡೀಲಿ ಕೂತರೆ ಮೈ ಅಲುಗಿ ಏನಾದರೂ ಆದರೆ ? "

" ಹಾಗೆಂತ ಇಲ್ಲೇ ಕೂತುಕೊಳ್ಳೋದೆ ? ಅಲ್ಲಿ ಏನಾಯಿತೊ ಏನೊ ? "

" ಹಾಗಾದ್ರೆ ನಿಮ್ಮ ಮನಸ್ಸಿಗೆ ಬಂದಹಾಗೆ ಮಾಡಿ " ಎಂದು ಸಿಟ್ಟಿನಿಂದ ಅಂದರು ಕಾವೇರಮ್ಮ.

" ತುಳಸೀನೂ ಬರಲಿ; ಅನಂತರ ಸ್ವರ್ಣಳಿಗೂ ಒಂದು ಸ್ನಾನ ಆಗಲಿ. ಆಮೇಲೆ ಮೊದಲು ನಾನು ಸುಬ್ಬಯ್ಯ ಭಾವನನ್ನು ಕೂಡಿಕೊಂಡು ತುಳಸಿ ಸಮೇತ ಮಂಗಳೂರಿಗೆ ಹೋಗಿ ಆಮಂತ್ರಣ ಪತ್ರ ಕಳಿಸಿ, ಎಲ್ಲ ವ್ಯವಸ್ಥೆ ಮಾಡಿ ಹೊರಡೋದಕ್ಕೆ ಎರಡು ದಿನಾ ಇರೋವಾಗ ಪ್ರಕಾಶನೊಂದಿಗೆ ತುಳಸೀನ್ನ ಕಳಿಸಿಕೊಡ್ತೇನೆ. ಆಮೇಲೆ ನೀನು ಪ್ರಕಾಶನೊಂದಿಗೆ ಹೊರಟು ಅಲ್ಲಿಗೆ ಬಾ. ತುಳಸಿ ಇಲ್ಲೇ ಇರ್ಲಿ. ಅನಂತರ ಅಲ್ಲಿಯ ಕೆಲಸ ಮಾಡಿಕೊಂಡು ಎಲ್ಲರೂ ಹೊರಟು ಇಲ್ಲಿಗೆ ಬಂದರೆ ಅನುಕೂಲ ಆಗುತ್ತೆ. ಇಲ್ಲಿಂದ ಎಲ್ಲರೂ ಕೂಡಿಕೊಂಡು ಹೊರಟು ಮದುವೆ ಮುಗಿಸಿಕೊಂಡು ಬರಬಹುದು."

" ಅದೇ ಸರಿ ಕಾಣ್ತದೆ ನನಗೂ. ಆ ವೇಳೆಗೆ ಸ್ವರ್ಣ ಸುಧಾರಿಸಿಯಾಳು " ಎಂದರು ಕಾವೇರಮ್ಮ. ಈ ರೀತಿ ಮಾಧವರಾಯರು ಪತ್ನಿಯೊಂದಿಗೆ ಮಾತಾಡಿ ನಿಶ್ಚಯಿಸಿದರು.

ಬಲ್ಲವರು ಸಂಸಾರವನ್ನು ಸಾಗರಕ್ಕೆ ಹೋಲಿಸಿದುದರಲ್ಲಿ ತಪ್ಪೇನಿದೆ ? ಸಾಗರದಲ್ಲಿ ತೆರೆಗಳಿಗೆ ಅಂತ್ಯವೆಂಬುದು ಹೇಗೆ ಇಲ್ಲವೊ ಅಂತೇ ಈ ಸಂಸಾರವೆಂಬ ಸಾಗರದಲ್ಲಿ ಕಷ್ಟಸುಖಗಳೆಂಬ ಅಲೆಗಳಿಗೆ ಕಡಿಮೆಯಿಲ್ಲ. ಆ ಹೊಡೆತ ಸಹಿಸಿ ಸಹಿಸಿ ಕೊನೆಗೊಮ್ಮೆ ಆತನ ದೇಹ ಮಣ್ಣುಪಾಲಾಗಿ ಹೋಗುತ್ತದೆ.

ಜೀವನ ಹೀಗಿದ್ದರೂ ಮನುಷ್ಯನು ಹೊನ್ನು ಹೆಣ್ಣು ಮಣ್ಣಿಗಾಗಿ ಸದಾ ಆಸೆಬಡುತ್ತಿರುವನು. ನನ್ನದು, ನಾನು, ನನಗೆ ಎಂದು ಬಡಿದುಕೊಳ್ಳುತ್ತಿರುವನು. ಎಲ್ಲವೂ ಯಾರಿಗೊ ? ದೇವರೇ ಬಲ್ಲ ! ಆಸೆಯು ಮನುಷ್ಯನನ್ನೇ ನಾಶಮಾಡುತ್ತದೆ.

೩೦

ಚೆನ್ನೂರು ಕರುಣಾಕರರಾಯರ ಊರು. ಇವರು ಈ ಪ್ರಾಯದೊಳಗೆ ಆರು ಮದುವೆಯಾಗಿದ್ದಾರಂತೆ. ಆರನೆಯ ಕಿರಿಯ ನಲ್ಲೆ ಸುಲೋಚನೆ ಯೊಂದಿಗೆ ಲಲ್ಲೆಯಾಡುತ್ತಿದ್ದಾರಂತೆ. ಮೊದಲನೆಯ ಮತ್ತು ಎರಡನೆಯ ಹೆಂಡಿರಲ್ಲಿ ಹುಟ್ಟಿದ ಇಬ್ಬರು ಹೆಣ್ಣುಮಕ್ಕಳಲ್ಲದೆ ಗಂಡು ಸಂತಾನವಿಲ್ಲ. ಆರ ನೆಯ ಮದುವೆಯಾಗಿ ಐದು ವರ್ಷ ಕಳೆದು ಹೋಗಿದ್ದರೂ ಅವರ ಹೆಂಡತಿ ಇನ್ನೂ ಗರ್ಭ ಧರಿಸಿರಲಿಲ್ಲ. ಆದ್ದರಿಂದ ರಾಯರು ರುಕ್ಮಿಣಿ ಸತ್ಯಭಾಮೆ ಯರನ್ನು ಹೇಗಾದರೂ ಲಗ್ನಮಾಡಿಕೊಟ್ಟು, ಏಳನೆಯದಾಗಿ ಒಂದು ನೋಡ ಬೇಕು ಎಂಬ ಯೋಚನೆಯಲ್ಲಿದ್ದಾರೆ.

ಕಾವೇರಮ್ಮನಂದು ಸುಲೋಚನೆಯನ್ನು ನೋಡಿ ಸಂತೋಷದಿಂದ ಮಾತನಾಡಿದರು. ತಮ್ಮ ಮಗ ಪ್ರಕಾಶನಿಗೆ ಈ ಹುಡುಗಿಯನ್ನೇ ತಂದು ಕೊಳ್ಳಬೇಕೆಂದು ಭಾವಿಸಿದ್ದರಂತೆ. ಆಗ, “ ಹುಡುಗಿಯರಿಬ್ಬರೂ ಶಾಲೆಗೆ ಹೋಗಿ ದ್ದಾರೆ; ಬರೋ ವೇಳೆ ಆಯಿತು; ಈಗ ಬಂದಾರು, ಕೂತುಕೊಳ್ಳಿ ” ಎಂದು ಸುಲೋಚನೆ ಅಡಿಗೆಮನೆಗೆ ಉಪಾಹಾರ ತರಲು ತೆರಳಿದಾಗ ಕಾವೇರಮ್ಮನಿಗೆ ಸಿಡಿಲು ಬಡಿದಂತಾಯಿತು! ಕಾವೇರಮ್ಮ ಸುಲೋಚನೆಯನ್ನು ರಾಯರ ಮಗಳೆಂದೇ ಭಾವಿಸಿದ್ದರು!

ತುಂಬಿತುಳುಕುತ್ತಿದ್ದ ಯೌವನ, ಅರಳಿದ ದುಂಡು ಮುಗ್ಧಮುಖ, ಮಲ್ಲಿಗೆಯ ಮೊಗ್ಗಿನಂತೆ ತೇಜಃಪುಂಜವಾದ ದಂತಪಂಕ್ತಿಗಳು. ಕಣ್ಣುಗಳ ಹೊಳಪಿನಿಂದ ಹರಿಣಾಕ್ಷಿಯೆನಬಹುದಾಗಿತ್ತು. ಶರೀರ ಹೂವಿನಂತೆ ಕೋಮಲ ವಾಗಿತ್ತು. ಮರ್ಯಾದಶೀಲೆ, ಮೃದು ಮಾತು, ಸದಾ ಸಂತೋಷದ ಮೆಲು ನಗೆ ಅವಳ ಮುಖದಲ್ಲಿ ಆಡುತ್ತಿತ್ತು. ಸುಲೋಚನೆ ರಾಯರ ಪತ್ನಿಯೆಂದು ಕೇಳಿಬರಲು ಕಾವೇರಮ್ಮನಿಗೆ ವಿಸ್ಮಯವಾಯಿತು. ಇಷ್ಟು ಸುಂದರವಾದ ಹುಡುಗಿ ರಾಯರಿಗೆ ಎಲ್ಲಿಂದ ದೊರೆತಳು ?

ಸುಲೋಚನೆಯ ತಂದೆತಾಯಿಗಳು ಬಹಳ ಚಿಕ್ಕ ವಯಸ್ಸಿನಲ್ಲಿಯೆ ತೀರಿಹೋಗಿದ್ದರು. ಸುಲೋಚನೆ ಆಗ ಮಾವನ ಆರೈಕೆಗೆ ಒಳಗಾದಳು. ಅವರಿಗೆ ದುಡ್ಡಿನ ಮೇಲೆ ಆಸೆ ಹೆಚ್ಚು. ಸುಲೋಚನೆ ವಿವಾಹಪ್ರಾಯಳಾಗಲು ವರದಕ್ಷಿಣೆ ಬೇಡವೆಂದು ಬಂದ ವರನಿಗೆ ಸುಲೋಚನೆಯನ್ನು ಕೊಡಲು ಸಿದ್ಧ

ವರದಕ್ಷಿಣೆ ಬೇಡವೆಂದು ಬಂದ ವರನಿಗೆ ಸುಲೋಚನೆಯನ್ನು ಕೊಡಲು ಸಿದ್ಧ